ಕರ್ನಾಟಕ ಸರಕಾರ





ಸಂಕೀರ್ಣ

# ಕಾಲ

ಶಿವರಾಂ (ರಾಶಿ)







ಪ್ರಥಮ ವಿಶ್ವ ಕನ್ನಡ ಸಮ್ಮೇಳನ ಸಾಹಿತ್ಯ ಮಾಲೆ 99

ಶ್ರೀ ಕಾಶೀ ಜಗದ್ಗುರು ವಿಶ್ವಾರಾಧ್ಯ ಜ್ಞಾನಸಿಂಹಾಸನದ
ಜ್ಞಾನ ಮಂದಿರಕ್ಕೆ ದಾವಣಗೆರೆ ವೇ|| ಬಿ. ಎಂ. ಚನ್ನಬಸಯ್ಯನವರು
ಸಮರ್ಪಿಸಿದ್ದು.

ತಾ. 20-1-1988 ನೇ ಬುಧವಾರ

# ಕಾಲ

ಎಂ. ಶಿವರಾಂ




ವಿಶ್ವ ಕನ್ನಡ ಸಮ್ಮೇಳನ
14–3 ಎ, ನೃಪತುಂಗ ರಸ್ತೆ
ಬೆಂಗಳೂರು-560 002

KAALA a book by Dr. M. Shivaram (Rashi) Published by K. Jayacharya, K.A.S, Additional Director, Directorate of Kannada and Culture (Viswa Kannada Sammelana) 14/3 A, Nrupathunga Road, Bangalore-2. Pages 160+IV+XXIV – 5000 copies.







Second Edition 1983



ಬೆಲೆ. ರೂ. 2

ಮುದ್ರಕರು :

ಶಾಲಿವಾಹನ ಪ್ರಿಂಟರ್ಸ್,
52/30 ಕಾರ್ಟ್ ಸ್ಟ್ಯಾಂಡ್ ರಸ್ತೆ,
ಜಾಲಿ ಮೊಹಲ್ಲಾ,
ಬೆಂಗಳೂರು-560 053.

ಆರ್. ಗುಂಡೂರಾವ್
ಮುಖ್ಯಮಂತ್ರಿ



ವಿಧಾನಸೌಧ
ಬೆಂಗಳೂರು

ದಿನಾಂಕ : ೧೮-೯-೧೯೮೨

## ಸಂಕಲ್ಪ....ಸಿದ್ಧಿ

ಸುಮಾರು ಎರಡು ಸಾವಿರ ವರ್ಷಗಳಿಗೂ ಹೆಚ್ಚು ದೀರ್ಘವಾದ ಐತಿಹಾಸಿಕ ಪರಂಪರೆ ಕನ್ನಡ ನಾಡಿನದು. ಈ ಅವಧಿಯಲ್ಲಿ ಕನ್ನಡ ಭಾಷೆ, ಸಾಹಿತ್ಯ, ಕಲೆ, ಸಂಸ್ಕೃತಿಗಳು ಸಮೃದ್ಧವಾಗಿ, ಶ್ರೀಮಂತವಾಗಿ ಬೆಳೆದು, ಈ ನಾಡಿನ ಇತಿಹಾಸವನ್ನು ಭವ್ಯವಾಗಿಸಿವೆ.

ಒಂದು ನಾಡಿನ ಅಂತಃಸತ್ವ ಅಡಕವಾಗಿರುವುದೇ ಅದರ ಸಾಂಸ್ಕೃತಿಕ ನೆಲೆ ಗಟ್ಟಿನಲ್ಲಿ. ಈ ನೆಲೆಗಟ್ಟು ಭದ್ರವಾಗಿರಬೇಕಾದರೆ ಸಾಂಸ್ಕೃತಿಕ ಪರಂಪರೆ ಉತ್ಕರ್ಷಕ್ಕೆ ಏರಲು, ಔನ್ನತ್ಯ ಸಾಧಿಸಲು ನಿರಂತರವಾಗಿ ಪ್ರಯತ್ನಗಳು ನಡೆಯಬೇಕು.

ಭಾರತೀಯ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿ ಬೆಸೆದುಕೊಂಡಿದ್ದರೂ ಕನ್ನಡ ತನ್ನದೇ ಆದ ವಿಶಿಷ್ಟ ಸಂಸ್ಕಾರಗಳನ್ನು, ಸಂಸ್ಕೃತಿಯನ್ನು ಹೊಂದಿದೆ.

ಕನ್ನಡ ನಾಡಿನ ಭವ್ಯ ಪರಂಪರೆಯನ್ನು ಜಾಗತಿಕ ಹಿನ್ನೆಲೆಯಲ್ಲಿ ಚಿತ್ರಿಸಿ, ವಿಶ್ವಕ್ಕೆ ಕನ್ನಡ ಸಂಸ್ಕೃತಿಯ ಹಿರಿಮೆಯನ್ನು ಸಾರುವ ಸದುದ್ದೇಶದಿಂದ ಪ್ರಥಮ ವಿಶ್ವ ಕನ್ನಡ ಸಮ್ಮೇಳನವನ್ನು ಕರ್ನಾಟಕದ ಪ್ರಮುಖ ಸಾಂಸ್ಕೃತಿಕ ಕೇಂದ್ರವಾದ ಮೈಸೂರಿನಲ್ಲಿ ಏರ್ಪಡಿಸಿದ್ದೇವೆ. ಇದೊಂದು ಚರಿತ್ರಾರ್ಹವಾದ ಸಂದರ್ಭವೆಂದು ನನ್ನ ನಂಬಿಕೆ. ಈ ಚರಿತ್ರಾರ್ಹ ಸಮ್ಮೇಳನ ಸಾರ್ಥಕವಾಗಲು ಮತ್ತು ಬಹುಕಾಲ ಇದರ ಸವಿ ನೆನಪು

ಉಳಿಯಲು ಹಲವು ಯೋಜನೆಗಳನ್ನು ರೂಪಿಸಿದ್ದೇವೆ. ಕನ್ನಡದ ಖ್ಯಾತ ಲೇಖಕರ ಮಹತ್ವದ ಕೃತಿಗಳನ್ನು ಪ್ರಕಟಿಸಿ, ಸುಲಭ ಬೆಲೆಗೆ ಒದಗಿಸುವುದು ಈ ಯೋಜನೆಗಳಲ್ಲಿ ಒಂದು. ಇದರಂತೆ ಒಂದುನೂರಾ ಎರಡು ಕೃತಿಗಳನ್ನು, ಹದಿನೇಳು ಸಂಕಲನಗಳನ್ನು ಆಯ್ಕೆ ಮಾಡಿ ಪ್ರಕಟಿಸುತ್ತಿದ್ದೇವೆ. ಈ ಸಾಹಿತ್ಯ ಮಾಲಿಕೆಯಲ್ಲಿ ಕವನ, ಕಾದಂಬರಿ, ನಾಟಕ, ವಿಚಾರ ಸಾಹಿತ್ಯದ ಕೃತಿಗಳಲ್ಲದೆ ಕನ್ನಡ ಸಾಹಿತ್ಯದ ಸತ್ವವನ್ನು ವೈವಿಧ್ಯವನ್ನು ಪ್ರತಿಫಲಿಸುವ ವಿವಿಧ ಬಗೆಯ ಸಂಕಲನಗಳು ಇವೆ. ಅನ್ಯ ಭಾಷಿಕರಿಗೆ ಕನ್ನಡ ಸಾಹಿತ್ಯದ ಕಂಪು ಬೀರುವಂತೆ ಕೆಲವು ಆಯ್ದ ಕೃತಿಗಳ ಇಂಗ್ಲಿಷ್ ಭಾಷಾಂತರವನ್ನು ಕೂಡ ಪ್ರಕಟಿಸುತ್ತಿದ್ದೇವೆ. ಸಾಹಿತ್ಯ ಮಾಲೆಯ ಈ ಕೃತಿರತ್ನಗಳನ್ನು ಸಹೃದಯವಾಚಕರು ಓದಿ ಆಸ್ವಾದಿಸಿದರೆ ನಮ್ಮ ಶ್ರಮ ಸಾರ್ಥಕ; ಸಮ್ಮೇಳನ ಅರ್ಥಪೂರ್ಣವಾಗುವುದೆಂದು ನನ್ನ ಅಭಿಲಾಷೆ.

ಈ ಕೃತಿಗಳನ್ನು ಆಯ್ಕೆ ಮಾಡುವಲ್ಲಿ ಸಾಹಿತ್ಯ ಸಮಿತಿಯ ಪರಿಣತ ಸದಸ್ಯರು ಸಾಕಷ್ಟು ಶ್ರಮಿಸಿದ್ದಾರೆ. ಸುದೈವದಿಂದ ಕನ್ನಡದಲ್ಲಿ ಪ್ರತಿಭಾವಂತ ಲೇಖಕರ ಅಮೂಲ್ಯ ಕೃತಿಗಳಿಗೆ ಕೊರತೆ ಇಲ್ಲ. ಈ ಹಿನ್ನೆಲೆಯಲ್ಲಿ ನಿಶ್ಚಿತ ಸಂಖ್ಯೆಯಲ್ಲಿ ಸಾಹಿತ್ಯ ಕೃತಿಗಳನ್ನು ಆಯ್ಕೆಮಾಡುವುದು ಸುಲಭದ ಕೆಲಸವಲ್ಲ. ಆದರೂ ಬಹು ಜನರಿಗೆ ಒಪ್ಪಿಗೆಯಾಗುವಂತೆ ಸಾಹಿತ್ಯ ಸಮಿತಿ ತನ್ನ ಕರ್ತವ್ಯ ನಿರ್ವಹಿಸಿದೆಯೆಂದು ಭಾವಿಸುತ್ತೇನೆ. ಈ ಸಮಿತಿಗೆ ಕೃತಜ್ಞತೆಗಳನ್ನು ಅರ್ಪಿಸುವುದು ನನ್ನ ಕರ್ತವ್ಯ. ಈ ಕೃತಿಗಳನ್ನು ಪ್ರಕಟಿಸಲು ಅನುಮತಿ ನೀಡಿ, ಲೇಖಕರು ಉಪಕರಿಸಿದ್ದಾರೆ. ಅವರ ಉದಾರ ಉಪಕಾರವನ್ನು ಈ ಸಂದರ್ಭದಲ್ಲಿ ಕೃತಜ್ಞಾಪೂರ್ವಕವಾಗಿ ನೆನೆಯುತ್ತೇನೆ.

ಈ ಗ್ರಂಥಮಾಲೆ ಕನ್ನಡಿಗರ ಮನಸ್ಸನ್ನು ತಟ್ಟಿ, ಹೃದಯಸ್ಪಂದನ ಮಾಡಿದರೆ ನಮ್ಮ ಸಂಕಲ್ಪಕ್ಕೆ ಸಿದ್ಧಿ ದೊರಕಿದಂತೆ. ಈ ಪ್ರಯತ್ನ 'ನಭೂತೋ' ಎಂದು ಹೆಮ್ಮೆಯಿಂದ ಹೇಳಬಲ್ಲೆ. ತಾಯಿ ಭುವನೇಶ್ವರಿ ಈ ಪ್ರಯತ್ನವನ್ನು ಹರಸಿ, ಮಂಗಳವುಂಟುಮಾಡಲೆಂದು ವಿನೀತ ಪ್ರಾರ್ಥನೆ ಸಲ್ಲಿಸುತ್ತೇನೆ.

ಆ. ಗುಂಡೂರಾವ್

ಮುಖ್ಯಮಂತ್ರಿ

# ವಿಷಯಸೂಚಿ

# ಪ್ರಸ್ತಾವನೆ

## 1. ಕಾಲ ಎಂದರೇನು ?

ಎರಡು ಘಟನೆಗಳ ಅಂತರವೇ ಕಾಲ. ಘಟನೆಗಳೆರಡು ನಿಶ್ಚಿತವಾಗಿ ನಿರಂತರವಾಗಿ ನಡೆಯುತ್ತಿದ್ದರೆ, ಅವುಗಳ ಅಂತರದಿಂದ ಕಾಲವನ್ನು ಅಳೆಯಬಹುದು. ಈ ರೀತಿಯಲ್ಲಿಯೇ ಮಾನವರು ಇಂದು ಕಾಲವನ್ನು ಅಳೆಯುವುದು. ಉದಾಹರಣೆಗೆ : ಗಡಿಯಾರವನ್ನು ನೋಡಿ, 'ನಾಲ್ಕು ಗಂಟೆ ಆಗಿಹೋಯಿತಪ್ಪಾ' ಎನ್ನುತ್ತೇವೆ. ಹಾಗೆಂದರೇನು ?

ನಮ್ಮೂರಿನಲ್ಲಿ ಸೂರ್ಯನು ನೆತ್ತಿಯ ಮೇಲೆ ಸರಿಯಾಗಿ ಬಂದ. ಆಗ ನನ್ನ ನೆರಳು ತುಂಬಾ ಚಿಕ್ಕದು. ಅದೊಂದು ಘಟನೆ. ನಾಳೆಯ ದಿನವೂ ಇದೇ ಘಟನೆಯು ನಡೆಯುತ್ತದೆ. ಲಕ್ಷಾಂತರ ವರ್ಷಗಳಿಂದ ಪ್ರತಿದಿನವೂ, ಒಮ್ಮೆಯೂ ತಪ್ಪದೆ ಈ ಘಟನೆಗಳು ನಡೆಯುತ್ತಿವೆ. ಇದನ್ನು ವಂಸಗಂಡ ಮುನಿಗರು ಈ ಘಟನೆಗಳೆರಡರ ಅಂತರವನ್ನು ೨೪ ತಾಸುಗಳು ಅಥವಾ ಗಂಟೆಗಳು ಎಂದು ಭಾಗಿಸಿದರು. ಒಂದೊಂದು ತಾಸನ್ನು ೬೦ ನಿಮಿಷಗಳು ಎಂದು ಮರು ವಿಭಾಗ ಮಾಡಿದರು. ಒಂದೊಂದು ನಿಮಿಷವನ್ನೂ ೬೦ ಸೆಕೆಂಡುಗಳು ಎಂದು ಇನ್ನೂ ಸೂಕ್ಷ್ಮವಾದ ವಿಭಾಗವನ್ನು ಮಾಡಿದರು. ದಿನ ಜೀವನದಲ್ಲಿ ಈ ವಿಭಾಗಗಳ ಅಗತ್ಯವು ಹೆಚ್ಚಾಗಿತ್ತು. ಸೆಕೆಂಡಿಗೆ ಒಂದಕ್ಕೂ ತುಸು ಹೆಚ್ಚು ಸಲ ನಾಡಿಯು ಬಡಿಯುತ್ತದೆ. ನಾಲ್ಕು ಸೆಕೆಂಡಿಗಳಿಗೊಮ್ಮೆ ಉಚ್ಛ್ವಾಸ, ನಿಶ್ವಾಸಗಳನ್ನು ನಡೆಸುತ್ತೇವೆ. ಹತ್ತು ನಿಮಿಷಗಳಲ್ಲಿ ಹಾಲನ್ನು ಕಂದಿಸಬಹುದು. ಒಂದು ತಾಸಿನಲ್ಲಿ ಮೂರು ಮೈಲು ನಡೆಯಬಹುದು. ಇತ್ಯಾದಿ.

ಆದರೆ ಇಂದು ವಿಜ್ಞಾನದಲ್ಲಿ ಸೆಕೆಂಡಿನ ನೂರನೇ ಒಂದು ಭಾಗ, ಹತ್ತು ಸಾವಿರದಲ್ಲಿ ಒಂದು ಭಾಗ, ಇಂತಹ ಸೂಕ್ಷ್ಮವಾದ ಅಳತೆಗಳನ್ನು ಮಾಡುವ ಅಗತ್ಯ ಬಂದಿದೆ. ಆದುದರಿಂದ ಅವರುಗಳು ಅಂತಹ ಅತಿ ಸೂಕ್ಷ್ಮವಾದ ಕಾಲವನ್ನು ಗುರುತಿಸುವ 'ಗಡಿಯಾರ' ಗಳನ್ನು ಸೃಷ್ಟಿಸಿಕೊಂಡಿದ್ದಾರೆ.

ಲಕ್ಷಾಂತರ ವರ್ಷಗಳನ್ನು ಅಳೆಯುವ ಅಗತ್ಯವೂ ವಿಜ್ಞಾನಿಗಳಿಗಿದೆ. ಆದುದರಿಂದಲೇ Light year ಇತ್ಯಾದಿ ಅಳತೆಗೋಲುಗಳನ್ನು ನಿರ್ಮಿಸಿ ಕೊಂಡಿದ್ದಾರೆ.

ನಾಲ್ಕುಗಂಟೆ 4 P. M. ಎಂದರೆ:- 4, Post Meridian : ನೆತ್ತಿಯ ಮೇಲುಗಡೆಗೆ ಸೂರ್ಯನು ಬಂದಾದ ಮೇಲೆ ೪ ತಾಸುಗಳು ಆಗಿದೆ, ಎಂದು. ಅದೇ ರೀತಿಯಲ್ಲಿ 4 A. M. ಎಂದರೆ ಮಧ್ಯರಾತ್ರಿಯ ನಂತರ ೪ ತಾಸುಗಳಾಗಿವೆ ಎಂದರ್ಥ.

ಚಂದ್ರನ ಉಬ್ಬುವಿಕೆಯೂ ಇಳಿಯುವಿಕೆಯೂ ನಿರಂತರವಾಗಿ ನಡೆಯುತ್ತಿರುವ ಘಟನೆಗಳು. ಸಮುದ್ರದ ಉಬ್ಬರವಿಳಿತಗಳಿಗೂ ಚಂದ್ರನ ಉಬ್ಬರ ವಿಳಿತಕ್ಕೂ ನೇರ ಸಂಬಂಧವಿರುವುದನ್ನು ಸಮುದ್ರ ತೀರದಲ್ಲಿ ವಾಸಿಸುವ ಮೀನುಗಾರರು ಕಂಡಿದ್ದರು. ಮೀನುಗಾರರಿಗೆ ಸಮುದ್ರದ ಉಬ್ಬರವಿಳಿತಗಳ ಅರಿವು ಅತ್ಯಗತ್ಯ. ಆದುದರಿಂದ ಪ್ರಪಂಚದ ಎಷ್ಟೋ ಕಡೆ ಮೀನುಗಾರರು ಚಂದ್ರನ ಉಬ್ಬರವಿಳಿತಗಳನ್ನು ಕಾಲದ ಅಳೆಯುವಿಕೆಗೆ ಬಳಸುತ್ತಿದ್ದರು. ಸೂರ್ಯನ ಚಲನವಲನಗಳಿಂದ ಕಾಲವನ್ನವರು ಅಳೆಯುತ್ತಿರಲಿಲ್ಲ.

ಆರೋಗ್ಯವಂತನ ನಾಡಿಯ ಬಡಿತವೂ ಸಾಕಷ್ಟು ನಿಶ್ಚಿತವಾದುದೇ, ನಾಡಿಯ ಬಡಿತವನ್ನು ಕಾಲದ ಅಳೆಯುವಿಕೆಗೆ ಬಳಸಬಹುದು. ಇಗರ್ಜಿಯಲ್ಲಿ ತೂಗು ಬಿದ್ದಿದ್ದ ತೂಗು ದೀಪವು ಗಾಳಿಯ ಹಗುರು ಬೀಸುವಿಕೆಯಿಂದ ವಾಲಾಡುತ್ತಿತ್ತು. ಅದರ ವಾಲಾಟವನ್ನು ಗೆಲಿಲಿಯೋ, ತನ್ನ ನಾಡಿ ಬಡಿತದಿಂದ ಅಳೆದ. ಅವನ ಕಾಲದಲ್ಲಿ ಗಡಿಯಾರಗಳು ಸೃಷ್ಟಿಸಲ್ಪಟ್ಟಿರಲಿಲ್ಲ. ಮೂರಡಿ ಅಡ್ಡಗಲ ವಾಲಾಡುವ ತೂಗು ದೀಪವು; ಅರ್ಧಡಿ ಮಾತ್ರ ಅಡ್ಡಾಡುವ ತೂಗು ದೀಪವು; ಇವೆರಡೂ ಅವನ ಮೂರು ನಾಡಿ ಬಡಿತದಷ್ಟು ಕಾಲವನ್ನೇ ತೆಗೆದುಕೊಳ್ಳುತ್ತಿದ್ದುದನ್ನು ಅವನು ಗಮನಿಸಿದ. ಆಶ್ಚರ್ಯವಾಯಿತು ಅವನಿಗೆ. ಮೂರಡಿಯಷ್ಟು ದೂರ ಅಡ್ಡಾಡುವುದಕ್ಕೆ ಹೆಚ್ಚು ಕಾಲಬೇಕಲ್ಲವೇ? ಈ ಸಮಸ್ಯೆಯನ್ನು ಗೆಲಿಲಿಯೋ ವಿಶ್ಲೇಷಿಸತೊಡಗಿದ. ಮೂರಡಿ ಅಡ್ಡಾಡುವಾಗ ವೇಗವು ಹೆಚ್ಚು. ಅರ್ಧಡಿ ಅಡ್ಡಾಡುವಾಗ ವೇಗವು ಕಡಿಮೆ ಎಂಬುದನ್ನು ಸಿದ್ಧಾಂತ ಮಾಡಿದ. ಅನಂತರ ತೂಗುದೀಪಗಳಂತೆಯೇ

(Pendulum) ಪೆಂಡುಲಮ್ಮುಗಳನ್ನು ಅವ ಕಾಲದ ಅಳೆಯುವಿಕೆಗೆ ಬಳಸಿ ಕೊಂಡ. ಮೊದಮೊದಲು ರಚಿಸಲ್ಪಟ್ಟ ಗಡಿಯಾರಗಳು ಪೆಂಡುಲಂ ಗಡಿಯಾರಗಳೇ.

ಸುರ್ಯೋದಯ ಸೂರ್ಯಾಸ್ತವು, ಇವುಗಳನ್ನು ನಮ್ಮ ಹಿರಿಯರು ಕಾಲದ ಅಳತೆಗೆ ಬಳಸಿಕೊಂಡಿದ್ದರು. ನೇರನೆ ನೆಟ್ಟ ಕೋಲೊಂದರ ನೆರಳು. ಸೂರ್ಯನ ಚಲನಕ್ಕೆ ಅನುಗುಣವಾಗಿರುತ್ತದೆ. ಈ ವಿಷಯವನ್ನು ಕಾಲದ ಅಳೆಯುವಿಕೆಗೆ ನಮ್ಮ ಹಿರಿಯರು ಬಳಸಿಕೊಂಡಿದ್ದರು. ಖಗೋಳಶಾಸ್ತ್ರದಲ್ಲಿ ವಿಸ್ಮಯಂಕರವಾದ ಅದ್ಭುತ ಪ್ರಗತಿಯನ್ನು ಸಾಧಿಸಿದ್ದರು. ಕಾಲದ ಅಳತೆಗೆ ನಮ್ಮ ಪೂರ್ವಜರು ಸೃಷ್ಟಿಸಿಕೊಂಡಿದ್ದ ಅಳತೆಗಳಲ್ಲಿ ಎರಡನ್ನು ಇಲ್ಲಿ ಉದಹರಿಸುತ್ತೇನೆ. ಅತಿ ಪುಟ್ಟ ಕಾಲದ ಅಳತೆ 'ತ್ರುತಿ' ಎಂಬುದು. ಸೆಕೆಂಡಿನ ೩೩,೭೫೦ರ ಭಾಗಗಳಲ್ಲಿ ಒಂದನ್ನು 'ತ್ರುತಿ' ಎಂದಿದ್ದರು. ಅಗತ್ಯ ವಿದ್ದುದರಿಂದಲೇ ಅವರು ಈ ಅಳತೆಯನ್ನು ನಿರ್ಮಿಸಿಕೊಂಡಿದ್ದರು. ಬಹಳ ದೀರ್ಘವಾದ ಕಾಲದ ಅಳತೆಯಲ್ಲಿ 'ಕಲ್ಪ' ಎಂಬುದೊಂದು. ೪೩ ಲಕ್ಷ ೨೦ ಸಾವಿರ ವರ್ಷಗಳು ಒಂದು ಕಲ್ಪ. ಕಲ್ಪಗಳಲ್ಲಿ ಕಾಲವನ್ನು ಅಳೆಯುವುದು. ಖಗೋಳ ಶಾಸ್ತ್ರಕ್ಕೆ, ಹಾಗೂ ಜ್ಯೋತಿಷ್ಯ ಶಾಸ್ತ್ರಕ್ಕೆ ಅಗತ್ಯವಾಗಿತ್ತು.

ಅಂದರೆ ನಿಶ್ಚಿತವಾದ ಘಟನೆಗಳೆರಡರ ಅಂತರವೇ ಕಾಲ. ಅನಿಶ್ಚಿತ ವಾದ ಘಟನೆಗಳೆರಡರ ಅಂತರವನ್ನು ಕಾಲದ ಅಳೆಯುವಿಕೆಗೆ ಬಳಸಲಾಗುವುದಿಲ್ಲ ವೆಂಬುದು ಸ್ವತಃ ಸಿದ್ಧ.

ಘಟನೆಗಳೆರಡರ ಅಂತರವೇ ಕಾಲ ಎಂದ ಮೇಲೆ ಘಟನೆಗಳಾವುದೂ ಆಗದೆ ಇದ್ದರೆ, ಕಾಲವೇ ಇಲ್ಲ ಎನ್ನಬೇಕು. ಪ್ರಪಂಚದಲ್ಲಿ ಘಟನೆಗಳಾವು ದಾದರೂ ಆಗುತ್ತಲೇ ಇರುತ್ತವೆ. ಅಷ್ಟೇ ಸಾಲದು. ಅವು ನಮ್ಮ ಗಮನಕ್ಕೆ ಬರಲೂ ಬೇಕು. ಆಗಲೇ ಕಾಲದ ಅರಿವೂ ನಮಗಾಗುವುದು. ಬದುಕಿರುವ ವರೆಗೂ ನಮ್ಮ ದೇಹದ ಅಂಗಾಂಗಗಳಲ್ಲಿ ಯಾವುದಾದರೂ ಘಟನೆಗಳು ಆಗುತ್ತಲೇ ಇರುತ್ತವೆ. ಹಾಗಾಗಿ ಹೊರ ಪ್ರಪಂಚದಿಂದ ಮನಸ್ಸನ್ನು ದೂರ ಮಾಡಿದರೂ, ಕಾಲದ ಅರಿವು ಉಂಟಾಗಿಯೇ ಆಗುತ್ತದೆ. ನಾಡಿಯ ಬಡಿತ, ಉಸಿರಾಡುವಿಕೆ, ಹಸಿವು, ದಾಹ, ನಿದ್ರೆ, ಕಾಮ, ಇತ್ಯಾದಿ ಘಟನೆಗಳು ತೋರುತ್ತಲೇ ಇರುತ್ತವೆ. ಕಾಲವು ಹರಿದಂತೆ ಭಾಸವಾಗುತ್ತದೆ. ಇವೆಲ್ಲವೂ

ನಿಂತುಹೋದಾಗ, ಸ್ಥಬ್ಧವಾದಾಗ, ಕಾಲವು ಸರಿಯುವುದು ಗಮನಕ್ಕೆ ಬರಲು ಸಾಧ್ಯವಿಲ್ಲ. ಇವೆಲ್ಲವೂ ನಿಂತಾಗ ಸಾವು ಮೂಡಿದಂತೆ. ಸತ್ತ ಮೇಲೆ ನಮಗೆ ಕಾಲದ ಅರಿವೂ ಇರುವುದಿಲ್ಲ; ಆದುದರಿಂದಲೇ ಏನೋ, ಕಾಲವಾದರು, ಎಂದರೆ ಸತ್ತರು ಎಂಬ ಅರ್ಥವೂ ಇರುವುದು.

## 2 ಕಾಲದ ಚಲನ

ಕಾಡ ಹರಟೆಯನ್ನು ಇಷ್ಟಮಿತ್ರರೊಂದಿಗೆ ಹೊಡೆಯುತ್ತಾ ಕುಳಿತರೆ ಗಂಟೆಗಳು ಸಾಗಿದರೂ ನಮ್ಮ ಗಮನಕ್ಕೆ ಬರುವುದೇ ಇಲ್ಲ. ನಮಗಿಂತ ಸುಖಿ ವಾಗಿರುವವರನ್ನು ಕಂಡು, ಅವರನ್ನು ಕಂಡಾಪಟ್ಟೆ ಟೀಕಿಸುವಾಗ ಎಂತದೋ ಸುಖವಾಗುತ್ತದೆ. ಆಗಲೂ ಕಾಲವು ಸರಿದುದು ಅರಿವಿಗೆ ಬರುವುದೇ ಇಲ್ಲ. ಅಂದರೆ ಮನಸ್ಸಿಗೆ ಸುಖವನ್ನು ನೀಡುವ ಘಟನೆಗಳು ನಡೆಯುತ್ತಿದ್ದರೆ ಕಾಲವು ಸಾಗಿದಂತೆ ಅನಿಸುವುದೇ ಇಲ್ಲ. ಆದರೆ ಗಡಿಯಾರದ ಪ್ರಕಾರ ತಾಸುಗಳು ಮುಂದೆ ಮುಂದೆ ಸಾಗಿರುತ್ತವೆ.

ಹಲ್ಲು ನೋವು ಬಂದಿತು ಅನ್ನಿ. ನೋವಿನಿಂದ ನರಳುವಾಗ ಪ್ರತಿ ಕ್ಷಣವೂ ಯುಗದಂತೆ ಭಾಸವಾಗುತ್ತದೆ. ಗಡಿಯಾರದ ಪ್ರಕಾರ ಕೇವಲ ಅರ್ಧಗಂಟೆ, ಒಂದು ಗಂಟೆಯಷ್ಟು ಮಾತ್ರ ಆಗಿರುತ್ತದೆ. ಬೇಸರವು ಮನಸ್ಸಿನಲ್ಲಿ ಮೂಡಿದಾಗಲೂ ಹೀಗೆಯೇ ಆಗುತ್ತದೆ. ನಿಸ್ಸಾರವಾದ ಭಾಷಣವನ್ನು ಕೇಳುವಾಗ, ಕೇಳಲೇಬೇಕಾದಾಗ, ಐದ್ಯದು ನಿಮಿಷಗಳೂ ತಾಸುಗಳಂತೆ ಭಾಸವಾಗುತ್ತದೆ. ಅಂದರೆ ಮನಸ್ಸಿಗೆ ದುಃಖ ಅಥವಾ ಬೇಸರ ಬರುವಂತಾದರೆ, ಕಾಲವು ನಿಧಾನವಾಗಿ ಸಾಗುತ್ತಿರುವುದು ಸ್ಪಷ್ಟವಾಗಿ ಗೊತ್ತಾಗುತ್ತದೆ.

ಸಾಮಾನ್ಯ ಜೀವನದ ನಿತ್ಯ ಅನುಭವದಲ್ಲಿ, ಕಾಲವು ಒಂದು ಅನಂತ ವಾಹಿನಿ. Time and Tide wait for no man. ನಿರ್ದಾಕ್ಷಿಣ್ಯವಾಗಿ ಕಾಲವು ಹರಿಯುತ್ತಲೇ ಇರುತ್ತದೆ. ಅದೆಂದೂ ನಿಲ್ಲುವುದಿಲ್ಲ. ಮಂದಗತಿಯಲ್ಲಿ ಅಥವಾ ವೇಗವಾಗಿ ಹರಿಯುವುದಿಲ್ಲ. ಒಂದೇ ನಿರ್ದಿಷ್ಟವಾದ ವೇಗದಲ್ಲಿ ಸರಿಯುತ್ತದೆ. ಹಿಂದಕ್ಕನಕ ಸರಿಯಲಾರದು. ಇವೆಲ್ಲಾ ಸಾಮಾನ್ಯವಾಗಿ ಎಲ್ಲರೂ ನಂಬಿರುವ ವಿಷಯಗಳು. ಪ್ರಪಂಚದ ಎಲ್ಲಾ ದೇಶಗಳಲ್ಲಿಯೂ.

ಎಲ್ಲಾ ಕಾಲಗಳಲ್ಲಿಯೂ, ಮನನಿಗರು ಹಾಗೂ ಕವಿಗಳು, ಕಾಲವು ಒಂದು ಅನಂತವಾಹಿನಿ ಎಂದು ಪದೇ ಪದೇ ಹಾಡಿದ್ದಾರೆ. ಎಲ್ಲರ ಅನುಭವವೂ ಇದೇ ಆದ್ದರಿಂದ, ಎಲ್ಲರೂ ಇದನ್ನು ನಂಬಿದ್ದಾರೆ.

ಆದರ ಇದು ಸರಿಯಾದುದೇ ? ನಮ್ಮ ಅನುಭವವು ಕಾಲಕಾಲದಲ್ಲಿ ವ್ಯತ್ಯಾಸ ಹೊಂದಿ ಕಾಲಗತಿಯ ಬಗ್ಗೆ ಸಂಶಯವನ್ನು ಉಂಟುಮಾಡ ಬಹುದೇ ? ಇವೆಲ್ಲವನ್ನೂ ವಿಶ್ಲೇಷಿಸತೊಡಗುವುದು ಫಲಪ್ರದವಾಗಬಹುದು. ಇಂತಹ ವಿಶ್ಲೇಷಣೆಯಿಂದ ದೊರಕಬಹುದಾದ ಫಲವಾವುದು ? ಮನಸ್ಸಿನ ನೆಮ್ಮದಿ. ಯಾವ ವಿಷಯವನ್ನು ಕುರಿತಾಗಲೀ, ಆ ವಿಷಯದ ತುಂಬು ಜ್ಞಾನಾರ್ಜನೆಯು ಮನಸ್ಸಿಗೆ ನೆಮ್ಮದಿಯನ್ನೂ, ಏನನ್ನೋ ಕಡಿದು ಕಟ್ಟೆ ಹಾಕಿದೆ, ಎಂದನ್ನುವ ಸಂತಸವನ್ನೂ, ನೀಡುತ್ತದೆ. ಮತಗಳಿಲ್ಲದರ, ತತ್ವ ಶೋಧನೆಯು. ಹಾಗೂ ಕಲಾ ಪ್ರಕಾರಗಳ ಧ್ಯೇಯವೂ. ಮನಸ್ಸಿಗೆ ನೆಮ್ಮದಿ ಯನ್ನೂ, ಸಂತಸವನ್ನೂ, ತುಂಬು ಆಹ್ಲಾದವನ್ನೂ ನೀಡುವುದೇ ಆಗಿದೆ.

ಈ ದೃಷ್ಟಿಯಿಂದ 'ಕಾಲ'ದ ವಿಶ್ಲೇಷಣೆಯು ವಿಜ್ಞಾನಕ್ಕೂ ಮತ್ತು ಭಾವನಾ ಪ್ರಧಾನವಾದ ಕಲೆ ಮತ್ತು ಮತ ಧರ್ಮಗಳಿಗೂ ಸಂಬಂಧವನ್ನು ಹೊಡಿಸುತ್ತದೆ. ವಿಜ್ಞಾನದ ಮತ್ತು ಭಾವ ರಾಗಗಳ ಸಮ ಸಮ ಪ್ರಗತಿ ಯಿಂದಲೇ ಮಾನವನ ಉದ್ಧಾರವಾಗಬೇಕು. ಅವುಗಳ ಸಮ್ಮಿಳನದಿಂದಲೇ ಅರಿವು ಮತ್ತು ಸಂತಸವು ; ಜ್ಞಾನ ಮತ್ತು ಶಾಂತಿ ; ಹಾಗೂ ಸಂಪೂರ್ಣ ಪ್ರಗತಿಯು ಸಾಧ್ಯ. ಆದುದರಿಂದ 'ಕಾಲದ' ಈ ವಿಶ್ಲೇಷಣೆಯನ್ನು ಜನ ಸಾಮಾನ್ಯರಿಗೆ ಸಾಕಷ್ಟು ಸುಲಭವಾಗಿ ತಿಳಿಯುವಂತೆ ಬರೆಯಲೆತ್ನಿಸಿದೆ. ವಿಜ್ಞಾನಕ್ಕೂ, ತತ್ವಶಾಸ್ತ್ರಕ್ಕೂ, ಮತ್ತು ಮನೋತೀತ ಅನುಭವಕ್ಕೂ, ಕಾಲವು ಹೇಗೆ ಕೊಂಡಿಹಾಕಿಕೊಂಡಿದೆ ಎಂಬುದನ್ನು ವಿವರಿಸಲು ಪ್ರಯತ್ನಿಸಿ ದ್ದೇನೆ. ಹಾಗೂ ನಮ್ಮ ಭಾವನಾ ದೃಷ್ಟಿಯಿಂದ, ರಾಗ ಭಯ ಕ್ರೋಧ ಇವುಗಳ ಕಾಟದಿಂದ, ಕಾಲದ ಅನುಭವವು ಹೇಗೆ ವಿಪರೀತವಾಗುತ್ತದೆ ಎನ್ನುವುದನ್ನೂ ಸಾಧ್ಯವಾದಷ್ಟು ಸರಳವಾಗಿ ನನ್ನ ಕೀಳ್ಮಟ್ಟಕ್ಕೆ ಸರಿಯಾಗಿ, ತಿಳಿಯಲೆತ್ನಿಸಿದ್ದೇನೆ. ಕೀಳು, ಮೇಲು, ಎನ್ನುವುದೂ ನನ್ನ ಅಜ್ಞಾನದ ಅಳತೆಗೋಲು.

## 3 ಕಾಲಕ್ಕೆ ಸಂಬಂಧಿಸಿದ ಪುರಾಣದ ಕತೆಗಳು

ನಮ್ಮ ಪೂರ್ವಿಕರು, ತಾವು ಕಂಡುದನ್ನು ಸೂಕ್ಷ್ಮವಾಗಿ ಗಮನಿಸಿ, ಆ ವಿಷಯವನ್ನು ತೀಕ್ಷ್ಣವಾಗಿ ಮನನಮಾಡಿ, ಹೀಗಿರಬಹುದು ಎಂದು ತೀರ್ಮಾನಿಸುತ್ತಿದ್ದರು. ಆದರೆ ಗಹನವಾದ ಆ ವಿಷಯಗಳನ್ನು ಆ ಕಾಲದ ಸಮಾಜದ ಜನರಿಗೆ ತಿಳಿಸುವುದೆಂತು? ಯಾವ ಕಾಲದಲ್ಲೂ ಸಾಮಾನ್ಯ ಜನರ ಬುದ್ಧಿಯು ಹಂತವು ಅಷ್ಟಕ್ಕಷ್ಟೇ! ಅವರಿಗೆ ಯಾವ ವಿಷಯವನ್ನು ತಿಳಿಸ ಬೇಕಾದರೂ, ತಿಳಿಸುವ ರೀತಿಯು ಸರಳವಾಗಿರಬೇಕು ಆಕರ್ಷಕವಾಗಿರಬೇಕು. ಇಂತಹ ಪ್ರಕಾರವು, ಸಾಹಿತ್ಯದಲ್ಲಿ, ಸಣ್ಣ ಕತೆಗಳು. ಆದಕಾರಣ ನಮ್ಮ ದೇಶದ ಹಿರಿಯ ಮುನಿಗಳು ಗೂಡಾರ್ಥವಿರುವ, ಹಾಗೂ ಸರಳವಾಗಿರುವ, ಪುರಾಣದ ಕತೆಗಳನ್ನು, ಬಳಕೆಗೆ ತಂದರು. ಹಾಗಾದಾಗ ಪುರಾಣದ ಕತೆಗಳು ಕಾಲಕಾಲದಲ್ಲೂ ಜೀವಂತವಾಗಿರುತ್ತವೆ. ಮುಂದೆ ಸೂಕ್ತ ಸಂಸ್ಕೃತಿಯನ್ನು ಹೊಂದಿದವರಾರಾದರೂ ಗೂಡಾರ್ಥವನ್ನು ಗುರುತಿಸಿ, ಪ್ರಚಾರಮಾಡಿ, ಮಾನವನ ಜ್ಞಾನಭಂಡಾರವನ್ನು ವೃದ್ಧಿಸಬಹುದು. ಇದೇ ಆಶಯವು ಆ ಹಿರಿಯರಲ್ಲಿ ಇದ್ದಿರಬೇಕು.

ಈ ಊಹೆಯು ಸರಿಯೋ ಇಲ್ಲವೋ ಎಂಬುದನ್ನು—ಕಾಲದ ವಿಷಯವನ್ನು ಸೂಚಿಸುವ ಪುರಾಣದ ಕತೆಗಳಿಂದ ನಿರ್ಧರಿಸೋಣ.

### ಅ. 'ಕಾಲದ ವೇಗವನ್ನು ತೀವ್ರಗೊಳಿಸುವುದು'

ವೈಕುಂಠದ ದ್ವಾರಪಾಲಕರಾದ ಜಯ, ವಿಜಯರ ಪುರಾಣದ ಕತೆಯನ್ನು ತಿಳಿಯೋಣ. ಅವರಿಬ್ಬರೂ ವಿಷ್ಣುವಿನ ಅಚ್ಚಿನ್ನ ಭಕ್ತರು; ಸಾರೂಪ್ಯವನ್ನು ಪಡೆದವರು. ಆದರೆ ಸಾಯುಜ್ಯವನ್ನು ಪಡೆಯಬೇಕಾದರೆ, ವಿಷ್ಣುವಿನ ಹೃದಯೇಶ್ವರಿಯಾದ ಶ್ರೀದೇವಿಯ ಅನುಗ್ರಹವು ಅಗತ್ಯ. ಅದು ಲಭಿಸುವ ಕಾಲವು ಬರಲಿಲ್ಲ. ಏಕೆಂದರೆ ಆ ಯೋಗ್ಯತೆಯನ್ನವರು ಮನಸ್ಸಿನಲ್ಲಿ ಪಡೆದಿತ್ತಿಲ್ಲ. ಅಹಂಕಾರವು ಇನ್ನೂ ಉಳಿದಿತ್ತು, ಅವರ ಮನಸ್ಸಿನ ಒಳ ಒಳ ಪದರ ಪದರಗಳಲ್ಲಿ. ಇದರ ಫಲವೇನೆಂದರೆ ದ್ವಾರಪಾಲಕರಾಗಿ ಧಣಿಯ ವೈಕುಂಠವನ್ನು ರಕ್ಷಿಸುವುದೇ ಅವರ ಹೆಬ್ಬಯಕೆ. ಅಹಂಕಾರದ ಕಳಂಕ

ವಿದ್ದುದರಿಂದ ಸಾಯುಜ್ಯದ ಇರುವಿಕೆಯೇ ಅವರಿಗೆ ತಿಳಿಯದು. ಹಾಗಾಗಿ ತಾವು ಕಂಡುದರಲ್ಲೇ ಅತ್ಯಂತ ಸುಖದಿಂದಿದ್ದರು.

ಎಂತಹ ಹಿರಿಯ ಧಣಿಯೇ ಆಗಲೀ; ಅವನ ದ್ವಾರಪಾಲಕರ ಹಣೆಯ ಬರಹವು ಎಂದಿನಿಂದಲೂ ಒಂದೇ. ಕಾಲಗತಿಯಲ್ಲಿ ಅವರಿಗೆ ಪ್ರಗತಿಯೇ ಇಲ್ಲ. ಧಣಿಯನ್ನು ನೋಡಬಂದವರಿಗೆ, ಧಣಿಯ ಕಟ್ಟಲೆ ಕಾನೂನುಗಳನ್ನು ಆರುಹು ವುದು. ನೋಡ ಬಂದ ಧಣಿಯ ಸ್ನೇಹಿತರಿಗೆ ಕಟ್ಟಲೆ ಕಾನೂನುಗಳು ರುಚಿಸುವುದೇ? ಎಂದಿಗೂ ಇಲ್ಲ. ಸ್ನೇಹಿತರ ಬೆಂಬಲದಿಂದಲ್ಲವೇ ಧಣಿಗಳಿಗೆ ವೈಕುಂಠದ ಆಳರಸತನ! ಕಟ್ಟಲೆ ಕಾನೂನು ಇತ್ಯಾದಿ ಬಂಧನಗಳನ್ನು ಕಳಚಿಕೊಂಡ, ವಿಷ್ಣುವಿನ ಸ್ನೇಹಿತರು, ವೈಕುಂಠದ ಬಾಗಿಲಿಗೆ ಒಮ್ಮೆ ಬಂದರು. ಜಯ ವಿಜಯರು ಅವರನ್ನು ತಡೆದರು. 'ಧಣಿಯನ್ನು ನೋಡಲು ಈಗ ಸಮಯವಿಲ್ಲ' ಎಂದು ನಿಷ್ಠುರವಾಗಿ ನುಡಿದರು. ಬಂದವರು ವಿಷ್ಣುವಿನ ಸ್ತೋತ್ರವನ್ನು ಬೊಬ್ಬಿರಿದರು. ವೈಕುಂಠದ ಹೊರಬಾಗಿಲ ಬಳಿಗೆ ವಿಷ್ಣುವು ಬರಬೇಕಾಯಿತು. ಬಂದ. ಸ್ತೋತ್ರವನ್ನು ಬೊಬ್ಬಿರಿಯುತ್ತಿದ್ದ ಸನಕ ಸನಂದನಾದಿಗಳು, ದ್ವಾರಪಾಲಕರ ಅವಿನಯ ವರ್ತನೆಯನ್ನು ವಿಷ್ಣುವಿಗೆ ತಿಳಿಸಿದರು. "ಕಟ್ಟಲೆ ಕಾನೂನುಗಳನ್ನು ನಿರ್ದಾಕ್ಷಿಣ್ಯವಾಗಿ ಪರಿಪಾಲಿಸುವುದು ದ್ವಾರಪಾಲಕರ ಕರ್ತವ್ಯ. ಆದರೆ ವಿನಯವಂತ, ಸೌಜನ್ಯಯುತ, ನಡವಳಿಕೆ ಯನ್ನು ಬಿಡಬಾರದು. ಅವಿನಯದ ಅಹಂಕಾರದ ವರ್ತನೆಯು ಸಲ್ಲ. ಆದ ಕಾರಣ ನಿಮ್ಮ ದುರ್ವರ್ತನೆಗೆ ಶಿಕ್ಷೆಯನ್ನು ಅನುಭವಿಸಬೇಕು. ಕೆಲವು ಕಾಲ ನಿಮಗೆ ವೈಕುಂಠವಾಸವು ತಪ್ಪುತ್ತದೆ. ಭೂಲೋಕದಲ್ಲಿ ನನ್ನ ಶತ್ರುಗಳಾಗಿ ಮೂರು ಜನ್ಮವನ್ನು ನಡಸಿ ಅಥವಾ ನನ್ನ ಭಕ್ತರಾಗಿ ಏಳು ಜನ್ಮಗಳನ್ನು ನಡಸಿ. ನಂತರ ವೈಕುಂಠಕ್ಕೆ ಹಿಂತಿರುಗಬಹುದು" ಎಂದು ವಿಷ್ಣುವು ನುಡಿದನು.

ಜಯ ವಿಜಯರಿಗೆ ತಮ್ಮ ಅವಿನಯತೆಯ ಅರಿವಾಯಿತು. ವೈಕುಂಠ ದಿಂದ ಹೊರಬೀಳುವುದು ಅನಿವಾರ್ಯವಾಯಿತು. ಆದಷ್ಟು ಬೇಗ ವೈಕುಂಠಕ್ಕೆ ಹಿಂತಿರುಗಬೇಕು ಎನ್ನುವ ತೀವ್ರ ಹಂಬಲ. ವೈಕುಂಠದಿಂದ ಹೊರಬೀಳುವುದು ಮತ್ತು ಹಿಂತಿರುಗುವುದು, ಈ ಎರಡು ಘಟನೆಗಳ ಅಂತರವಿರುವ ಕಾಲವನ್ನು ಅವರು ನಿರ್ಣಯಿಸಬೇಕಾಗಿತ್ತು. ಭಕ್ತರಾಗಿ ಭೂಲೋಕದಲ್ಲಿ ಏಳು ಜನ್ಮ ಗಳನ್ನು ಕಳೆದರೆ ಏನಿಲ್ಲಾ ಅಂದರೂ ೭೦೦ ವರ್ಷಗಳಾದರೂ ಆಗಬೇಕು;

(ನಮ್ಮ ಲೆಕ್ಕದಲ್ಲಿ: ನಾವೇ ಅಲ್ಲವೇ ಕತೆ ಕಟ್ಟುತ್ತಿರುವವರು) ಶತ್ರುಗಳಾಗಿ ತಿರುಗಿ ಬಿದ್ದರೆ ಮೂರೇ ಜನ್ಮಗಳಲ್ಲಿ ಅಂದರೆ ಮುನ್ನೂರು ವರ್ಷಗಳಲ್ಲಿ ಹಿಂತಿರುಗಬಹುದು. ಎರಡು ನಿಶ್ಚಿತವಾದ ಘಟನೆಗಳ ಅಂತರವನ್ನು ಅವರು ಆದಷ್ಟು ಕಡಿಮೆ ಮಾಡಬಯಸಿದರು. ಶತ್ರುಗಳಾಗುತ್ತೇವೆ. ನಿನ್ನನ್ನು ದ್ವೇಷಿಸುತ್ತೇವೆ. ನಿನ್ನವರನ್ನು ಹಿಂಸಿಸುತ್ತೇವೆ. ಹಾಗೆ ಮಾಡಿದರೆ ನಿನ್ನ ಬಾಗಿಲ ಬಳಿಗೆ ಬೇಗ ಬರಲು ಸಾಧ್ಯ, ಆದ್ದರಿಂದ ಶತ್ರುಗಳಾಗಿ ಮೂರು ಜನ್ಮಗಳನ್ನು ಕಳೆಯಬಯಸುತ್ತೇವೆ ಎಂದು ನಿರ್ಧರಿಸಿದರು.

ಎರಡು ನಿಶ್ಚಿತ ಘಟನೆಗಳ ಅಂತರವಾದ–ವೈಕುಂಠದಿಂದ ಹೊರ ಬೀಳುವುದು ಮತ್ತು ಹಿಂತಿರುಗುವುದು, ಈ ಮಧ್ಯದ ಕಾಲವನ್ನು ಜಯ ವಿಜಯರು ವೇಗದಿಂದ ಹರಿಯುವಂತೆ ತೀರ್ಮಾನಿಸಿದರು. ಮಂದಗತಿಯಲ್ಲಿ ಕಾಲವು ಸರಿಯುವಂತೆ ನಿರ್ಧರಿಸಬಹುದಾಗಿತ್ತು. ಆದರೆ ಹಾಗೆ ಮಾಡಲಿಲ್ಲ.

ದ್ವೇಷ, ಹಿಂಸೆ, ಕ್ರೌರ್ಯ ಇತ್ಯಾದಿ ಮನೋಭಾವಗಳಿಂದ ಕಾಲಗತಿ ಯನ್ನು ತ್ವರಿತಗೊಳಿಸಬಹುದು. ಬೇಗಬೇಗ ಕಾಲವಾಗಬಹುದು, ಮೋಕ್ಷ ವನ್ನು ಹೊಂದಬಹುದು, ಎಂಬುವ ನೀತಿಯನ್ನು ಈ ಪುರಾಣದ ಕತೆಯಿಂದ ಮನಗಾಣಬಹುದು.

## ಆ. ಕಾಲವು ಮಂದಗತಿಯಲ್ಲಿ ಸರಿಯುವುದು

ಮೃಕಂಡು ಎಂಬ ಹೆಸರಿನ ಋಷಿಯೊಬ್ಬನಿದ್ದನಂತೆ. ತುಂಬಾ ತಪಸ್ಸು ಮಾಡಿದ ಮೇಲೆ ಅವನಿಗೆ ಮಾರ್ಕಂಡೇಯ ಎಂಬ ಒಬ್ಬ ಮಗ ಹುಟ್ಟಿದನಂತೆ. ಮಾರ್ಕಂಡೇಯನ ಜಾತಕದಲ್ಲಿ ಅಲ್ಪಾಯುಸ್ಸು! ಹದಿನಾರರ ಪ್ರಾಯದಲ್ಲಿ ಹರೋಹರ ಆಗಬೇಕಾಗಿತ್ತಂತೆ. ಜಾತಕ ಫಲವನ್ನು ತಪ್ಪಿಸಿಕೊಳ್ಳಲು, ಮಾರ್ಕಂಡೇಯನು ಕಡೆಗಾಲದಲ್ಲಿ ಶಿವನ ಗುಡಿಗೆ ಹೋಗಿ, ಶಿವಲಿಂಗವನ್ನು ಭದ್ರವಾಗಿ ತಬ್ಬಿಕೊಂಡು ಕೂತುಬಿಟ್ಟನಂತೆ. ಹೊತ್ತಿಗೆ ಸರಿಯಾಗಿ ಪಾಶ ವನ್ನು ಹಿಡಿದುಕೊಂಡು ಯಮ ಬಂದನಂತೆ. ಕ್ಲಿಪ್ತಕಾಲದಲ್ಲಿ ವಿಧಿಸಲ್ಪಟ್ಟ ಕಾರ್ಯವನ್ನು ಯಮ ಮಾಡದೆ ಇದ್ದರೆ ಅವನ ಧಣಿ ತೌಡು ಹರಿಯುತ್ತಾ ನಲ್ಲ! ಆದ್ದರಿಂದ ವಿಧಿಸಿದ ಮುಹೂರ್ತದಲ್ಲಿ ಯಮ ಪಾಶವನ್ನು ಬೀಸಿದ. ಯಮಪಾಶವು, ಮಾರ್ಕಂಡೇಯನ ಮತ್ತು ಶಿವಲಿಂಗದ ಸುತ್ತಲೂ ಬಿದ್ದಿತು.

ಶಿವನಿಗೆ ಕೋಪ ಉಕ್ಕಿತು. ಯಮನನ್ನು ಕುರಿತು 'ಎಲಾ, ನೀನು ನನ್ನ ಜವಾನ. ನನಗೆ ಪಾಶವನ್ನು ಬೀಸ್ತೀಯಾ ? ಹೊರಟು ಹೋಗು' ಎಂದು ರೇಗಿ ಒದ್ದೋಡಿಸಿದ. ಇನ್ನೂ ಕೋಪವು ಉರಿಯುತ್ತಲೇ ಇತ್ತು. ಮಾರ್ಕಂಡೇಯನ ಕಡೆಗೆ ತಿರುಗಿದ. 'ಎಲಾ ! ನೀನು ನನ್ನ ಪರಮ ಭಕ್ತ ಎಂದಿದ್ದೆ. ಭಕ್ತರು ಮನೆಯ ಮಕ್ಕಳು ಇದ್ದ ಹಾಗೆ. ಅಂತಹ ಅಂತಸ್ತಿನಲ್ಲಿರುವ ನೀನು ನಮ್ಮಮನೆಯ ಜವಾನನಾದ ಯಮನಿಗೆ ಬೆದರಿ, ನನ್ನ ತಬ್ಬಿಕೊಂಡೆಯಲ್ಲಾ ! ನೀನೆಂತಹ ಗಂಡುಸೋ, ಸಾವಿಗೆ ಹೆದರಿ ನನ್ನ ಹಿಡಕೊಂಡೆಯಲ್ಲಾ ?' ಎಂದು ಮೂದಲಿಸಿದ. ನಂತರ 'ಹೀಗೆ ಹೆದರಿಕೊಂಡೇ ಬದುಕಿರು. ನಿನಗೆ ಸಾವು ಬರದೇ ಇರಲಿ' ಎಂದು ಶಾಪವನ್ನು ಕೊಟ್ಟನಂತೆ.

ಪುರಾಣದ ಕಡೆಗೆ ತುಸು ವಕ್ರಗತಿ ಹೂಡಿ ಕೈಲಾಸಂ ಹೇಳಿದ ಗಂಭೀರಾರ್ಥದ ಒಗ್ಗರಣೆ ಹಾಕಲ್ಪಟ್ಟ ಪುರಾಣದ ಕತೆ ಇದು.

'ಕಾಲ'ದ ಹರಿಯುವಿಕೆಯ ದೃಷ್ಟಿಯಿಂದ ಈ ಕತೆಯನ್ನು ವಿಶ್ಲೇಷಿಸೋಣ. ಹುಟ್ಟುವುದು ನಿಶ್ಚಿತವಾದ ಒಂದು ಘಟನೆ. ಸಾಯುವುದು ಒಂದು ತಪ್ಪಲಾಗದ ಘಟನೆ. ಇವೆರಡರ ಅಂತರವೇ ಜೀವಿತ ಕಾಲ, ಅಥವಾ ಆಯುಸ್ಸು. ಯಾವುದಾದರೂ ಒಂದು ಉಪಾಯದಿಂದ ಎರಡನೆಯ ಘಟನೆಯು ನಡೆಯದಂತೆ ಮಾಡಿದರೆ, ಆಗ ಆಯುಸ್ಸು ಬಲು ಬಲು ದೀರ್ಘವಾದಂತೆಯೇ. ಅಂದರೆ ಆಯುಷ್ಕಾಲದ ಗತಿಯು ಬಲು ಬಲು ಮಂದವಾದಂತೆ.

ತುಂಬಿದ ಮಡಕೆಯಲ್ಲಿ ಸಣ್ಣ ತೂತಿದ್ದರೆ ಎರಡು ದಿನಗಳಲ್ಲಿ ಘಟ ಖಾಲಿಯಾಗಬಹುದು. ಆದರೆ ತೂತು ದೊಡ್ಡದಾಗಿದ್ದರೆ ಒಂದೇ ಘಂಟೆಯಲ್ಲಿ ಖಾಲಿಯಾಗಲು ಸಾಧ್ಯ. ತುಂಬು, ಖಾಲಿ, ಈ ಎರಡು ಘಟನೆಗಳ ಅಥವಾ ಸ್ಥಿತಿಗಳ ಅಂತರವು ತೂತಿನ ಪ್ರಮಾಣವನ್ನು ಅವಲಂಬಿಸಿರುತ್ತದೆ. ಅಂದರೆ ತೂತಿನ ಪ್ರಮಾಣಕ್ಕೆ ಕಾಲಗತಿಯು ಅನ್ವಯಿಸಿರುತ್ತದೆ.

ಇದರಂತೆಯೇ ಮಾರ್ಕಂಡೇಯನ ಆಯುಸ್ಸು. ಘಟದಲ್ಲಿ ತೂತು ಇರದಿದ್ದರೆ ಖಾಲಿಯಾಗುವುದೇ ಇಲ್ಲ. ಮಾರ್ಕಂಡೇಯನ ಆಯುಷ್ಕಾಲವು, ಸಾವಿನ ಘಟನೆಯು ಆಗದೆ ಇದ್ದುದರಿಂದ, ಅತಿ ದೀರ್ಘವಾಯಿತು. Infinity ಆಯಿತು. ಅಂದರೆ ಕಾಲದ ವೇಗವು ಮಂದವಾಯಿತು, ಬಹಳ ಮಂದವಾಯಿತು, ಎನ್ನಬಹುದು.

ಇ. ಕಾಲವು ಸ್ತಬ್ದವಾಗಬಹುದೇ ?

ಪವಿತ್ರವಾದ ಆಶ್ರಮದಲ್ಲಿ ತಪಸ್ಸು ವೇದಾಧ್ಯಯನ ಮತ್ತು ಸಂಸಾರ, ಮೂರನ್ನೂ ಮಾಡಿಕೊಂಡು ಗೌತಮ ಮಹರ್ಷಿಯು ಇದ್ದನಂತೆ. ಎಂದಿನಿಂದಲೂ ಇಂತಹವರಿಗೆ ಸ್ಫುರದ್ರೂಪಿಯಾದ ಹೆಂಡತಿಯರು ಸಿಗುವುದು, ಕೇವಲ ರಸಿಕರಿಗಲ್ಲ. ಅತ್ಯಂತ ಸುಂದರಿಯಾಗಿದ್ದ ಅಹಲ್ಯೆ ಎಂಬಾಕೆಯು ಗೌತಮನ ಕೈ ಹಿಡಿದಿದ್ದಳಂತೆ. ಚೆಂದುಳ್ಳಿ ಹೆಣ್ಣು ರಾಜ್ಯದಲ್ಲಿ ಎಲ್ಲಿದ್ದರೂ ಆಳರಸರ ಕಣ್ಣು ಅತ್ತ ಬೀಳುವುದು ಅಂದಿನಿಂದಲೂ ಮಾಮೂಲು. ಸ್ವರ್ಗದ ಅಧಿಪತಿ ಇಂದ್ರನ ಕಣ್ಣು ಅಹಲ್ಯೆಯ ಮೇಲೆ ಬಿತ್ತು. ಶೌರ್ಯ ಪ್ರದರ್ಶನವನ್ನು ಮಾಡಿ ಅಹಲ್ಯೆಯನ್ನು ಇಂದ್ರನು ಗಿಟ್ಟಿಸಿಕೊಳ್ಳುವಂತಿರಲಿಲ್ಲ. ಏಕೆಂದರೆ ಬ್ರಹ್ಮತೇಜಸ್ಸಿದ್ದ ಗೌತಮನ ಮುಂದೆ ಇಂದ್ರನ ಕ್ಷಾತ್ರ ತೇಜಸ್ಸು ಸೋಲುತ್ತಿತ್ತು. ಆದಕಾರಣ ಇಂದ್ರನು ಉಪಾಯವನ್ನು ಹೂಡಿದ. ಗೌತಮ ಮುನಿಯ ವೇಷ ಮತ್ತು ರೂಪವನ್ನು ಧರಿಸಿ, ಕೋಳಿ ಕೂಗಿದ ವೇಳೆಯಲ್ಲಿ ಇಂದ್ರನು ತನ್ನ ಇಷ್ಟಾರ್ಥವನ್ನು ನೆರವೇರಿಸಿಕೊಂಡ. ಆಶ್ರಮದಿಂದ ತಲೆ ಮರೆಸಿಕೊಂಡು ಇಂದ್ರ ಇನ್ನೇನು ಹೋಗಬೇಕು ! ಅಷ್ಟರಲ್ಲಿ ಗೌತಮ ಮುನಿಯು ನದಿ ತೀರದಿಂದ ಹಿಂತಿರುಗಿದ. ಹೆಂಡತಿ ಮತ್ತು ಮಿಂಡ ಇಬ್ಬರನ್ನೂ ನೋಡಿ ಗಂಡ ಕೆಂಗಣ್ಣಾದ. ಯಥಾಪ್ರಕಾರ ಶಾಪವನ್ನು ಕೊಟ್ಟ. ಇಬ್ಬರಿಗೂ, ಸಾವಿರ ಹುಣ್ಣು. ನಂತರ ಕಣ್ಣು ಮಾಡಿಕೊಂಡು ಇಂದ್ರ ಅತ್ತ ಹೋದ, ಶಾಪದಿಂದ. ಇತ್ತ ಅಹಲ್ಯೆಯು ಕಲ್ಲಾಗಿ ಬಿದ್ದಳು. ಕಲ್ಲಾಗುವಾಗ ಅಹಲ್ಯೆಯು ಗಂಡನನ್ನು ಕುರಿತು 'ನೀವು ಅಂತ ತಿಳಿದುಕೊಂಡೆ, ಅವನನ್ನ. ಈ ರೀತಿ ಮೋಸ ಮಾಡುತ್ತಾರೆ ಅಂತ ನನಗೆ ತಿಳಿದಿರಲಿಲ್ಲ. ನನ್ನದೇನು ತಪ್ಪು ಇದರಲ್ಲಿ. ಶಾಪದಿಂದ ವಿಮೋಚನೆಯು ಯಾವಾಗ ?' ಎಂದು ಅಹಲ್ಯೆ ಗೋಗರೆದಳು. ಗೌತಮನಿಗೆ ಕೋಪವು ಸ್ವಲ್ಪ ಇಳಿದಿತ್ತು. ಕಾರಣ, ಕನಿಕರದಿಂದ ಅವ 'ಕಲ್ಲಾಗಿ ನೀನು ಬಿದ್ದಿರುವಲ್ಲಿಗೆ, ಶ್ರೀರಾಮಚಂದ್ರನು ತ್ರೇತಾಯುಗದಲ್ಲಿ ಬರುತ್ತಾನೆ. ಆತನ ಪಾದ ಸ್ಪರ್ಶವಾದಾಗ ನೀನು ಪವಿತ್ರಳಾಗುತ್ತೀಯೋ ? ಕಲ್ಲಿನ ಸೆರೆಯು ಆಗ ಬಿಟ್ಟು ಹೋಗುತ್ತದೆ. ಅನಂತರ ನನ್ನ ಬಳಿಗೆ ಬರುವೆಯಂತೆ, ಹಿಮಾಲಯದಲ್ಲಿರುತ್ತೇನೆ ಆ ವೇಳೆಗೆ' ಎಂದು ಭವಿಷ್ಯದ ಭರವಸೆಯನ್ನು ನೀಡಿದನಂತೆ.

ಇದು ಪುರಾಣದ ಕತೆ. ಕಾಲಗತಿಯಿಂದ ಇದರ ಅಂತರಾರ್ಥವನ್ನು ವಿಶ್ಲೇಷಿಸುವ. ಅಹಲ್ಯೆಯು ಬಾಳಿನಲ್ಲಿ ಕಲ್ಲಾಗಿ ಬಿದ್ದುದು ಒಂದು ಘಟನೆ. ಶ್ರೀರಾಮಚಂದ್ರನ ಪಾದಸ್ಪರ್ಶವಾಗಿ ತಿರುಗಿ ಜೀವಂತ ಹೆಣ್ಣಾಗುವುದು ಇನ್ನೊಂದು ಘಟನೆ. ಈ ಎರಡು ಘಟನೆಗಳ ಅಂತರವೇ ಕಾಲ. ಈ ಕಾಲದಲ್ಲಿ ಅಹಲ್ಯೆಯು ಕಲ್ಲಾಗಿ ಬಿದ್ದಿದ್ದಳು, ಅಂದರೆ ಅವಳ ಬಾಳಿನಲ್ಲಿ ಯಾವ ಘಟನೆಯೂ ಆಗುವಂತಿರಲಿಲ್ಲ. ಅವಳ ದೇಹದಲ್ಲಾಗಲೀ, ಮನಸ್ಸಿನಲ್ಲಾಗಲೀ ಎಲ್ಲವೂ ಆ ಕಾಲದಲ್ಲಿ ಶೂನ್ಯ, ಹೊರ ಪ್ರಪಂಚದಲ್ಲಿ ನಡೆಯುವ ಘಟನೆಗಳು ಅವಳಿಗೆ ತಿಳಿಯುವಂತಿರಲಿಲ್ಲ. ಹೀಗಾಗಿ ಆ ಅಂತರದಲ್ಲಿ ಆಕೆಯ ಪಾಲಿಗೆ ಕಾಲವು ಸ್ಥಬ್ದವಾಗಿತ್ತು, ನಿಂತು ಹೋಗಿತ್ತು, ಎನ್ನಬಹುದು.

## ಈ. ಕಾಲವು ಹಿಂದು ಹಿಂದಕ್ಕೆ ಸರಿಯಬಹುದೇ ?

ಯಯಾತಿ ಎಂದೊಬ್ಬ ಚಕ್ರವರ್ತಿಯು ಇದ್ದನಂತೆ. ಬಾಲ್ಯ, ಕೌಮಾರ, ಬಲಿತ ಪ್ರಾಯ ಮತ್ತು ಮುಪ್ಪು, ಈ ಘಟನೆಗಳು ಎಲ್ಲ ಮಾನವರ ಜೀವನದಲ್ಲಿ ಕಾಲಕ್ರಮೇಣ ನಡೆಯುವಂತೆ ಯಯಾತಿಗೂ ಆಗುತ್ತ ಬಂತು. ಮುಪ್ಪು ಮೂಡಿತು ಮುಪ್ಪು ಬಂದಾಕ್ಷಣ ಲೌಕಿಕ ಆಸೆಗಳಿಗೆ ಚ್ಯುತಿ ಬರುತ್ತದೆಯೇ ? ಛಾತಿ ಕಡಿಮೆಯಾದರೂ ಚಪಲವು ಹೆಚ್ಚುತ್ತಲೇ ಇರುತ್ತದೆ. ಎರಡನೇ ಇನ್ನಿಂಗ್ಸ್ ಆಡಬೇಕು ಅಂತ ಯಯಾತಿಗೆ ಅತಿ ಆಸೆಯಾಯಿತಂತೆ. ಬೆಳೆದ ನಾಲ್ಕು ಗಂಡುಮಕ್ಕಳನ್ನು ಕರೆಸಿ 'ನಿಮ್ಮಲ್ಲಿ ಯಾರು ತನ್ನ ಯೌವನವನ್ನು ಕೊಡುತ್ತಾರೆಯೋ, ಅವರಿಗೆ ರಾಜ್ಯವನ್ನು ಕೊಡುತ್ತೇನೆ ; ಯಾರು ಒಪ್ಪುತ್ತೀರಿ' ಎಂದು ಕೇಳಿದನಂತೆ. ಧಡಿಯ ಗಂಡುಮಕ್ಕಳಲ್ಲಿ ಮೂವರು 'ನಮ್ಮ ಯೌವನವನ್ನು ನಿಮಗೆ ಕೊಟ್ಟ ಮೇಲೆ, ನಿಮ್ಮ ಮುಪ್ಪು ನಮಗೆ ಅಡರಿದ ಮೇಲೆ ಈ ರಾಜ್ಯವನ್ನು ಕಟ್ಟಿಕೊಂಡು ಏನು ಸುಖವನ್ನು ಪಡಲು ಸಾಧ್ಯ ? ಆದ್ದರಿಂದ ಉಹ್ಞೂ' ಎಂದರಂತೆ. ಆದರೆ ಕಿರಿಯವನಾದ ಅರಿಯದ ಪುರು, ತಂದೆಯ ಆಸೆಯನ್ನು ಈಡೇರಿಸಲು ಒಪ್ಪಿಕೊಂಡನಂತೆ. ಯಯಾತಿಗೆ ಪುನಃ ಪ್ರಾಯವು ಮೂಡಿತಂತೆ.

ಬಾಲ್ಯ ಕೌಮಾರ ಪ್ರಾಯ ವಾರ್ಧಿಕ್ಯ ಇವು ಒಂದಾದ ಮೇಲೊಂದು ನಡೆಯುವ ಘಟನೆಗಳು. ಕಾಲಗತಿಯಲ್ಲಿ ಒಂದರ ಮುಂದೆ ಇನ್ನೊಂದು

ಬರುವುದು. ಮುಪ್ಪು ಮೂಡಿದ ಮೇಲೆ ಪುನಃ ಪ್ರಾಯವು ಬರುವಂತಾದರೆ, ಸಾಮಾನ್ಯವಾಗಿ ಮುಂದಕ್ಕೆ ಹರಿಯುತ್ತಿರುವ, ಕಾಲಗತಿಯನ್ನು ಹಿಂದಕ್ಕೆ ತಿರುಗಿಸಿದಂತೆಯೇ! ಮುಂದೆ ಬರಬೇಕಾದ ಸ್ಥಿತಿಯು ತಪ್ಪಿ, ಹಿಂದಿದ್ದ ಸ್ಥಿತಿಗೆ ಮರಳಿದರೆ, ಕಾಲವು ಹಿನ್ನಡೆದಂತೆ.

ಉ. ಸಾರಾಂಶ

ಪುರಾಣದ ಕತೆಗಳಲ್ಲಿ, ಕಾಲಗತಿಯು ತೀವ್ರಗೊಳ್ಳುವುದು; ಮಂದವಾಗುವುದು; ಸ್ಥಬ್ಧವಾಗುವುದು; ಮತ್ತು ಹಿನ್ನಡೆಯುವುದು; ಇವುಗಳನ್ನು ಸ್ಪಷ್ಟವಾಗಿ ಕಾಣಬಹುದು. ಭೌತಶಾಸ್ತ್ರದ ಪ್ರಕಾರ ಇವೆಲ್ಲವೂ ಸಾಧ್ಯವೇ? ಜೀವಶಾಸ್ತ್ರದಲ್ಲಿ ಹೀಗಾಗುವುದಕ್ಕೆ ನಿದರ್ಶನಗಳಿವೆಯೇ? ಮನಃಶಾಸ್ತ್ರದ ಪ್ರಕಾರ ಕಾಲದ ಸ್ವರೂಪವೇನು? ಹಾಗೂ ಆಧ್ಯಾತ್ಮಿಕ ಅಥವಾ ತತ್ವಶಾಸ್ತ್ರದ ದೃಷ್ಟಿಯಿಂದ ಕಾಲದ ಕಲ್ಪನೆಯು ಯಾವ ಯಾವ ರೀತಿಯಲ್ಲಿದೆ? ಇವನ್ನು ಮುಂದೆ ವಿಶ್ಲೇಷಿಸೋಣ. ಮೇಲಿನಿಂದ ಕೆಳಕ್ಕೆ ನಿರ್ದಿಷ್ಟವಾಗಿ ಹರಿಯುತ್ತಿರುವ ನದಿಯ ಪ್ರವಾಹಕ್ಕೆ ಕಾಲವನ್ನು ಬಹುಕಾಲದಿಂದ ಹೋಲಿಸುತ್ತಿದ್ದಾರೆ. ನಿತ್ಯ ಜೀವನದ ಸಾಮಾನ್ಯ ಅನುಭವದಲ್ಲಿ ಇದು ದಿಟವಿರಬೇಕು ಎನಿಸುತ್ತದೆ. ನಿರಂತರವಾಗಿ ಹರಿಯುವ 'ಕಾಲ'ದಲ್ಲಿ ನಮ್ಮ ಬಾಳ ಘಟನೆಗಳು ನಡೆಯುತ್ತವೆ. ಕಾಲವು ಮುಂದೆ ಸಾಗಿದ ಮೇಲೆ ಹಿಂದೆ ಆದವುಗಳನ್ನು ಸರಿಪಡಿಸಲಾಗುವುದಿಲ್ಲ. ವ್ಯತ್ಯಾಸ ಮಾಡಲಾಗುವುದಿಲ್ಲ. ಎನ್ನುವುದು ಎಲ್ಲರ ಅನುಭವಕ್ಕೂ ಬಂದಿರುವ ವಿಷಯ. ಆದರೆ ಆ ಘಟನೆಗಳು ಮನಸ್ಸಿನಲ್ಲಿ ಸ್ಮರಣೆಗಳಾಗಿ ಬಲುಕಾಲ ಉಳಿದುಕೊಳ್ಳುತ್ತವೆ. ಸ್ಮರಣೆಗಳು ಮಾಸಲಾಗತೊಡಗಿದಾಗ. ಘಟನೆಗಳೂ ವ್ಯತ್ಯಾಸ ಹೊಂದಿದಂತೆ ಭಾಸವಾಗುತ್ತದೆ. ಅರಳು ಮರಳಿನಲ್ಲಿ ಇದೇ ಆಗುವುದು. ಅರುಳುಮರುಳು ಎಂದ ಹೊರಗಿನವರು ಗುರುತಿಸುತ್ತಾರೆ. ಆದರೆ ಅರಳುಮರಳು ಬಡಿದವರಿಗೆ, ವ್ಯತ್ಯಾಸ ಹೊಂದಿದ ಮಸಕು ಸ್ಮರಣೆಗಳು ಸತ್ಯವಾಗಿಯೇ ಕಾಣುತ್ತವೆ. ಅಂದರೆ ಮನಸ್ಸಿನ ಸ್ಥಿತಿಯನ್ನು, ಹಾಗೂ ಮನಸ್ಸಿಗೆ ಆಧಾರವಾಗಿರುವ ಮೆದುಳಿನ ಸ್ವಾಸ್ಥ್ಯವನ್ನೂ, ಸ್ಮರಣೆಗಳು ಅವಲಂಬಿಸಿರುತ್ತವೆ. ಈ ಜನ್ಮದಲ್ಲಿ ಉಂಟಾದ ಅಥವಾ ಅನುಭವಿಸಿದುದರ ಸ್ಮರಣೆಗಳಿಗೆ ಈ ರೀತಿಯು ಅನ್ವಯಿಸುವುದು ಸಹಜ.

ಆದರೆ ಎಂದಿನದೋ ಜನ್ಮದ ಸ್ಮರಣೆಗಳನ್ನು ಈ ಜನ್ಮದಲ್ಲಿ ನೆನೆಸಿ ಕೊಂಡವರ ನಿದರ್ಶನಗಳೂ ಇವೆ. ಯಾವುದೋ ಜನ್ಮದಲ್ಲಿ ನಡೆದ ಘಟನೆ ಗಳನ್ನು ಈ ಜನ್ಮದಲ್ಲಿ ಸ್ಮರಿಸಲು ಕೆಲವರಿಗೆ, ಕೆಲವು ಕಾಲದಲ್ಲಿ, ಸಾಧ್ಯ ಎಂದಂತಾಯಿತು. ಅಂದರೆ ಭೂತ ಕಾಲವು, ವರ್ತಮಾನ ಕಾಲದೊಂದಿಗೆ ಸೇರಿಕೊಂಡಂತಾಯಿತು.

ಮುಂದಾಗುವ ಘಟನೆಗಳನ್ನು ಇಂದು ವಿವರಿಸುವುದು, ಭವಿಷ್ಯವಾಣಿ. ಇಪತ್ತು ಒಂದು ಸರೋವರವನ್ನು ಯೋಜನೆಯ ಪ್ರಕಾರ ನಿರ್ಮಿಸ ಹೊರಟರೆ, ಇನ್ನು ೬-೭ ವರ್ಷಗಳಲ್ಲಿ ಸರೋವರವು ತುಂಬಿರುತ್ತದೆ, ಎಂದು ಇಂದೇ ಭವಿಷ್ಯವನ್ನು ನುಡಿಯಬಹುದು. ಆದರೆ ನಮ್ಮ ಹಳ್ಳಿಯಲ್ಲಿರುವ ತೊಂಭತ್ತರ ವಯಸ್ಸಿನ ಕಾಲು ಕುಸಿದಿರುವ ಅಡುಗೂಲಜ್ಜಿಯು ವಿಮಾನಾಪಘಾತದಲ್ಲಿ ಸಾಯುತ್ತಾಳೆ ಎಂದು ಭವಿಷ್ಯವನ್ನು ನುಡಿದರು, ಅನ್ನಿ. ವಿಮಾನವನ್ನು ಕಾಣದೆ ಇರುವ, ನಡೆಯಲಾರದ, ಬಡ ಮುದುಕಿಯು ವಿಮಾನ ಪ್ರಯಾಣ ವನ್ನು ಕೈಗೊಳ್ಳುವುದು ಅತಿ ಅಸಂಭವ. ಆದರೆ ಅಜ್ಜಿಯ ಗುಡಿಸಿಲಿನ ಮೇಲೆ ಐದಾರು ವರ್ಷಗಳ ನಂತರ ಭವಿಷ್ಯವನ್ನು ನುಡಿದ ದಿನದಂದು, ಹಾರಾಡುವ ವಿಮಾನವು ಆಕಸ್ಮಿಕ ಅಪಘಾತಕ್ಕೀಡಾಗಿ, ಬಿದ್ದು; ಮುದುಕಿಯು ಸತ್ತಳು ಅನ್ನಿ. ಆಗ ಭವಿಷ್ಯ ನುಡಿದವರ ಬಗ್ಗೆ ತುಸು ಆಶ್ಚರ್ಯವೂ ನಂಬಿಕೆಯೂ, ಗೌರವವೂ ಉಂಟಾಗುತ್ತದೆ. ಇಂತಹ ಭವಿಷ್ಯವಾಣಿಗಳು ಮುಂದೆ ಸತ್ಯ ವಾದುದಕ್ಕೆ ಸಾಕಷ್ಟು ನಿದರ್ಶನಗಳಿವೆ.

ಅಂದರೆ ಭವಿಷ್ಯವೂ ವರ್ತಮಾನ ಕಾಲಕ್ಕೆ ಬೆಸೆದುಕೊಂಡಂತಾಯಿತು, ಭೂತ ವರ್ತಮಾನ ಭವಿಷ್ಯ ಎಂದು ಸಾಮಾನ್ಯ ಅನುಭವದಲ್ಲಿ ಕಾಣಬರುವ ಕಾಲದ ವಿಂಗಡಣೆಗಳು ಅಷ್ಟಾಗಿ ಸತ್ಯವಲ್ಲವೇನೋ ಎನಿಸುತ್ತದೆ. ಈ ಸಮಸ್ಯೆ ಗಳಿಗೆ ಕಾಲವನ್ನು ತಾತ್ವಿಕ ದೃಷ್ಟಿಯಿಂದ ವಿಶ್ಲೇಷಿಸಿದರೆ, ಪರಿಹಾರವು ದೊರಕ ಬಹುದು, ಸದುತ್ತರವು ಸಿಗಬಹುದು ಎನಿಸುತ್ತದೆ.

ಈ ಕಾರಣದಿಂದ ತಾತ್ವಿಕ ದೃಷ್ಟಿಯಿಂದ ಕಾಲದ ಅರಿವನ್ನು ತಿಳಿಯಲು ಪ್ರಯತ್ನಿಸಲಾಗಿದೆ. ನಿಖರವಾಗಿ ಸಿದ್ಧಾಂತವಾಗಿರುವ ವೈಜ್ಞಾನಿಕ ಕುತ್ತಿಗೆ ಯಾದ ಈ ಪುಸ್ತಕದಲ್ಲಿ 'ತಾತ್ವಿಕ ದೃಷ್ಟಿಯಲ್ಲಿ ಕಾಲ'ವನ್ನು ಸೇರಿಸಲಾಗಿದೆ.

## 4 ಕಾಲ ಮತ್ತು ದೇಶ

ನಮ್ಮ ಪೂರ್ವಜರು ಕಾಲ ಮತ್ತು ದೇಶ ಎಂಬ ಪದಗಳನ್ನು, ವ್ಯಕ್ತಿ ಮತ್ತು ಅವನ ಸುತ್ತಲಿರುವ ಬ್ರಹ್ಮಾಂಡದ ಸಂಬಂಧವನ್ನು ವಿಶ್ಲೇಷಿಸುವಾಗ ಉಪಯೋಗಿಸುತ್ತಿದ್ದರು. ಕಾಲ ಎಂದರೆ Time ಹೊತ್ತು, ವೇಳೆ ಎನ್ನುವ ಅರ್ಥವು ಎಲ್ಲರಿಗೂ ಸುಲಭವಾಗಿ ತಿಳಿಯುತ್ತದೆ. ಕಾಲದ ವಿವರವಾದ ಅರ್ಥ ವಾಗಲೀ ಸತ್ಯಾರ್ಥವಾಗಲೀ ತಿಳಿಯದೆ ಇರಬಹುದು. ಆದರೆ ಸ್ಥೂಲವಾದ ಮತ್ತು ಸಾಮಾನ್ಯ ಬಳಕೆಯಲ್ಲಿನ ಅರ್ಥವು ಸ್ವತಃಸಿದ್ಧವಾಗಿರುತ್ತದೆ.

ಆದರೆ 'ದೇಶ' ಎನ್ನುವ ಪದದ ಅರ್ಥವು ಬಹಳಷ್ಟು ಮಾರ್ಪಾಡಾಗಿದೆ. ವೇದ ಉಪನಿಷತ್ತು ಮತ್ತು ಪುರಾಣಗಳ ಕಾಲದಲ್ಲಿ, 'ದೇಶ' ಎಂದರೆ ವ್ಯಕ್ತಿಯ ಸುತ್ತಲೂ ಇರುವ ಪ್ರಪಂಚ ಎಂದನ್ನುವ ಅರ್ಥವಿತ್ತು. Space ಎಂಬ ಇಂಗ್ಲೀಷ್ ಪದದ ಅರ್ಥ ಬರುತ್ತಿತ್ತು. ಆದರೆ ಇತ್ತೀಚಿನ ನೂರಾರು ವರ್ಷಗಳಿಂದ ಭೌಗೋಳಿಕ ಪ್ರದೇಶ; ಮೇರೆ, ಮಿತಿ, ಗಡಿಗಳಿಂದ ನಿಗದಿಯಾಗಿರುವ ಭೌಗೋಳಿಕ ಪ್ರದೇಶ ಎಂಬ ಅರ್ಥ ಬಂದಿದೆ. ಕ್ರಿಸ್ತ ಯನ್ನರ ಪಂಚಾಗದ ರೀತಿಯಾಗಿ, ಹತ್ತು ಹನ್ನೆರಡನೆಯ ಶತಮಾನದಲ್ಲಿ, ದೇಶ ಎನ್ನುವುದರ ಕನ್ನಡದ ಸಮಾನಾರ್ಥ ಪದವು, ಬಯಲು ಎಂಬುದು. ಬಯಲು ಎಂದರೆ Cosmic space ಎನ್ನುವ ಅರ್ಥವಿತ್ತು, ಬಯಲಿಗೆ ಮೇರೆ ಮತ್ತು ಗಡಿಗಳು ಇರಲಿಲ್ಲ. ಅದಕ್ಕೆ ವ್ಯತಿರಿಕ್ತವಾದ ಪದವು 'ಆಲಯ'. ಮೇರೆ ಗಡಿಗಳಿರುವ ವಸ್ತು. ನಮ್ಮ ದೇಹವು ಆಲಯ. ಏಕೆಂದರೆ ಅದಕ್ಕೆ ಗಡಿಯಿದೆ. ನಮ್ಮ ಮನೆಯೂ ಆಲಯ, ಅದಕ್ಕೂ ಮೇರೆ ಇದೆ. ಗಡಿ ಇದೆ. ನಮ್ಮೂರು ಆಲಯವೇ, ಅದಕ್ಕೂ ಚೌಕಟ್ಟು ಇದೆ. ನಾವು ವಾಸಿಸುತ್ತಿರುವ ಭೂ ಉಪಖಂಡ ಭಾರತವೂ ಒಂದು ಆಲಯವೇ, ಅದಕ್ಕೂ ಗಡಿ ಗುರುತು ಗಳಿವೆ. ಹೀಗೆ ವ್ಯಕ್ತಿಯಿಂದ ಆರಂಭವಾಗಿ ನನ್ನದು ಎಂದುಕೊಂಡ, ಗಡಿ ಇರುವ ಪ್ರದೇಶಗಳೆಲ್ಲವನ್ನೂ 'ಆಲಯ' ಎಂಬ ಪದದಿಂದ ಕರೆಯುತ್ತಿದ್ದರು. ನಾನು, ನನ್ನದು ಎಂಬ ಭಾವನೆಯು ದೇಹದಿಂದ ಸುತ್ತಲಿನ ಸಮಸ್ತಕ್ಕೂ ಪದರ ಪದರವಾಗಿ ಹರಡಲಾರಂಭಿಸಿದುದರಿಂದ 'ಆಲಯ'ದ ಕಲ್ಪನೆಯೂ ವಿಶಾಲ ವಾಯಿತು, ವಿಸ್ತಾರವೂ ಆಯಿತು. ಬಯಲು, ಆಲಯ ಎನ್ನುವ ಪದಗಳು Infinite ಮತ್ತು Finite ಎಂಬ ಪದಗಳಿಗೆ ಸಮಾನವಾಗಿವೆ; ಅರ್ಥದಲ್ಲಿ.

'ದೇಶ' ಎಂಬ ಪದವು 'ಬಯಲು' ಎನ್ನುವ ಪದಕ್ಕೆ ಸರಿಸಮಾನಾರ್ಥವನ್ನು ಕೊಡುತ್ತದೆ. ದೇಶ-Space ಎನ್ನುವ ಅರ್ಥದಲ್ಲೇ ಸಾಂಖ್ಯಕಾರರೂ ಆ ಪದವನ್ನು ಬಳಸಿಕೊಂಡಿದ್ದಾರೆ.

ಕಾಲ ಮತ್ತು ದೇಶಕ್ಕೆ ಯಾವ ತೆರನ ಸಂಬಂಧವಿದೆ? ಸಂಬಂಧವೇನಾದರೂ ಇದೆಯೇ? ಏನಾದರೂ ಸಂಬಂಧವಿದ್ದರೆ, ಅದು ನಿಕಟವಾದುದೇ, ಅಥವಾ ಹಗುರವಾದುದೇ, ಸಡಿಲವಾದುದೇ? ಈ ಪ್ರಶ್ನೆಗಳಿಗೆ ಉತ್ತರವನು ತತ್ವ ಶಾಸ್ತ್ರದಲ್ಲಿ ನಿರೀಕ್ಷಿಸಬಹುದು. ಆದರೆ ದಿನ ಜೀವನದಲ್ಲಿ, ಸಾಮಾನ್ಯರಾದ ನಮ್ಮಂತಹವರ ಬಾಳಿನಲ್ಲಿ ಇಂತಹ ಪ್ರಶ್ನೆಗಳಿಗೆ ಉತ್ತರವನ್ನು ಕಾಣಲು ಸಾಧ್ಯವೇ?

ಸಾಧ್ಯ ಎಂದು ನನ್ನ ಅಭಿಪ್ರಾಯ. ಅದನ್ನು ಸಮರ್ಥಿಸಲು ಕೆಲವು ನಿದರ್ಶನಗಳನ್ನು ನೀಡುತ್ತೇನೆ.

೧. ನಾನು, ಎಂದು ನಿಖರವಾಗಿ ಹೇಳಬೇಕಾದರೆ, ಇಂತಹವರ ಮಗ ಎಂದೂ ಹೇಳಬೇಕು. ಇಂತಹ ದೇಶದಲ್ಲಿ ಹುಟ್ಟಿದವ ಎಂದರೆ ಇನ್ನೂ ನಿಖರವಾಯಿತು. ಪ್ರವರದಲ್ಲಿ ಹೇಳುವಂತೆ ಭರತ ಖಂಡದಲ್ಲಿ, ವಾಸಿಷ್ಠ ಮೈತ್ರಾವರುಣ ಕೌಂಡಿನ್ಯರೆಂಬ ಮೂರು ಋಷಿಗಳ ಪ್ರವರವನ್ನು ಹೊಂದಿರುವ, ಕೌಂಡಿನ್ಯನ ಗೋತ್ರದ, ಆಪಸ್ತಂಬ ಸೂತ್ರದ, ಯಜುಶ್ಶಾಖೆಯ ಶ್ರೀ......... ಶರ್ಮಾ ಎಂದರೆ ತಕ್ಕಮಟ್ಟಿಗೆ ವಿವರಗಳನ್ನು ಕೊಟ್ಟಂತಾಯಿತು. ಆದರೆ ಕಳೆದ ಎರಡು ಮೂರು ಸಾವಿರ ವರ್ಷಗಳಲ್ಲಿ ಹೆಸರೊಂದನ್ನು ಬಿಟ್ಟು ಮಿಕ್ಕೆಲ್ಲವೂ ನನ್ನ ಪ್ರವರದಂತೆಯೇ ಇರುವ ಸಹಸ್ರ ಸಹಸ್ರ ಮಂದಿ ಆಗಿ ಹೋಗಿರಬೇಕು. ಅವರಿಗೂ ನನಗೂ ಇರುವ ಭೇದ ಯಾವುದು? ನಾನು ಹುಟ್ಟಿದ್ದು ೧೯೦೫ರಲ್ಲಿ ನವೆಂಬರ್ ತಿಂಗಳಿನ ಶುಕ್ಲಪಕ್ಷದ ಚತುರ್ದಶಿಯ ದಿನ. ಆ ದಿನದಂದು ಈ ಪ್ರವರವನ್ನು ಹೇಳಿಕೊಳ್ಳಬಹುದಾದ, ಜನರ ಸಂಖ್ಯೆ ಬಹಳ ಕಡಿಮೆಯಾಗಿರುತ್ತದೆ. ಹಾಗೂ ಬೆಂಗಳೂರಿನಲ್ಲಿ ಹುಟ್ಟಿದವರು ಎಂದು ಹೇಳಿದರೆ ಕೇವಲ ೨–೩ ಜನರಿರಬಹುದು. ಇಂತಹ ಹೆಸರಿನವರ ಮಗ, ಅವನ ಹೆಸರು ಇದು ಎಂದರೆ ನಿಖರವಾಗಿ ನನ್ನನ್ನು ಗುರುತಿಸಬಹುದು. ಹೀಗೆ ನಿಖರವಾಗಿ ಸ್ಪಷ್ಟವಾಗಿ ಗುರುತಿಸಲು ದೇಶದ ವಿವರಗಳು ಅಗತ್ಯ ಹಾಗೂ ಕಾಲದ ವಿವರವೂ ಅತ್ಯಗತ್ಯ. ಕಾಲ ಮತ್ತು ದೇಶ ಒಂದಕ್ಕೊಂದು ಪೂರಕ ಒಂದಕ್ಕೊಂದು

ನಿಕಟ ಸಂಬಂಧವನ್ನು ಹೊಂದಿದೆ. ಆದುದರಿಂದ ಯಾವುದಾದರೂ ವಸ್ತುವಿನ ನಿರ್ದಿಷ್ಟ ಪರಿಚಯವನ್ನು ಮಾಡಿಕೊಳ್ಳಬಹುದು.

೨ ನೆಯ ನಿದರ್ಶನವನ್ನು ಬಾಳ ಅನುಭವದಿಂದ ಉದಹರಿಸುತ್ತೇನೆ.

ನನಗೆ ಇಬ್ಬರು ಗಾಢ ಸ್ನೇಹಿತರಿದ್ದಾರೆ. ಒಬ್ಬಾತ ಲಾಯರು. ಅತಿ ಸೂಕ್ಷ್ಮ ಬುದ್ಧಿ, ಸಾಕಷ್ಟು ಸಂಪಾದನೆ ಇದೆ. ಸಹೋದ್ಯೋಗಿಗಳು ಕರುಬುವಷ್ಟು ಸಂಪಾದನೆ ಇದೆ. ಊರಿನ ಯಾವ ಸಂಘ ಸಂಸ್ಥೆಯಾಗಲೀ ಈ ಲಾಯರನ್ನು ಕಾರ್ಯಕಾರೀ ಸಮಿತಿಯ ಸದಸ್ಯನನ್ನಾಗಿ ನೇಮಿಸಿಕೊಂಡಿದೆ. ಯಾವ ಸಭೆಯಲ್ಲಾಗಲೀ, ಮೊದಲ ಪಂಙ್ತಿಯಲ್ಲಿ ಇವ ಕೂಡುತ್ತಾನೆ. ಎಲ್ಲರ ಕಣ್ಣಿಗೂ ಬೀಳುತ್ತಾನೆ. ಅಧ್ಯಕ್ಷರಾಗಿರುವ ಗಣ್ಯ ವ್ಯಕ್ತಿಗಳು, ಮಂತ್ರಿ ಮಹೋದಯರುಗಳು ಸಭೆಗೆ ಬರುವುದೇ ತಡ, ಇವ ಮುನ್ನುಗ್ಗಿ ಹೋಗಿ ಅವರುಗಳ ಕೈ ಕುಲುಕಿ ಸ್ವಾಗತಿಸುತ್ತಾನೆ. ಹೀಗಾಗಿ ಊರಿನಲ್ಲೆಲ್ಲಾ ಸಾಕಷ್ಟು ಪ್ರಸಿದ್ಧಿ ಹೊಂದಿದ್ದಾನೆ.

ಇನ್ನೊಬ್ಬ ಹಳೆಯ ಕಂಪನಿಯೊಂದರ ಕಾರ್ಯದರ್ಶಿ. ಅವನೂ ಬಹಳ ಜಾಣ. ಚಾರ್ಟರ್ಡ್ ಅಕೌಂಟೆಂಟ್ ಪರೀಕ್ಷೆಯಲ್ಲಿ ಪ್ರಶಸ್ತಿಯನ್ನು ಗಳಿಸಿದ್ದವ. ಕೈ ತುಂಬಾ ಸಂಬಳವೂ ಬರುತ್ತಿತ್ತು. ಆದರೆ ಓದುಬರಹದಲ್ಲಿ ಬಹಳ ಆಸಕ್ತಿ. ಮಾನವನ ಚಿತ್ರ ವಿಚಿತ್ರ ನಡವಳಿಕೆಗೆ ಮೂಲ ಪ್ರೇರಕಗಳಾವುವು ಎಂಬುದನ್ನು ಅರಿಯಲು ತವಕಪಡುತಿದ್ದ. ಅತ್ಯಗತ್ಯವಾಗಿಲ್ಲದಿದ್ದರೆ ಸಭೆ ಸಮಾರಂಭ ಮತ್ತು ಸಂತೋಷ ಕೂಟಗಳಿಗೆ ಹೋಗುತ್ತಿರಲಿಲ್ಲ. ಅಂತಹ ಕೂಟಗಳಲ್ಲಿ ಮಂದಿ ಆಡುವ ಅಜ್ಞಾನಪೂರ್ಣ ಹಾಗೂ ಅಹಂಕಾರ ಮಿಶ್ರಿತ ಸಂಭಾಷಣೆಯನ್ನು ಬೇಸರವಿಲ್ಲದೆ ಕೇಳುವುದು ಹೇಗಪ್ಪಾ! ಎಂದವ ಎಷ್ಟೋ ಬಾರಿ ನನ್ನೊಡನೆ ಹೇಳಿದ್ದ. ಆದರೆ ಸಹೃದಯರು ದೊರೆತಾಗ ಎಷ್ಟು ಹೊತ್ತಾದರೂ ಹರಟೆಯನ್ನು ಕೊಚ್ಚುತ್ತಿದ್ದ. ಅತಿ ಗಂಭೀರವಾದ ವಿಷಯಗಳನ್ನು ಅತಿ ಹಗೂರಾಗಿ ವಿಶ್ಲೇಷಿಸಿ, ನಕ್ಕು, ನಗಿಸುತಿದ್ದ. ತಾನು ಅರಿತುದನ್ನು ಲೇಖನಗಳಲ್ಲಿ ಪ್ರಚಾರ ಮಾಡುತ್ತಿದ್ದ. ಆಗಿಂದಾಗ್ಗೆ ಭಾಷಣಗಳನ್ನು ನೀಡುತ್ತಿದ್ದ.

ಒಮ್ಮೆ ಪಾರ್ಕಿನ ಬಳಿ ಸಂಜೆಯಲ್ಲಿ ಇಬ್ಬರೂ ಆಕಸ್ಮಾತ್ ನನಗೆ ಸಿಕ್ಕಿದರು. ಕಾರ್ಯದರ್ಶಿಯನ್ನು ಲಾಯರು ಕೇಳಿದ 'ಏನಯ್ಯಾ! ಬೇಡ

ಜಗಿದಂತಿದೆ. ತುಟಿಯೆಲ್ಲಾ ರಂಗಾಗಿದೆ. ಸಂದರ್ಭ 'ಏಸು' ಎಂದು. ಅವರಿಬ್ಬರೂ ಪರಮ ಮಿತ್ರರೇ ಹೌದು. ಹೈಸ್ಕೂಲಿನಲ್ಲಿ ಮತ್ತು ಕಾಲೇಜಿನಲ್ಲಿ ಜತೆ ಜತೆ ಓದಿದವರು. 'ಇವತ್ತು ಮುಖ್ಯ ಮಂತ್ರಿಗಳು ಪಾರ್ಟಿಯನ್ನು ಇಟ್ಟಿದ್ದರು. ಕರೆದಿದ್ದರು, ಅವರೇನಾದರೂ, ಹೋಗದೇ ಇದ್ದರೆ ತಪ್ಪು ತಿಳಿದುಕೊಳ್ಳುತ್ತಾರೇನೋ ಎಂದು ಹೋಗಿದ್ದೆ, ಅಲ್ಲಿಂದ ಹಿಂದಿರುಗುವಾಗ ಇವ ಇಲ್ಲಿ ಕಡಲೇಕಾಯಿ ತಿನ್ನುತ್ತಾ ಆರಾಮ ಕುಳಿತಿದ್ದ. ಇವನೊಂದಿಗೆ ಹರಟೆ ಕೊಚ್ಚೋಣ ಅಂತ ನಾನೂ ಕುಳಿತೆ. ನೀನು ಬಂದೆ, ಎಂದ. ಚೀಫ್ ಮಿನಿಸ್ಟರ್ ಪಾರ್ಟಿ ಕೊಟ್ಟರೆ, ನನ್ನಂತಹ ಗಣ್ಯರನ್ನು ಕರೆಯಲೇ ಇಲ್ಲ. ಕಾಲ ಕೆಟ್ಟು ಹೋಯಿತು. ಎಂತೆಂತ ಬಿಕನಾಸಿಗಳನ್ನು ಆಹ್ವಾನಿಸುತ್ತಾರೆ, ಎಂದು ಲಾಯರು ಉದ್ವೇಗದಿಂದ ನುಡಿದ. ಆಗ ತಿಳಿಯ ಸುಳ್ಳೊಂದನ್ನು ಕಾರ್ಯದರ್ಶಿಯು ನುಡಿದ. 'ನಿನಗೆ ಆಹ್ವಾನವು ಹೋಗಿರಲೇ ಬೇಕು.' ಏಕೆಂದರೆ ನಿನ್ನ ಗೆಳೆಯ ನಾನು ಅಂತ ಚೀಫ್ ಮಿನಿಸ್ಟರಿಗೆ ತಿಳಿದಿದೆ. ಆದಕ್ಕೇ ಅವರು 'ನಿನ್ನ ಸ್ನೇಹಿತರು ಯಾಕೆ ಬರಲಿಲ್ಲ ಅಂತ ಕೇಳಿದರು' ಎಂದ. ಲಾಯರ ಮುಖವು ತುಸು ಸಂತಸಗೊಂಡಿತು. 'ಹಾಗಾ, ಹಾಗಾದರೆ ಅಂಚೆ ಯವರು ತಪ್ಪಿರಬೇಕು' ಎಂದು ನುಡಿದ.

ಪಾರ್ಟಿಗೆ ಕರೆದಿದ್ದರು ಎಂದು ಕಾರ್ಯದರ್ಶಿಯು ಯಾವ ಸುಖ ವನ್ನಾಗಲೀ ಹೆಮ್ಮೆಯನ್ನಾಗಲೀ ಪಡಲಿಲ್ಲ, ಆದರೆ ಕರೆಯಲಿಲ್ಲವಲ್ಲ ಎಂದು ಲಾಯರು ತುಂಬಾ ಕಸಿವಿಸಿಗೊಂಡಿದ್ದರು. ಇಬ್ಬರ ಮನೋಧರ್ಮವು ತೀವ್ರ ವಿಭಿನ್ನ. ಪ್ರವೃತ್ತಿಯೂ ಪರಸ್ಪರ ವಿರೋಧ. ಲಾಯರ ಪ್ರವೃತ್ತಿಯು ಉತ್ಸವ ವಿಗ್ರಹದ ಪ್ರವೃತ್ತಿ. ಎಲ್ಲರೆದುರಿಗೂ ಮೆರೆದಾಡುವ ಇಷ್ಟ. ಕಾರ್ಯ ದರ್ಶಿಯದು ಮೂಲ ವಿಗ್ರಹದ ಪ್ರವೃತ್ತಿ. ಸಮಾನ ಧರ್ಮವಿದ್ದವರು ಹತ್ತಿರ ಬರಲಿ ಆತ್ಮೀಯವಾಗಲಿ ಎನ್ನುವ ದೃಷ್ಟಿ. ಇಂದು ಮೆರೆದು ಕುಪ್ಪಳಿಸುವ ಎಂದು ಲಾಯರ ಆಸೆ. ಇಂದು ಮರೆಯಲ್ಲಿದ್ದರೂ ಆಯಿತು. ಮುಂದೆ ಕೆಲವರಿಗಾದರೂ ನೆಮ್ಮದಿಯ ಬಾಳಿನ ರಹಸ್ಯವನ್ನು ಕಲಿಸಲು, ಇಂದು ಜ್ಞಾನ ಮತ್ತು ಅನುಭವಗಳನ್ನು ಗಳಿಸೋಣ, ಎಂಬುದು ಕಾರ್ಯದರ್ಶಿಯ ಧ್ಯೇಯ. ಇವರಿಬ್ಬರಿಗೂ ಪರಸ್ಪರ ಮೆಚ್ಚುಗೆ ಹಾಗೂ ತುಸು ಮತ್ಸರ ಇದ್ದೇ ಇದೆ. ನನ್ನ ಬಳಿ ಹೇಳಿಕೊಂಡಿದ್ದಾರೆ.

ಇದು ಏಕೆ ಎಂದು ಬಹಳಷ್ಟು ಯೋಚಿಸಿದ್ದೇನೆ. ನನಗನಿಸುತ್ತದೆ ಹೀಗೆ.

ಲಾಯರು ಸುಮಾರು ೪೦ ವರ್ಷ ಕಾಲ ಸಮಾಜದಲ್ಲಿ ಗಣ್ಯರಾಗಿರುತ್ತಾರೆ. ಅವರಿರುವ 'ದೇಶ'ದಲ್ಲಿ ಅವರು ಪಡೆದ ಪ್ರಸಿದ್ಧಿಯನ್ನೇ ನಿಖರವಾಗಿ ಅಳೆಯಲು ಸಾಧ್ಯವಾಗಿರದಿದ್ದರೂ, ನೂರರಲ್ಲಿ ಸುಮಾರು ಎಪ್ಪತ್ತು ಗಳಿಸಿರಬಹುದು, ಅನ್ನೋಣ. ಕಾಲ × ದೇಶ ಅಂದರೆ ೪೦ × ೭೦=೨೮೦೦ ಆಯಿತು. ಲಾಯರು ಸತ್ತುಹೋದ ಮೇಲೆ ಅವರನ್ನು ಸ್ಮರಿಸುವವರಾರು ಇರುವುದಿಲ್ಲ ಅವರು ಸಂಪೂರ್ಣವಾಗಿ ಸತ್ತಂತೆ. ಅವರ ಕಾಲ ೪೦ ವರ್ಷ ಮಾತ್ರ!

ಕಾರ್ಯದರ್ಶಿಯಾದರೋ ಈ ಜನ್ಮದಲ್ಲಿ 40 ವರ್ಷ ಕಳೆದಿರುತ್ತಾನೆ. ಆದರೆ ಆತ ಹೇಳಿದ್ದು ಇತರ ಕಿರಿಯರ ಮನಸ್ಸಿನಲ್ಲಿ ಪಾರಂಗತವಾಗಿ ನೂರು ವರ್ಷಗಳಾದರೂ ಉಳಿಯುತ್ತದೆ. ಅವನು ಬರೆದದ್ದೂ ನೂರು ವರ್ಷ ಕಾಲ ಜೀವಂತವಾಗಿರುತ್ತದೆ; ಆದರೆ ಜೀವಿತ ಕಾಲದಲ್ಲಿ, ಸಮಾಜದಲ್ಲಿ ಆತ ಗಳಿಸಿದ ಪ್ರಸಿದ್ಧಿ ಶತಾಂಶ ಮೂವತ್ತಕ್ಕೂ ಕಡಿಮೆ ಇದ್ದೀತು. ಎಲೆ ಮರೆಯ ಕಾಯಂತೆ ಅವ ಬಾಳ ಬಯಸಿದ್ದುದು. ಮಸಲಾ ಪ್ರಸಿದ್ಧಿಯ ಪ್ರಮಾಣವನ್ನು 28 ಎಂದಿಟ್ಟುಕೊಳ್ಳೋಣ. ಕಾಲ 100. ಅಂದರೆ ಕಾಲ ದೇಶದ ಗುಣತವು, ಇವನದೂ 2800. Space × Time = K Constant ಅಂದ ಹಾಗೆ. ಬಾಳಿನಲ್ಲಿ ಪ್ರಸಿದ್ಧಿ ಮತ್ತು ಬಾಳಿ ಸತ್ತ ಮೇಲೆ ಇತರರ ಸ್ಮರಣೆಯಲ್ಲಿರುವ ಭಾಗ್ಯ ಇವೆರಡನ್ನೂ ಗಮನಿಸಿದರೆ ಒಟ್ಟು ಫಲಿತಾಂಶ ಎಲ್ಲರದೂ ಒಂದೇ.

ಗೀತಾಚಾರ್ಯ, ವ್ಯಾಸರು ನುಡಿದ
"ವಿದ್ಯಾ ವಿನಯ ಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ.
ಶುನಿಶ್ಚ ಶ್ವಪಾಕೇಚ ಪಂಡಿತಾಃ ಸಮದರ್ಶಿನಃ.

ವಿದ್ಯಾ ವಿನಯ ಸಂಪನ್ನರಾದ ಬ್ರಾಹ್ಮಣನೂ, ಹಸುವ, ಗಜ, ನಾಯಿ, ಮತ್ತು ಸತ್ತ ಪ್ರಾಣಿಗಳ ಹಳಸಲು ಮಾಂಸವನ್ನು ತಿನ್ನುವವರು. ಇವರೆಲ್ಲರೂ ಪಂಡಿತನ ದೃಷ್ಟಿಯಲ್ಲಿ ಸರಿಸಮಾನರು. ಗವಿ, ಗಜ, ನಾಯಿ, ಶ್ವಪಾಕ ಇವರು ದೇಶದ ದೃಷ್ಟಿಯಿಂದ, Spaceನಲ್ಲಿ ಬಹು ಬಹುಸಂಖ್ಯಾತರು. ಕಾಲದ ದೃಷ್ಟಿಯಿಂದ ಒಂದು ಜನ್ಮಕ್ಕೇ ಮಿತಿಗೊಂಡವರು. ವಿದ್ಯಾವಿನಯ

ಸಂಪನ್ನರು ಬಲು ಅಲ್ಪ ಸಂಖ್ಯಾತರಾದರೂ, ಮುಂದಿನ ಪೀಳಿಗೆಗಳವರ ಮನಸ್ಸಿನಲ್ಲಿ ಬದುಕಿನ ಪ್ರಭಾವವನ್ನು ಬೀರುತ್ತಿರುತ್ತಾರೆ. ಕಾಲ × ದೇಶ = Constant ಒಂದೇ ಎಂದನ್ನಬಹುದು. ಗಂಭೀರವಾದ ಇತರ ಅರ್ಥಗಳು ಈ ಶ್ಲೋಕಕ್ಕೆ ಅನ್ವಯಿಸುತ್ತದೆ. ಈ ಅರ್ಥದಲ್ಲೂ ಸಮಂಜಸ ಎಂದು ನನ್ನ ನಮ್ರ ಬಿನ್ನಹ. ಈ ಅರ್ಥದಲ್ಲೂ 'ಪಂಡಿತಾಃ ಸಮದರ್ಶಿನಃ' ಎಂಬುದು ಅಕ್ಷರಶಃ ಸತ್ಯ.

## 5. ಕಾಲ, ದೇಶ, ಮತ್ತು ಮನಸ್ಸಿನ ಚಟುವಟಿಕೆಗಳು

ಮನಸ್ಸಿನಿಂದಲೇ ಮಾನವನು ಪ್ರಕೃತಿಯಲ್ಲಿ ಪ್ರೌಢಿಮೆಯನ್ನು ಸಾಧಿಸಿರುವುದು. ನಾನು ಬರೆಯುವುದಾಗಲೀ, ನೀವು ಓದುವುದಾಗಲೀ, ಮನಸ್ಸಿನ ಮೂಲಕವೇ. ನಿತ್ಯ ಜೀವನದ ಕೆಲಸ ಕಾರ್ಯಗಳಿಗೆ ಮನಸ್ಸನ್ನು ಬಳಸುತ್ತೇವೆ. ಸ್ವಾರ್ಥವೇ ಸುಮಾರು ಕೆಲಸ ಕಾರ್ಯಗಳಿಗೆ ಪ್ರೇರಕ. ಹಾಗಾಗಿ ಸ್ವಾರ್ಥಸುಖಕ್ಕಾಗಿ ಮನಸ್ಸನ್ನು ಬಹುಪಾಲು ಉಪಯೋಗಿಸಿಕೊಳ್ಳುತ್ತೇವೆ.

ಆದರೆ ಕೆಲವೊಮ್ಮೆ ನಿಸ್ವಾರ್ಥಿಯಾದ ಚಟುವಟಿಕೆಗಳಲ್ಲಿಯೂ ಮನಸ್ಸು ಮಗ್ನವಾಗುತ್ತದೆ. ನಿಸ್ವಾರ್ಥೀ ಮನೋ ಚಟುವಟಿಕೆಗಳು ದಿನ ದಿನದ ಬಾಳಿಗೆ ಅನಗತ್ಯವಾಗಿದ್ದರೂ, ಇವು ಮನಸ್ಸಿಗೆ ಅತಿ ಹರ್ಷವನ್ನೂ ಮತ್ತು ತೃಪ್ತಿಯನ್ನೂ ನೀಡುತ್ತವೆ.

ಬೆಳದಿಂಗಳ ಸವಿಯನ್ನು ಹಲವಾರು ಮಂದಿ ಅನುಭವಿಸುತ್ತಾರೆ. ಅದರಲ್ಲೊಬ್ಬನಿಗೆ ತಿಂಗಳ ಬೆಳಕು ಏಕೆ ತಂಪಿಗಿದೆ? ಚಂದ್ರನ ಏರಿಳಿತಗಳಿಗೆ ಕಾರಣವೇನು? ಎಂಬ ಪ್ರಶ್ನೆಗಳು ಕಾಡುತ್ತವೆ. ಅವನ ಕುತೂಹಲವು ಕೆರಳಿರುತ್ತದೆ. ಪ್ರಶ್ನೆಗಳಿಗೆ ಉತ್ತರವು ದೊರಕಿದರೆ ಆಗ ಕೆರಳಿದ ಮನಸ್ಸು ಸಮಾಧಾನವನ್ನು ಹೊಂದುತ್ತದೆ. ಕೆರಳಿದ ಕುತೂಹಲವನ್ನು ಸ್ವಾಂತನಗೊಳಿಸ ಹೋದಾಗ ವಿಜ್ಞಾನವು ಆರಂಭವಾಯಿತು. ಮಾನವನ ಜ್ಞಾನ ಭಾಂಡಾರವು ಹಿರಿದಾಗುತ್ತ ಹೋಯಿತು. ಕಾಲದ ದೃಷ್ಟಿಯಿಂದ ವಿಜ್ಞಾನದ ಪ್ರಗತಿಯನ್ನು ಪರಿಶೀಲಿಸೋಣ.

ನೂರು ವರ್ಷಗಳ ಹಿಂದೆ ವಿಜ್ಞಾನದಲ್ಲಿ ಇಪ್ಪತ್ತು ಮೂವತ್ತು ಮುಖ ವಿಭಾಗಗಳಿದ್ದುವು. ಭೌತ, ರಸಾಯನ, ಪ್ರಾಣಿ, ಸಸ್ಯ, ಭೂಗರ್ಭ

ಖಗೋಳ. ಇತ್ಯಾದಿ ಇತ್ಯಾದಿ ಶಾಸ್ತ್ರಗಳು. ಆದರೆ ಈಗ ಒಂದೊಂದು ಈ ಶಾಸ್ತ್ರಗಳಲ್ಲಿಯೂ ಹತ್ತಿಪ್ಪತ್ತು ಪ್ರೌಢ ವಿಭಾಗಗಳಿವೆ. ಒಂದೊಂದು ಪ್ರೌಢ ವಿಭಾಗಗಳಲ್ಲಿಯೂ ಹತ್ತಾರು ಮರು ವಿಭಾಗಗಳಿವೆ. ಜೀವವಿಡೀ ವ್ಯಾಸಂಗ ಮಾಡಿದರೂ ಸರಿಯಾಗಿ ತಿಳಿದುಕೊಳ್ಳಲಾಗದಂತಹ ಮರು ವಿಭಾಗಗಳು. ಒಂದು ರೀತಿಯಲ್ಲಿ ಮಾನವನ ಜ್ಞಾನ ಸಂಪಾದನೆಯು ಸ್ಫೋಟಕದ ಹಂತ ವನ್ನು ಮುಟ್ಟಿದೆ. ತಮ್ಮ ಅಭೀಷ್ಟ ಶಾಸ್ತ್ರಗಳಲ್ಲಿಯೇ ವಿಜ್ಞಾನಿಗಳಿಗೆ ಸಾಕಷ್ಟು ಅಜ್ಞಾನವಿರುವ ಹಂತಕ್ಕೆ ಏರಿದೆ. ಕಾಲಮಾನದ ದೃಷ್ಟಿಯಲ್ಲಿ ಕಳೆದ ಒಂದು ಶತಮಾನದಲ್ಲಿ ವಿಜ್ಞಾನವು ಸಾವಿರ ಸಾವಿರದಷ್ಟು ಹೆಚ್ಚಿದೆ ಅಂದರೆ Space ದೇಶದಲ್ಲಿ ವಿಜ್ಞಾನವು ಹೊರ ಹೊರವಾಗಿ ಹೊಮ್ಮುತ್ತಿದೆ, ಸಹಸ್ರಾರು ದಿಕ್ಕುಗಳಲ್ಲಿ; ಸಹಸ್ರಾರು ಶಾಸ್ತ್ರಗಳಲ್ಲಿ. ಆದರೆ ಒಂದೊಂದು ಸಾಧನೆಯೂ ಸ್ವಲ್ಪ ಕಾಲ ಮಾತ್ರ ಬಾಳುತ್ತದೆ. ಹೊಸ ಸಂಶೋಧನೆ ಗಳಿಂದ ನೂತನ ವಿಷಯಗಳ ತಿಳಿವಳಿಕೆಯಿಂದ ಹಿಂದಿನ ಸಿದ್ಧಾಂತಗಳು ಕ್ಷಯಿಸಿ ಹೋಗುತ್ತವೆ. Space ಹೆಚ್ಚಾದರೂ Time ಅಲ್ಪ.

ಬೆಳದಿಂಗಳ ಸವಿಯನ್ನು ಅನುಭವಿಸಿದ ಇನ್ನೊಬ್ಬ ಭಾವನಾಪರವಶ ನಾಗುತ್ತಾನೆ. ಅವನ ಮನಸ್ಸು ಬೆಳದಿಂಗಳಿನಿಂದ ತುಂಬುತ್ತದೆ. ಬೆಳದಿಂಗಳಿ ನೊಂದಿಗೆ ಅವನು ತಾದಾತ್ಮ್ಯನಾದ ಎನ್ನಬಹುದು. ಉಕ್ಕುತ್ತಿರುವ ಹರುಷ ದಿಂದ ಅವ ಪದ್ಯವೊಂದನ್ನು ಬರೆಯುತ್ತಾನೆ. ಹಾಡಿ ನಲಿಯುತ್ತಾನೆ. ಆ ಹಾಡಿನಿಂದ ಸುತ್ತಮುತ್ತಲಿನ ಕೆಲವರು ಹರ್ಷಗೊಳ್ಳಬಹುದು. ಆದರೆ ಅವನ ಕಾಲದಲ್ಲಿ ಪ್ರಪಂಚದ ಬಹುಪಾಲು ಜನರ ಮೇಲೆ ಯಾವ ಪ್ರಭಾವವೂ ಬೀಳುವುದಿಲ್ಲ. ಆದರೆ ನೂರಾರು ವರ್ಷಗಳಾದ ಮೇಲೂ ಆ ಹಾಡನ್ನು ಕೇಳಿದ ಹಲವರಾದರೂ ಹರ್ಷಪಡುತ್ತಾರೆ. ಹಾಡಿದವನು ಪಟ್ಟ ಸುಖವು ಎಷ್ಟಿತ್ತೋ, ಪ್ರಾಯಃಶಃ ಅಷ್ಟೇ ಸುಖವನ್ನು ಸಹೃದಯರು ಇಂದು ಕೇಳಿ ದಾಗಲೂ ಪಡುತ್ತಾರೆ. ಅಂದರೆ ಐದಾರು ಶತಮಾನಗಳು ಕಾಲ ಮುಂದು ವರಿದಿದ್ದರೂ, ದೊರೆತ ಸುಖವು ಒಂದೇ ಹಂತದ್ದು. ಭಾವನಾ ಅನುಭವಗಳ ದೃಷ್ಟಿಯಿಂದ ಕಾಲವು ಯಾವ ಪ್ರಗತಿಯನ್ನೂ ಸಾಧಿಸಿಲ್ಲ. ಇವೆಲ್ಲವನ್ನೂ ಕಾಲಾತೀತವಾದುವು ಎಂದೆನ್ನುವುದು ಈ ದೃಷ್ಟಿಯಿಂದ. ಅಂದರೆ ಕಾಲದ

ಎಣಿಕೆಯಲ್ಲಿ ಭಾವನಾ ಚಟುವಟಿಕೆಗಳು Infinity ಅನ್ನು ಮುಟ್ಟಿವೆ ಎನ್ನ ಬಹುದು.

ಮಾನವನ ಮನಸ್ಸಿನ ನಿಸ್ವಾರ್ಥೀ ಚಟುವಟಿಕೆಗಳಲ್ಲಿ ವಿಜ್ಞಾನ ಮತ್ತು ಭಾವನಾ ಭಾಗಗಳು ಜತೆಯಲ್ಲಿ ಹುಟ್ಟಿದುವು. ಜತೆಯಲ್ಲಿ ಬೆಳೆದುವು. ಜತೆ ಜತೆ ಸಖ್ಯ ಹೊಂದಿರುವುವು. ವಿಜ್ಞಾನವು ಕಾಲವು ಮುಂದುವರಿದಂತೆಲ್ಲಾ Space ದೇಶದಲ್ಲಿ ಹೊರವಾಗುತ್ತದೆ. ಭಾವನಾ ಅನುಭವವು ಒಂದೇ ಮಟ್ಟದ ಪೂರ್ಣ ಸಂತಸವನ್ನು ನೀಡುವ ಸಾಧನವಾಗಿರುತ್ತದೆ. ಇವೆರಡನ್ನೂ ಸಮನ್ವಯಗೊಳಿಸಿ ಬಾಳಿದರೆ ಮನಸ್ಸಿಗೆ ನೆಮ್ಮದಿ ಉಂಟು. ಇಲ್ಲದೆ ವಿಜ್ಞಾನವೇ ಅತಿಯಾದರೆ, ಖಿನ್ನತೆಯನ್ನೇನೋ ನೀಡುತ್ತದೆ. ಆದರೆ ಜ್ಞಾನದ ದಾಹ ಹೆಚ್ಚುತ್ತಲೇ ಇರುತ್ತದೆ. ಬಾಯಾರಿದವನಿಗೆ ಉಪ್ಪುನೀರು ಕುಡಿಸಿದಂತೆ. ವಿಜ್ಞಾನಾರ್ಜನೆಗೆ ಅಂತ್ಯವೇ ಇರುವುದಿಲ್ಲವೇನೋ? ಆದರೆ ಭಾವನಾ ಅನುಭವಗಳಿಂದ ಸಂತುಷ್ಟಿಯು ದೊರಕುತ್ತದೆ. ನೆಮ್ಮದಿಯು ದೊರಕುತ್ತದೆ. ಬಾಳು ಅರ್ಥಪೂರ್ಣವಾಗುತ್ತದೆ; ನಿರಾತಂಕವಾಗುತ್ತದೆ.

ವಿಜ್ಞಾನದ ಪ್ರಗತಿ Space ? × ಭಾವನಾ ಅನುಭವದ ಪ್ರಗತಿ time = 0 = Constant ಎಂದು ವಿಜ್ಞಾನಿಗಳು ಫಾರ್ಮುಲಾ ಬರೆಯ ಬಹುದು.

# ಅಧ್ಯಾಯ-೧

## ಭೌತಶಾಸ್ತ್ರದಲ್ಲಿ ಕಾಲ

ಭೌತಶಾಸ್ತ್ರವು ವಿಜ್ಞಾನದ ಇತರ ಪ್ರಕಾರಗಳಲ್ಲಿ ಮೂಲಭೂತವಾದುದು. ಏಕೆಂದರೆ ವಸ್ತುವಿನ ಹಾಗೂ ಶಕ್ತಿಯ ಗುಣಗಳನ್ನು (Properties) ಕಂಡುಹಿಡಿದು, ಅವುಗಳನ್ನು ನಿಖರವಾಗಿ ಅಳೆಯುವುದು ಭೌತ ಶಾಸ್ತ್ರದ ವ್ಯಾಪ್ತಿಗೆ ಒಳಪಟ್ಟುದು. ವಿಜ್ಞಾನದ ಇತರ ಶಾಸ್ತ್ರಗಳು ವಸ್ತು ಮತ್ತು ಶಕ್ತಿಯ ಆಧಾರದ ಮೇಲೆ ಬೆಳೆದವುಗಳೇ; ಜೀವಶಾಸ್ತ್ರವಾಗಲಿ, ಪ್ರಾಣಿಶಾಸ್ತ್ರವಾಗಲೀ, ಸಸ್ಯಶಾಸ್ತ್ರವಾಗಲೀ, ಕಡೆಗೆ ಮನೋಶಾಸ್ತ್ರವಾಗಲೀ, ವಸ್ತು ಮತ್ತು ಶಕ್ತಿಗಳ ಆಧಾರವನ್ನು ಹೊಂದಿದುವು.

ವಸ್ತುವಿನ ಗುಣಗಳನ್ನು ವಿವರಿಸುವಾಗ, ಪ್ರತಿ ಒಂದು ವಸ್ತುವೂ, ಆದರ ತೂಕವು ಏನೇ ಆಗಿರಲಿ, ಎತ್ತರದಿಂದ ಕೆಳಕ್ಕೆ ಬೀಳುವಾಗ ಪ್ರತಿ ಸೆಕೆಂಡಿಗೂ, ಸೆಕೆಂಡಿಗೆ 32 ಅಡಿಯಷ್ಟು ವೇಗವಾಗುತ್ತ ಬೀಳುತ್ತದೆ ಎಂದರು. ವಸ್ತುವು ಮೇಲಿನಿಂದ ಕೆಳಕ್ಕೆ ಏಕೆ ಬೀಳುತ್ತದೆ? ಭೂಮಿಯ ಗ್ರಾವಿಟೇಷನ್ ಶಕ್ತಿಯು ಅದನ್ನು ಸೆಳೆಯುತ್ತದೆ. ಗ್ರಾವಿಟೇಷನ್ ಶಕ್ತಿಯ ಪ್ರಮಾಣವು ಎಷ್ಟು ಎಂಬುದನ್ನು 32 feet per second, per second ಎಂದು ನಿಖರವಾಗಿ ಹೇಳಿದರು. ಒಂದು ಸೆಕೆಂಡಿಗೆ, ಅಂದರೆ ಕಾಲದ ಒಂದು ಅಳತೆಗೆ, ವಸ್ತುವು 32 ಅಡಿಗಳಷ್ಟು ದೂರ ಬಿದ್ದಿತು.

ಕಾಲದ ಅಳತೆಯು ಭೌತಶಾಸ್ತ್ರದಲ್ಲಿ ಎಷ್ಟು ಅವಶ್ಯಕವಾದುದು ಎಂಬುದು ಈ ನಿದರ್ಶನದಿಂದ ಸ್ವಯಂ ಸಿದ್ಧವಾಗುತ್ತದೆ. ಭಾರ ಅಥವ ತೂಕ ಅಂದರೆ ಗುರುತ್ವಾಕರ್ಷಣೆ, gravitation ಶಕ್ತಿಯ ಅಳತೆ. ಬೆಳಕು, ಶಬ್ದ, ವಿದ್ಯುತ್ ಶಕ್ತಿ, ಆಯಸ್ಕಾಂತ ಶಕ್ತಿ, ಇವೆಲ್ಲವೂ ಶಕ್ತಿಯ ವಿವಿಧ ರೂಪಗಳು. ಈ ವಿವಿಧ ಶಕ್ತಿಗಳ ಗುಣಗಳಲ್ಲಿ ಮುಖ್ಯವಾದುದು ಅವುಗಳ ವೇಗ. ವೇಗವನ್ನು ಅಳೆಯಬೇಕಾದರೆ ನಿಖರವಾದ ಕಾಲದ ಅಳತೆ

ಇರಬೇಕು. ಸೆಕೆಂಡ್ ಅನ್ನುವುದು ಅಂತಹ ಕಾಲದ ಅಳತೆ. ಆದರೆ ಸೆಕೆಂಡ್ ಎಂದರೇನು? ಇಂದು ಮಧ್ಯಾಹ್ನ ನೆತ್ತಿಯ ಮೇಲೆ ಸೂರ್ಯನು ಕಾಣಿಸಿಕೊಂಡ ಹೊತ್ತಿನಿಂದ, ನಾಳೆ ಅಲ್ಲಿ ಕಾಣಿಸಿಕೊಳ್ಳುವ ಅಂತರವನ್ನು 24 ಗಂಟೆಗಳು ಎಂದು ಕಾಲ್ಪನಿಕವಾಗಿ ಭಾಗಿಸಿದರು. 24ಕ್ಕೆ ಬದಲು ನೂರು ಗಂಟೆ ಅಂತಲೂ ಭಾಗಿಸಬಹುದಾಗಿತ್ತು ಅಥವ ಹತ್ತು ಎಂದೂ ಅನ್ನಬಹುದಿತ್ತು. ಆದಕಾರಣವೇ 24 ಎಂಬುದನ್ನು ಕೇವಲ ಕಾಲ್ಪನಿಕ ಎನ್ನುವುದು, ಒಂದೊಂದು ಗಂಟೆಯನ್ನೂ 60 ನಿಮಿಷಗಳು, ಒಂದೊಂದು ನಿಮಿಷವೂ 60 ಸೆಕೆಂಡುಗಳು ಎಂದು ಕಾಲ್ಪನಿಕವಾಗಿಯೇ ಮರು ವಿಭಾಗಿಸಿದರು. ಕಾಲದ ಅಳತೆಯು ಈ ರೀತಿ ಕಾಲ್ಪನಿಕವಾದರೂ, ಭೌತಶಾಸ್ತ್ರದ ಆಧಾರಗಳಲ್ಲೊಂದಾದ ಅದರಿಂದ ಏನೆಲ್ಲಾ ಪ್ರಗತಿಯನ್ನು ಸಾಧಿಸಲಾಗಿದೆ! ಗುರುತ್ವಾಕರ್ಷಣೆಯನ್ನು ಮೀರಿದ ಎತ್ತರದಲ್ಲಿ ಮಾನವನು ಹಾರಾಡಿದ್ದಾನೆ, ತೂಕರಹಿತನಾಗಿ. ಚಂದ್ರನ ಮೇಲೆ ನಡೆದಿದ್ದಾನೆ. ಭೌತಶಾಸ್ತ್ರದ ಪ್ರಗತಿ, ಖಗೋಳ ಶಾಸ್ತ್ರದ ವಿಜ್ಞಾನ ಮತ್ತು ಅಚ್ಚರಿ ತರುವ ಯಾಂತ್ರಿಕ ಸಾಧನೆಗಳು, ಇವೆಲ್ಲದರ ಸಮನ್ವಯದಿಂದ ಮಾನವನ ಬಾಹ್ಯಾಕಾಶ ಪ್ರಗತಿಯು ಅತ್ಯಧ್ಭುತವಾಗಿ ನಡೆದಿದೆ.

ಆದರೆ ಇದೆಲ್ಲಕ್ಕೂ ಕಾಲ್ಪನಿಕವಾದ, ಕೃತಕವಾದ, ಕಾಲದ ಅಳತೆಯು ಮೂಲಭೂತ ಆಧಾರಗಳಲ್ಲೊಂದು!

ಆದಕಾರಣ ಭೌತವಿಜ್ಞಾನಿಗಳು ಬಲು ಹಿಂದಿನಿಂದಲೂ 'ಕಾಲ' ಎಂದರೇನು? ಇದರ ಶುದ್ಧ ಸ್ವರೂಪವೇನು? ಇದರ ಗುಣಗಳೇನು? ಎಂದು ಚಿಂತನ ಮಾಡತೊಡಗಿದರು. ಹೀಗೆ ಚಿಂತನ ಮಾಡಿದವರಲ್ಲಿ ಐಸಕ್ ನ್ಯೂಟನ್ನನೂ ಒಬ್ಬ. ಭೌತಶಾಸ್ತ್ರವನ್ನು ಮುನ್ನಡೆಸಿಕೊಂಡು ಬಂದ ಮೇಧಾವಿಗಳಲ್ಲಿ ನ್ಯೂಟನ್ನನು ಅಗ್ರಗಣ್ಯನೆನ್ನಬಹುದು. ಗುರುತ್ವಾಕರ್ಷಣೆಯ ರೂಪುರೇಷೆಗಳನ್ನು ಅಣಿಯಾಗಿ ವಿವರಿಸಿದ ಕೀರ್ತಿ ಅವನದು. ಬೆಳಕು ಎನ್ನುವ ಶಕ್ತಿಯ ಸ್ವರೂಪವನ್ನು ಅಚ್ಚುಕಟ್ಟಾಗಿ ವೀಕ್ಷಣೆ ಮಾಡಿದ ಮೊದಲಿಗ. ಅಂತಹ ಮೇಧಾವಿ ಪ್ರಚಂಡನು ಕಾಲದ ವಿಷಯದಲ್ಲಿ ಚಿಂತನಮಾಡಿ ಈ ರೀತಿ ಹೇಳಿದ.

**'Absolute, true, and mathematical Time, of itself and from it's own nature flows equally, without relation to anything external' (in PRINCIPIA)**

'ಅತಿ ಶುದ್ಧವಾದ, ಸತ್ಯವಾದ, ಗಣಿತದ ಕಾಲವು ತನ್ನಷ್ಟಕ್ಕೆ ತಾನೇ ಅದರ ಸ್ವಭಾವದಿಂದ ಹೊರಗಿನ ಇತರ ಪ್ರಭಾವಗಳಿಗೆ ಒಳಗಾಗದೆ ಒಂದೇ ಗತಿಯಲ್ಲಿ ಅನೇಕ ವೇಗದಲ್ಲಿ ಹರಿಯುತ್ತದೆ'

ಆ ತನಕ ವಿಜ್ಞಾನಿಗಳಲ್ಲದ ಇತರ ಮನನಿಗರು ಮತ್ತು ದ್ರಷ್ಟಾರರೂ ಇದೇ ಅಭಿಪ್ರಾಯವನ್ನು ಹೊಂದಿದ್ದರು. ಕಾಲವು ಒಂದು ಅನಂತ ವಾಹಿನಿ. ಮುಂದು ಮುಂದಕ್ಕೆ ಹರಿಯುತ್ತಲೇ ಇರುತ್ತದೆ. ಇದನ್ನು ನಿಲ್ಲಿಸಲಾಗಲೀ, ಹಿಂದಿರುಗಿಸಲಾಗಲೀ, ಸಾಧ್ಯವೇ ಇಲ್ಲ. ಇದೆಂದು ಪ್ರಾರಂಭವಾಯಿತು. ಎಲ್ಲಿ ಪ್ರಾರಂಭವಾಯಿತು, ಎಲ್ಲಿ ಇದು ಅಂತ್ಯಗೊಳ್ಳುತ್ತದೆ, ಇವನ್ನು ಯಾರೂ ಊಹಿಸಲೂ ಅರಿಯರು.

ನಿನ್ನೆ, ಇವತ್ತು, ನಾಳೆ, ಹೀಗೆ ಕಾಲದ ನಿರಂಕುಶ ಗತಿ. ನಿನ್ನೆಯನ್ನು ಮರಳಿ ಪಡೆಯುವುದು ಅಸಾಧ್ಯ. ಇವತ್ತನ್ನು ನಾಳೆ ಪಡೆಯುವುದು ಅಷ್ಟೇ ಅಸಾಧ್ಯ: ಇದು ನಮ್ಮ ನಿತ್ಯ ಅನುಭವ. 'ನಿನ್ನೆ' ಕಳೆದು ಹೋದುದನ್ನು ಯಾವ ರೀತಿಯಿಂದಲೂ ಮರಳಿ ಪಡೆಯಲು ಅಸಾಧ್ಯ ಎಂಬುದೂ ತಿಳಿದಿದೆ. 'ಕಾಲವನ್ನು ಕಳೆಯಬೇಡ, ಸದುಪಯೋಗವನ್ನು ಮಾಡಿಕೊಳ್ಳಬೇಕು' ಎಂಬುದು ಹಿರಿಯರ ಹಿತವಾದ, ನಮಗೆ. 'Time and tide wait for no man' ಎಂಬ ನಾಣ್ಣುಡಿ.

'ಹಣ ಹೋದರೆ ಮರಳಿ ಪಡೆಯಬಹುದು; ಹೆಣ್ಣು ಸತ್ತರೆ, ಇನ್ನೊಂದು ಚಂದೊಳ್ಳಿ ಹೆಣ್ಣನ್ನು ಪಡೆಯಬಹುದು, ಆದರೆ ಕಳೆದ ಕಾಲವನ್ನು ಪಡೆಯುವುದು ಅಸಾಧ್ಯ' ಎಂದಂದಿದ್ದರು, ಹಿರಿಯರು.

ಇವರೆಲ್ಲರೂ ಹೇಳಿದುದನ್ನೇ ನ್ಯೂಟನ್ನನು ಸ್ಪಷ್ಟವಾಗಿ ನುಡಿದ.

ಆದರೆ, ಹರಿಯುವ ಪ್ರವಾಹಕ್ಕೆ, ನಿರಂಕುಶವಾಗಿ ಹರಿಯುವ ನದಿಯ ಪ್ರವಾಹಕ್ಕೆ ಕಾಲವನ್ನು ಹೋಲಿಸುವುದು ಬಲು ಸುಂದರವಾಗಿ ಕಂಡರೂ, ಲೋಪದೋಷಗಳು ಇಲ್ಲದೇ ಇಲ್ಲ; ಪ್ರವಾಹವು ಹರಿಯುವಾಗ, ಇಕ್ಕೆಲಗಳಲ್ಲೂ ದಡವಿರುತ್ತದೆ; ಪ್ರವಾಹದ ಗತಿಯನ್ನು ಅಂಕೆಯಲ್ಲಿಟ್ಟು ಗುರುತಿಸಲು. ಆದರೆ ಕಾಲಕ್ಕೆ ದಡಗಳು, ದಂಡೆಗಳು, ಉಂಟೇ? ಖಂಡಿತವಾಗಿಯೂ ಇಲ್ಲ; ನಮ್ಮ ಅನುಭವ ಪೂರಿತ, ವೈಜ್ಞಾನಿಕ ಸಿದ್ಧಾಂತದ ಪ್ರಕಾರ! ಪ್ರವಾಹವು ಮೇಲಿನ ಮಟ್ಟದಿಂದ ಕೆಳಕೆ ಹರಿಯುತ್ತದೆ. ಅಂದರೆ ಕಾಲವೂ

ಹಾಗೆಯೇನೇ? ಯಾವ ಮೇಲ್ಮಟ್ಟದಿಂದ ಹರಿಯಲಾರಂಭಿಸಿತು? ಯಾವ ಮಟ್ಟದಲ್ಲಿ ಹರಿಯಲಾರದೆ ನಿಂತು ಹೋಗುತ್ತದೆ? ಹರಿಯಲಾಗದೆ ನಿಂತ ಕಾಲವನ್ನು ಕಾಲ ಎಂದು ಕರೆಯಬಹುದೇ? ಇಂತಹ ಅರ್ಥಗರ್ಭಿತ ಲೋಪದೋಷಗಳೂ ಕಾಣಬರುತ್ತವೆ. ಹಿರಿಯ ದೋಷಗಳು ಈ ರೀತಿ ಇದ್ದರೂ ಸುಮಾರು ೭೦–೮೦ ವರ್ಷಗಳ ಹಿಂದಿನ ತನಕ ಭೌತ ವಿಜ್ಞಾನಿಗಳು ನ್ಯೂಟನ್ ಹೇಳಿದುದನ್ನು ಸಂಪೂರ್ಣವಾಗಿ ನಂಬಿದ್ದರು.

ಆದರೆ ೧೮೮೧ರಲ್ಲಿ ಈ ನಂಬಿಕೆಯು ತಪ್ಪೇನೋ ಎನಿಸತೊಡಗಿತು. ಏಕೆಂದರೆ ಆ ವರ್ಷ ಮಿಚಲ್‌ಸನ್ ಎಂಬ ಪ್ರಖ್ಯಾತ ವಿಜ್ಞಾನಿ ತನ್ನ ಪ್ರಯೋಗಗಳಿಂದ ದೊಡ್ಡ ಸಮಸ್ಯೆಯನ್ನು ಮುಂದಿರಿಸಿದ. ಪರಿಹರಿಸಲಾಗದಂತಹ ಸಮಸ್ಯೆ.

ಆತ, ಬೆಳಕಿನ ವೇಗವನ್ನು ಅತಿ ಸೂಕ್ಷ್ಮ ಹಾಗೂ ನಿಖರವಾಗಿ ಅಳೆಯತೊಡಗಿದ್ದ. ಆತನ ಕಾಲದಲ್ಲಿ ಬೆಳಕು, ಸದ್ದಿನಂತೆಯೇ ಅಲೆಗಳೋಪಾದಿಯಲ್ಲಿ ಸಾಗುತ್ತದೆ ಎಂದು ಭೌತ ವಿಜ್ಞಾನಿಗಳು ನಂಬಿದ್ದರು. ಗಾಳಿಯಲ್ಲಿ ಸದ್ದು ಅಲೆಗಳಂತೆ ಸಾಗುತ್ತದೆ. ನದಿಯ ನೀರಿನಲ್ಲಿ ಅಲೆಗಳು ದಡದತ್ತ ಸಾಗುವುದಿಲ್ಲವೇ, ಹಾಗೆಯೇ. ಗಾಳಿಯಲ್ಲಿ ಅಲೆಗಳ ಹಾಗೆ ಸದ್ದು ಸಾಗುತ್ತದೆ. ಆದರೆ ಗಾಳಿ ಇಲ್ಲದೆ ಇರುವ ಸ್ಥಳದಲ್ಲಿ ಸದ್ದು ಸಾಗುವುದೇ ಇಲ್ಲ ಅಂದರೆ ಸದ್ದು ಸಾಗಬೇಕಾದರೆ ಗಾಳಿಯು ಇರಲೇಬೇಕು. ಗಾಳಿಗೆ ಬದಲಾಗಿ ಲೋಹಗಳಿದ್ದರೂ ಸದ್ದು ಸಾಗುತ್ತದೆ. ಏಕೆಂದರೆ ಲೋಹಗಳಲ್ಲಿ ಅಲೆಗಳನ್ನು ಎಬ್ಬಿಸಿ ಆ ರೀತಿ ಅದು ಸಾಗುತ್ತದೆ. ಆದರೆ ಮರದಲ್ಲಿ ಸದ್ದು ಅಷ್ಟು ಚೆನ್ನಾಗಿ ಸಾಗುವುದಿಲ್ಲ. ಏಕೆಂದರೆ ಮರದ ಕಣಗಳು ಅಲೆಅಲೆಯಾಗಿ ತರಂಗವೇಳಲು ಸಾಧ್ಯವಿಲ್ಲ. ಈ ಗುಣವನ್ನು ಬಳಸಿಕೊಂಡು, ಎರಡು ಅಕ್ಕಪಕ್ಕದ ಕೊಠಡಿಗಳ ಮಧ್ಯೆ ಇರುವ ಗೋಡೆಯಲ್ಲಿ ಮರದ ಹೊಟ್ಟನ್ನು ತುಂಬುವುದುಂಟು. ಆ ಕೊಠಡಿಯಲ್ಲಿ ಆದ ಸದ್ದು ಈ ಕೊಠಡಿಗೆ, ಪಕ್ಕದಲ್ಲಿದ್ದರೂ ಕೇಳಿಸದಂತೆ, ಮರದಹೊಟ್ಟು ಸದ್ದನ್ನು ತಡೆಗಟ್ಟುತ್ತದೆ.

ಬೆಳಕೂ, ಸದ್ದಿನಂತೆಯೇ, ಅಲೆಯಲೆಯಾಗಿ ಸಾಗುತ್ತದೆ. ಆದರೆ ಇದರ ಮುಂದುವರಿಕೆಗೆ ಗಾಳಿಯ ಅಗತ್ಯವಿಲ್ಲ. ಸೂರ್ಯಮಂಡಲದಿಂದ ಭೂಮಿಗೆ ಬೆಳಕು ಹರಿದು ಬರುತ್ತದೆ. ಆದರೆ ಭೂಮಂಡಲದ ಮೇಲೆ

ಹಲವಾರು ಮೈಲಿಗಳು ಮಾತ್ರ ಗಾಳಿಯು ಇರುತ್ತದೆ. ನಂತರ ಗಾಳಿಯು ಅತಿ ವಿರಳವಾಗಿ, ಆ ಮೇಲೆ ಲಕ್ಷಾಂತರ ಮೈಲಿಗಳಷ್ಟು ದೂರ ಕೇವಲ ಶೂನ್ಯ ವಿರುತ್ತದೆ. ಶೂನ್ಯದಲ್ಲಿ ಅಲೆಗಳು ಹರಡಲು ಹೇಗೆ ಸಾಧ್ಯ ? ಈ ಕಾರಣ ದಿಂದಾಗಿ ಭೌತ ವಿಜ್ಞಾನಿಗಳು ಎಲ್ಲೆಲ್ಲಿಯೂ 'ಈತರ್' ಎಂಬ ವಸ್ತುವು ಇರುತ್ತದೆ, ಶೂನ್ಯದಲ್ಲಿಯೂ ಇದು ಇದ್ದೇ ಇರುತ್ತದೆ, ಎಂದು ಸಿದ್ಧಾಂತ ವೊಂದನ್ನು ಮಾಡಿಕೊಂಡರು. ಅತಿ ಹಗುರವಾದ 'ಈತರಿ'ನ ಗುಣಗಳನ್ನು ಪ್ರಯೋಗಗಳಿಂದ ಸಾಕ್ಷೀಪಡಿಸಲು ಸಾಧ್ಯವಿಲ್ಲ. ಆದರೂ ಅದು ಇರಲೇ ಬೇಕು ಎಂದು ತೀರ್ಮಾನಿಸಿದರು.

ಮಿಚಲ್‌ಸನ್ ಮತ್ತು ಮಾರ್ಲಿ, ಪ್ರಯೋಗಾರ್ಥ ಪರೀಕ್ಷೆಯೊಂದನ್ನು ನಡಸಿದರು. ಸೂರ್ಯಮಂಡಲದ ಸುತ್ತ ತನ್ನ ನಿಯಮಿತ ಕಕ್ಷೆಯಲ್ಲಿ ಭೂಮಂಡಲವು ಸುತ್ತುತ್ತಿದೆ. ಭೂಮಿಯ ವೇಗವು ಸುಮಾರು 20 ಮೈಲಿಗಳು ಪ್ರತಿ ಸೆಕೆಂಡಿಗೆ. ಭೂಮಿಯು ಚಲಿಸುತ್ತಿರುವ ದಿಕ್ಕಿನಲ್ಲಿ ಬೆಳಕಿನ ಕಿರಣ ವೊಂದನ್ನು ಹರಿಸಿದರೆ, ಕಿರಣದ ವೇಗವು ಬೆಳಕಿನ ವೇಗ ಅಂದರೆ 1,86,284 ಮೈಲಿಗಳು, ಪ್ರತಿ ಸೆಕೆಂಡಿಗೆ + ಮತ್ತು ಭೂಮಿಯ ವೇಗ 20 ಮೈಲಿಗಳು ಪ್ರತಿ ಸೆಕೆಂಡಿಗೆ ಒಟ್ಟು 1,86,304 ಮೈಲಿಗಳು ಪ್ರತಿ ಸೆಕೆಂಡಿಗೆ ಆಗಿರಬೇಕು. ಆದರೆ ಭೂಮಿಯು ಚಲಿಸುತ್ತಿರುವ ದಿಕ್ಕಿಗೆ ಎದುರಾಗಿ ಕಿರಣವನ್ನು ಹರಿಸಿದರೆ ಆಗ ಕಿರಣದ ವೇಗವು 1,86,284–20=1,86,264 ಮೈಲಿಗಳು ಪ್ರತಿ ಸೆಕೆಂಡಿಗೆ ಆಗಬೇಕು. ಹೀಗಾಗುತ್ತದೆಯೇ ಎಂಬುದನ್ನು ಪರೀಕ್ಷಾಪ್ರಯೋಗ ದಿಂದ ಕಂಡುಹಿಡಿಯತೊಡಗಿದರು. ಮಿಚಲ್‌ಸನ್ ಮತ್ತು ಮಾರ್ಲಿ ಇಂತಹ ಸೂಕ್ಷ್ಮ ಪರೀಕ್ಷೆಗೆ ಅತ್ಯಗತ್ಯವಾದ ಯಂತ್ರಗಳನ್ನು ರಚಿಸಿದರು. ಅಂತಹ ಯಂತ್ರದ ಹೆಸರು Interferometer. ಇದನ್ನು ಬಳಸಿ ಪ್ರಯೋಗವನ್ನು ನಡಸಿದಾಗ, ಅವರಿಗೆ ದೊರೆತ ಫಲವೇನು ಗೊತ್ತೆ ? ಬೆಳಕಿನ ವೇಗವು ಎರಡೂ ದಿಕ್ಕುಗಳಲ್ಲಿ ಹರಿದಾಗಲೂ ಒಂದೇ ಆಗಿತ್ತು ! ಇದು ಹೇಗೆ ಸಾಧ್ಯ ?

ಇದನ್ನು ಸುಲಭವಾಗಿ ಅರ್ಥಮಾಡಿಕೊಳ್ಳಲು ಸಾಮಾನ್ಯ ಸಾಮತಿ ಯೊಂದನ್ನು ಕೊಡುತ್ತೇನೆ. ಬೈಸಿಕಲ್ಲಿನ ಮೇಲೆ ಗಂಟೆಗೆ ಹತ್ತು ಮೈಲಿ ವೇಗದಲ್ಲಿ ಹೋಗುತ್ತಿದ್ದೇನೆ ಎನ್ನುವ. ಎದುರುಗಾಳಿಯು ಜೋರಾಗಿ ಬೀಸಿದರೆ ಬೀಸುತ್ತಲೇ ಇದ್ದರೆ, ನನ್ನ ವೇಗವು ಗಂಟೆಗೆ ಎಂಟು ಮೈಲಿ ಆಗುತ್ತದೆ ಅನ್ನಿ.

ಆದರೆ ಗಾಳಿಯು ನನ್ನ ಬೆನ್ನಕಡೆಯಿಂದ ಮುಂದಕ್ಕೆ ಬೀಸುತ್ತಿದ್ದರೆ, ಗಂಟೆಗೆ ಹನ್ನೆರಡು ಮೈಲಿ ಸವಾರಿ ಮಾಡುತ್ತೇನೆ. ನನ್ನ ಶ್ರಮವು ಒಂದೇ ಮಟ್ಟದ್ದಿದ್ದರೂ, ಎದುರು ಗಾಳಿಯು ನನ್ನ ವೇಗಕ್ಕೆ ಸ್ವಲ್ಪ ತಡೆಯನ್ನುಂಟುಮಾಡುತ್ತದೆ. ಬೆನ್ನಕಡೆ ಗಾಳಿಯು ಕುಮ್ಮಕ್ಕನ್ನು ಕೊಡುತ್ತದೆ. ಒಂದಲ್ಲ ಒಂದು ರೀತಿಯಲ್ಲಿ ಇಂತಹ ಅನುಭವವು ಎಲ್ಲರಿಗೂ ಆಗಿರುತ್ತದೆ.

ಬೆಳಕಿನ ಕಿರಣಕ್ಕೂ ಈ ನೀತಿಯು ಅನ್ವಯಿಸಲೇಬೇಕು. ಭೂಮಿಯು ಚಲಿಸುತ್ತಿರುವ ದಿಕ್ಕಿನಲ್ಲಿ ಬೆಳಕು ಹರಿದಾಗ, ಬೆಳಕಿನ ವೇಗಕ್ಕೆ ಭೂಮಿಯ ವೇಗವು ಕೂಡಿಕೊಳ್ಳಬೇಕು. ಎದುರು ದಿಕ್ಕಿನತ್ತ ಹರಿದಾಗ ಬೆಳಕಿನ ವೇಗಕ್ಕಿಂತ ಭೂಮಿಯ ವೇಗದಷ್ಟು ಕಡಿಮೆಯಾಗಬೇಕು.

ಆದರೆ ಮಿಚಲ್‌ಸನ್ ಮತ್ತು ಮಾರ್ಲಿಯವರ ಪರೀಕ್ಷಾಪ್ರಯೋಗದಿಂದ ದೊರೆತ ಫಲಿತಾಂಶವು ಬೆಳಕಿನ ವೇಗವು, ಯಾವ ದಿಕ್ಕಿನಲ್ಲಿ ಕಿರಣವು ಸಾಗಿದರೂ, ಒಂದೇ ಆಗಿರುತ್ತದೆ ಎಂಬುದಾಗಿತ್ತು. ಅಂದರೆ $2+2=4$ ಎಂಬ ಲೆಕ್ಕವು ತಪ್ಪಾಗಿರಬೇಕು. ಅಥವಾ ಪರೀಕ್ಷಾಪ್ರಯೋಗವು ತಪ್ಪಾಗಿರಬೇಕು. ಪರೀಕ್ಷಾಪ್ರಯೋಗವನ್ನು ಹಲವಾರುಬಾರಿ ಅತಿ ಜಾಗರೂಕತೆಯಿಂದ ಮಾಡಿದಾಗಲೂ ಒಂದೇ ಫಲಿತಾಂಶವು ದೊರಕಿತು. ಅಂದರೆ $2+2=4$ ಎಂಬ ಗಣಿತ ಶಾಸ್ತ್ರದ ಲೆಕ್ಕವು ತಪ್ಪು ! ಅಥವಾ ಭೂಮಿಯು ಚಲಿಸುತ್ತಲೇ ಇಲ್ಲ !

ಭೌತವಿಜ್ಞಾನಿಗಳ ಪ್ರಪಂಚದಲ್ಲಿ ಮಿಚಲ್‌ಸನ್ ಮತ್ತು ಮಾರ್ಲಿಯವರು ಮುಂದಿಟ್ಟ ಸಮಸ್ಯೆಯು ಅತಿ ಕ್ಲಿಷ್ಟವೂ, ಪರಿಹರಿಸಲು ಅಸಾಧ್ಯವೂ ಆಯಿತು.

ಸುಪ್ರಸಿದ್ಧ ಭೌತವಿಜ್ಞಾನಿ ಎಡ್ಡಿಂಗ್‌ಟನ್ ಉದ್ಗರಿಸಿದ 'This experiment is the Prince of Denmark in the Physicist's enactment of Hamlet.' ಎಂದು.

1905ರ ತನಕ ಈ ಸಮಸ್ಯೆಯು ಭೌತವಿಜ್ಞಾನದ ಪ್ರಪಂಚದಲ್ಲಿ ಸಮಸ್ಯೆಯಾಗಿಯೇ ಉಳಿದಿತ್ತು. ಆ ವರ್ಷ ಐನ್‌ಸ್ಟೈನ್ ಮಹಾಶಯನು ಸಾಕ್ಷೇಪತಾವಾದ, 'The theory of relativity' ಎಂಬ ಸೂತ್ರವನ್ನು ಪ್ರಕಟಿಸಿದ. ಆ ಸೂತ್ರದ ಎರಡು ಮುಖ್ಯ ಅಂಶಗಳು ಹೀಗಿವೆ.

1. ನಮ್ಮ ಬ್ರಹ್ಮಾಂಡದಲ್ಲಿ ಬೆಳಕಿನ ವೇಗಕ್ಕಿಂತ ಹೆಚ್ಚು ವೇಗವು ಸಾಧ್ಯವಿಲ್ಲ.

2. ಚಲಿಸುತ್ತಿರುವ ವೇಗಕ್ಕೆ ಅನುಗುಣವಾಗಿ, ಚಲಿಸುತ್ತಿರುವ ದಿಕ್ಕಿನಲ್ಲಿ, ಚಲಿಸುತ್ತಿರುವುದೆಲ್ಲವೂ ಸಂಕುಚಿತವಾಗುತ್ತದೆ.

ಲೋರೆನ್ಸ್ ಎಂಬ ಭೌತವಿಜ್ಞಾನಿಯು ಇದಕ್ಕೆ ಮೊದಲೇ Transformation rule ಎಂಬ ಸೂತ್ರವನ್ನು ಹೊರಗೆಡವಿದ್ದ. ಅತಿವೇಗದಲ್ಲಿ ಚಲಿಸುತ್ತಿರುವ ವಸ್ತುಗಳು ಎಷ್ಟು ಸಂಕುಚಿತವಾಗಬಹುದು ಎಂಬುದನ್ನು ಆತ ಗಣಿತ ಶಾಸ್ತ್ರದ ರೀತ್ಯ ಲೆಕ್ಕಮಾಡಿ ಸೂತ್ರವನ್ನು ಪ್ರಕಟಿಸಿದ್ದ. ಆ ಸೂತ್ರವನ್ನು ಬಳಸಿಕೊಂಡು ಅತ್ಯಮೋಘವಾಗಿ ಅದನ್ನು ಅಭಿವೃದ್ಧಿಸಿ ಐನ್‌ಸ್ಟೈನ್ ತನ್ನ ಸಾಪೇಕ್ಷತಾ ವಾದವನ್ನು ರಚಿಸಿಟ್ಟ.

ಗಣಿತ ಶಾಸ್ತ್ರದ ಪ್ರಕಾರ ಐನ್‌ಸ್ಟೈನ್ ಈ ಸೂತ್ರವನ್ನು ವಿವರವಾಗಿ ನಿಷ್ಕರ್ಷಿಸಿದ. ಆ ವಿವರಗಳನ್ನು ಸಂಪೂರ್ಣವಾಗಿ ಅರ್ಥಮಾಡಿಕೊಳ್ಳಬೇಕಾದರೆ, ಭೌತ ಮತ್ತು ಗಣಿತ ಶಾಸ್ತ್ರಗಳಲ್ಲಿ ಅಪಾರ ಪಾಂಡಿತ್ಯವನ್ನು ಪಡೆದಿರಬೇಕು. ಜನಸಾಮಾನ್ಯರಿಗೆ ಅದರ ವಿವರವಾದ ಗೊಡವೆ ಅನಗತ್ಯ. ಆದರೆ ಕಾಲದ ದೃಷ್ಟಿಯಿಂದ ಐನ್‌ಸ್ಟೈನ್‌ನ ಸೂತ್ರಗಳು ಯಾವ ಪರಿಣಾಮವನ್ನು ಬೀರುತ್ತವೆ ಎನ್ನುವುದನ್ನು ಅರಿಯುವುದು ಬಲು ಚೆಂದ.

ವಸ್ತುಗಳು ಗಮನಕ್ಕೆ ಬರುವಷ್ಟು ಸಂಕುಚಿತವಾಗುವುದಕ್ಕೆ ಅವು ಚಲಿಸುತ್ತಿರುವ ವೇಗವು, ಸುಮಾರು ಬೆಳಕಿನ ವೇಗದ ಹತ್ತಿರ ಹತ್ತಿರ ಇರಬೇಕು. ಬೆಳಕಿನ ವೇಗವು ಪ್ರತಿ ಸೆಕೆಂಡಿಗೆ ಮೊದಲೇ ಹೇಳಿದಂತೆ 1,86,284 ಮೈಲಿಗಳು, ಅಥವಾ ಒಂದೂಮುಕ್ಕಾಲು ಲಕ್ಷ ಮೈಲಿಗಳು. ನಡೆಯುವಾಗ ನಾವು ಗಂಟೆಗೆ ನಾಲ್ಕು ಮೈಲಿ ನಡೆಯುತ್ತೇವೆ. ಓಡಿದರೆ ಹನ್ನೆರಡು ಹದಿಮೂರು ಮೈಲಿ. ಮೋಟಾರಿನಲ್ಲಿ ಸವಾರಿ ಮಾಡಿದರೆ, ಪ್ರತಿ ಗಂಟೆಗೆ 80 ಅಥವಾ ನೂರು, ನೂರೈವತ್ತು ಮೈಲಿಗಳಷ್ಟು ವೇಗದಲ್ಲಿ ಹೋಗಬಹುದು. ಜಂಬೋಜೆಟ್ ವಿಮಾನದಲ್ಲಿ 600-700 ಮೈಲಿಗಳಷ್ಟು ವೇಗದಲ್ಲಿ ಸಾಗಬಹುದು, ಪ್ರತಿ ಒಂದು ಗಂಟೆಗೆ. ಖಗೋಳ ಯಾತ್ರಿಗಳು 25,000 ಮೈಲಿಗಳಷ್ಟು ದೂರವನ್ನು ಗಂಟೆಯೊಂದರಲ್ಲಿ ಸಾಧಿಸಿದ್ದಾರೆ. ಒಮ್ಮೊಮ್ಮೆ ವಿಪರಿಮಿತ ಎಂದರೆ 40,000 ಮೈಲಿಗಳನ್ನು ಗಂಟೆಯೊಂದಕ್ಕೆ ಸಾಧಿಸಲು ಸಾಧ್ಯ.

ಅಬ್ಬಾ ಎನ್ನಿಸುತ್ತದೆ ಅಲ್ಲವೆ? ಮಾನವನ ವೈಜ್ಞಾನಿಕ ಹಾಗೂ ತಾಂತ್ರಿಕ ಸಾಧನೆ!

ಆದರೆ ಇವೆಲ್ಲವೂ ಗಂಟೆಯೊಂದಕ್ಕೆ ಇಷ್ಟು ಮೈಲಿಗಳು ಎಂಬ ಲೆಕ್ಕ. ಆದರೆ ಬೆಳಕಿನ ವೇಗವು ಒಂದೂಮುಕ್ಕಾಲು ಲಕ್ಷ ಮೈಲಿಗಳಿಗಿಂತಲೂ ಹೆಚ್ಚು. ಪ್ರತಿಗಂಟೆಗೆ ಅಲ್ಲ; ಪ್ರತಿ ಸೆಕೆಂಡಿಗೆ! ಅಂದರೆ ಮಾನವನ ಇಂದಿನ ಪ್ರಚಂಡ ಸಾಧನೆಯು ಭೌತಿಕ ಪ್ರಪಂಚದ ಸ್ವಾಭಾವಿಕ ವೇಗದ 16,200 ಪಾಲುಗಳಲ್ಲಿ ಒಂದರಷ್ಟು ಮಾತ್ರ!

ಈ ಲೆಕ್ಕಗಳನ್ನು ಮಾನವನು ತನ್ನ ಮನಸ್ಸಿನ ನೆರವಿನಿಂದ ಎಣಿಸಿದ್ದಾನೆ. ಮನಸ್ಸಿನ ವೇಗವು ಬೆಳಕಿನ ವೇಗಕ್ಕಿಂತಲೂ ಬಹುಪಾಲು ಹೆಚ್ಚು ಎನ್ನುವುದು ಅನುಭವದಿಂದ ತಿಳಿಯುತ್ತದೆ. ಆದರೆ ಬೆಳಕಿನ ಕಿರಣಗಳನ್ನು Photons ಪರೀಕ್ಷೆಗೆ ಒಳಪಡಿಸಿದಾಗ ಅವು ವಸ್ತು ಪ್ರಧಾನವಾದುವು ಅವಕ್ಕೆ ತೂಕವಿದೆ, ಪ್ರಮಾಣವಿದೆ ಎಂದು ತಿಳಿಯುತ್ತದೆ. ಆದರೆ ಮನಸ್ಸಿನ ಸ್ವಭಾವವು ಏನು ಅದೆಂತಹ ಶಕ್ತಿ, ಅದಕ್ಕೂ 'ವಸ್ತು'ವಿನ ಗುಣವಿದೆಯೇ ಎಂಬುದು ಯಾರಿಗೂ ಸರಿಯಾಗಿ ತಿಳಿಯದು. ಶಕ್ತಿಯ ಒಂದು ತೆರ, ಮನಸ್ಸು ಎನ್ನುವುದು ಸ್ವಯಂ ವೇದ್ಯವಾಗಿದೆ. ಆದರೆ ಅದಕ್ಕೆ 'ವಸ್ತು'ವಿನ ಆಧಾರವೇ ಇಲ್ಲವೇ? ಯಾರು ಬಲ್ಲರು? ಆದರೆ ಇಷ್ಟು ಮಾತ್ರ ಸಿದ್ಧಾಂತವಾಗಿದೆ. ಮನಸ್ಸಿನ ಶಕ್ತಿಯು ವೇಗವು ಬೆಳಕಿನ ವೇಗಕ್ಕಿಂತ ತುಂಬಾ ಪಟ್ಟು ಹೆಚ್ಚಾಗಿದೆ ಎಂಬುದು, ಐನ್‌ಸ್ಟೈನನ ಸಿದ್ಧಾಂತದ ಮುಖ್ಯವಾದೊಂದು ಭಾಗವು, ಮನಸ್ಸಿನ ಕಾರ್ಯ ಕ್ರಮಗಳಿಗೆ ಅನ್ವಯಿಸುವುದಿಲ್ಲ. ಅದು ಅನ್ವಯಿಸುವುದು 'ವಸ್ತು'ವು ಇದ್ದಲ್ಲಿ ಮಾತ್ರ. Particles ಗೆ ಮಾತ್ರ ಅನ್ವಯಿಸುತ್ತದೆ. ಹಲವಾರು ವೈಜ್ಞಾನಿಕರಿಂದ ಇದೂ ಶಂಕಿಸಲ್ಪಟ್ಟಿದೆ, ಅದನ್ನು ಕುರಿತು ಮುಂದೆ ತಿಳಿಯೋಣ.

ಸಾಪೇಕ್ಷತಾ ವಾದವನ್ನು ಐನ್‌ಸ್ಟೈನ್ ಮಹಾಶಯನು ಕೇವಲ ಗಣಿತ ಶಾಸ್ತ್ರದ ಆಧಾರದ ಮೇಲೆ ಸಿದ್ಧಪಡಿಸಿದ್ದ. ಪರೀಕ್ಷಾ ಪ್ರಯೋಗಗಳಿಂದ, Experimental ರೀತಿಯಲ್ಲಿ ಸೂತ್ರವನ್ನು ಸಾಕ್ಷೀಕರಿಸಿರಲಿಲ್ಲ. ಐನ್‌ಸ್ಟೈನ್ ಪ್ರಕಟಿಸಿದ ಸೂತ್ರಗಳನ್ನು ಹಲವಾರು ಮಂದಿ ವೈಜ್ಞಾನಿಕರು ವಿಧ ವಿಧ ರೀತಿಯಲ್ಲಿ ಪರೀಕ್ಷಾ ಪ್ರಯೋಗಗಳನ್ನು ನಡೆಸಿ ಸಿದ್ಧಾಂತ ಮಾಡಿದರು. ಉದಾ: 1. ಎಚ್. ಇ. ಐವ್ಸ್ (H. E. Ives) ಎಂಬಾತ ಬೆಲ್ಸ್ ಲ್ಯಾಬೋರೇಟರಿ

ಗಳಲ್ಲಿ ಸಂಶೋದನೆಗಳನ್ನು ನಡೆಸುತ್ತಿದ್ದ. 1936ರಲ್ಲಿ ಆತ ಒಂದು ಪರೀಕ್ಷೆ ಯನ್ನು ಹೈಡ್ರೋಜಿನ್ ಅಣುಗಳ ಮೇಲೆ ನಡೆಸಿದ. Radiating hydrogen ಅಣುಗಳು ನಿಖರವಾಗಿ ನಿಗದಿಯಾದ ತರಂಗಗಳಲ್ಲಿ ಬೆಳಕನ್ನು ಹೊರಸೂಸು ತ್ತವೆ. ಇಂತಹ ಅಣುಗಳು ಚಲನವಿಲ್ಲದೆ ತಟಸ್ಥವಾಗಿದ್ದಾಗ, ಅವುಗಳಿಂದ ಹೊರಸೂಸಿದ ಬೆಳಕನ್ನು ಪರೀಕ್ಷಿಸಲಾಯಿತು. ನಂತರ ಈ ಅಣುಗಳನ್ನು ಅತಿ ವೇಗದಿಂದ ಚಲಿಸುವಂತೆ ಪ್ರಯೋಗವನ್ನು ಮಾಡಿದರು. ಹೀಗಾದಾಗ ಅಣುಗಳ ತರಂಗಗಳ ಅಂತರವು ಕಡಿಮೆಯಾಗಿತ್ತು. ಎಷ್ಟರ ಮಟ್ಟಿಗೆ ಕಡಿಮೆ ಯಾಗಿತ್ತು ಅಂತ ? ಐನ್‌ಸ್ಟೈನಿನ ಸೂತ್ರದ ಪ್ರಕಾರ ಎಷ್ಟು ಕಡಿಮೆ ಯಾಗಬೇಕು ಎಂದಿತ್ತೋ ಅಷ್ಟೇ ಮಟ್ಟಿಗೆ ಲೆಕ್ಕಚಾರವಾಗಿ ಕಡಿಮೆ ಯಾಗಿತ್ತು, ಈ ಪರೀಕ್ಷಾ ಪ್ರಯೋಗವು ಐನ್‌ಸ್ಟೈನನ ಸೂತ್ರಗಳನ್ನು ಧೃಡ ಪಡಿಸಿತು.

2. ಜತೆ ಜತೆ ಇರುವ ನಕ್ಷತ್ರಗಳು ಬ್ರಹ್ಮಾಂಡದಲ್ಲವೆ. ಒಂದು ಕೇಂದ್ರದ ಸುತ್ತ ಈ ನಕ್ಷತ್ರಗಳು ವರ್ತುಳಾಕಾರದ ಪ್ರದಕ್ಷಣೆಯನ್ನು ಹಾಕು ತ್ತಿರುತ್ತವೆ. ಭೂಮಂಡಲದಿಂದ ನೋಡುವಾಗ ಜತೆ ನಕ್ಷತ್ರಗಳಲ್ಲೊಂದು ನಮ್ಮ ಕಡೆಗೆ ಬರುತ್ತಿರುತ್ತದೆ. ಇನ್ನೊಂದು ನಮ್ಮಿಂದ ದೂರ ಹೋಗುತ್ತಿರು ತ್ತದೆ. ಎರಡೂ ನಕ್ಷತ್ರಗಳಿಂದ ಬರುವ ಬೆಳಕನ್ನು ಪರೀಕ್ಷಿಸಲಾಯಿತು.

'ಡಾಪ್ಲರ್ ಎಫೆಕ್ಟ್' ಎಂಬ ಅನುಭವದಿಂದ ಬೆಳಕನ್ನು ಪರೀಕ್ಷಿಸ ಲಾಯಿತು. ಡಾಪ್ಲರ್ ಎಫೆಕ್ಟ್ ಎಂದರೇನು? ಗೇಟ್ ಹಾಕಿದ ಲೆವೆಲ್ ಕ್ರಾಸಿಂಗಿನ ಬಳಿ ನಿಂತಿರುತ್ತೇವೆ. ಸೀಟಿ ಹೊಡೆಯುತ್ತ ರೈಲು ಬರುತ್ತಿರುತ್ತದೆ. ದೂರದಲ್ಲಿ ರೈಲಿರುವಾಗ ಇಂಜನ್ನಿನ ಸೀಟಿಯು ಒಂದು ತೆರನಾಗಿ ಕೇಳಿಸುತ್ತದೆ. ಲೆವೆಲ್ ಕ್ರಾಸಿಂಗಿನ ಬಳಿಗೆ ಬಂದಾಗ ಇನ್ನೊಂದು ತರಹ ಕೇಳಿಸುತ್ತದೆ. ತುಂಬಾ ಜೋರಾದ ಶಬ್ದ, ಮುಂದು ಮುಂದು ಇಂಜಿನ್ ಹೋದಾಗ ಸೀಟಿಯ ಧ್ವನಿಯೂ ವ್ಯತ್ಯಾಸವನ್ನು ಹೊಂದುತ್ತದೆ. ಸದ್ದಿನ ಅಲೆಗಳಿಂದ ಉಂಟಾದ ಈ ಪರಿಣಾಮವು, ಬೆಳಕಿನ ಅಲೆಗಳಿಗೂ ಅನ್ವಯಿಸುತ್ತದೆ. ಆದರೆ ಕಿವಿಗೆ ಕೇಳಿಸುವುದಿಲ್ಲ ಸ್ಪೆಕ್ಟ್ರಾ ಮೀಟರಿನಲ್ಲಿ ನೋಡಿದಾಗ, ಕೆಂಪು ಇರುವ ಅಂಚಿನತ್ತ ಒಮ್ಮೆ, ಅಥವಾ ತದ್ವಿರುದ್ಧ ವಯೋಲೆಟ್ ಇರುವ ಅಂಚಿನತ್ತ ಫ್ರಾನಾಫರ್ ಲೈನ್ಸ್‌ಗಳ ಮೂಲಕ ಕಾಣಬರುತ್ತವೆ. ಈ ವ್ಯತ್ಯಾಸವನ್ನು ನಿಖರವಾಗಿ

ಲೆಕ್ಕಮಾಡಿದರೆ ಬೆಳಕು ಇತ್ತ ಬರುತ್ತಿದೆಯೋ ಅತ್ತ ಹೋಗುತ್ತಿದೆಯೋ ಎಂಬುದನ್ನು ನಿಷ್ಕರ್ಷಿಸಬಹುದು.

ಹೀಗೆ ಪರೀಕ್ಷೆ ಮಾಡಿದಾಗ ಹತ್ತಿರ ಬರುತ್ತಿರುವ ನಕ್ಷತ್ರದಿಂದ ಬರುವ ಬೆಳಕೂ ಮತ್ತು ದೂರ ಹೋಗುತ್ತಿರುವ ನಕ್ಷತ್ರದ ಬೆಳಕೂ, ಎರಡೂ ಒಂದೇ ವೇಗದಲ್ಲಿ ಬರುತ್ತಿರುವುದು ಸ್ಪಷ್ಟವಾಯಿತು. ಮಿಚಲ್‌ಸನ್ ಮತ್ತು ಮಾರ್ಲಿ ಯವರ ಪರೀಕ್ಷಾ ಪ್ರಯೋಗದ ಫಲಿತಾಂಶಗಳನ್ನು ಈ ಪ್ರಯೋಗವು ಧೃಡೀ ಕರಿಸಿತು.

ಐನ್‌ಸ್ಟೈನನ ಸಿದ್ಧಾಂತದ ಪ್ರಕಾರ, ಬೆಳಕಿನ ವೇಗದ 90 ರಷ್ಟು ವೇಗ ವನ್ನು ಪಡೆದಾಗ, ಅಂತಹ ವಸ್ತುವು ಅರ್ಧದಷ್ಟು ಸಂಕುಚಿತವಾಗುತ್ತದೆ. ಆರಡಿ ಉದ್ದದ ನಾಗರಹಾವನ್ನು, 1,67, 655 ಮೈಲಿಗಳು ಪ್ರತಿ ಸೆಕೆಂಡಿಗೆ, ಈ ವೇಗದಲ್ಲಿ ಮಸಲಾ ದೂಡಿದರೆ, ಅದು ಮೂರಡಿ ಉದ್ದದ ನಾಗರಹಾವಾಗು ತ್ತದೆ. ಬೆಳಕಿನ ವೇಗದಲ್ಲಿ ಅದು ಹರಿಯಲಾರಂಭಿಸಿದರೆ ಅದರ ಉದ್ದ ಸೊನ್ನೆ ಯಾಗುತ್ತದೆ. ಆದರೆ ಅಗಲ ವಿಪರಿಮಿತವಾಗಿರುತ್ತದೆ, ದಪ್ಪವೇ ಇರದ ತೆಳು ಪೊರೆಯಂತೆ ಆಗುತ್ತದೆ. ಇದೆಲ್ಲವೂ ಊಹೆ ಎನ್ನುವುದು ಸ್ವಯಂ ವೇದ್ಯ. ಆದರೆ ಊಹೆಯಾದರೂ ಸತ್ಯವಾಗಬಹುದಾದ ಊಹೆ. 'ರೇ 'ರಾಜ್ಯದಲ್ಲಿ ಊಹೆಯು ಸುಂದರವಾಗಿದ್ದರೆ, ಸತ್ಯವೂ ಆಗಿರುತ್ತದೆ.

ಆರೋಗ್ಯವಂತ ಮಾನವನ ಹೃದಯವು ನಿಮಿಷಕ್ಕೆ 72 ಬಾರಿ ಮಿಡಿಯು ತ್ತದೆ. ಮಸಲಾ ಮಾನವನನ್ನು ಪ್ರತಿ ಸೆಕೆಂಡಿಗೆ 1,67,655 ಮೈಲಿಗಳು ಸಾಗುವ ರಾಕೆಟ್ಟಿನಲ್ಲಿ ಕೂರಿಸಿ ಉಡಾಯಿಸಿದರೆ, ಆ ವೇಗವು ಸಾಧಿಸಲ್ಪಟ್ಟಾಗ, ಅಂತಹ ಮಾನವನ ಹೃದಯದ ಬಡಿತವು ನಿಮಿಷಕ್ಕೆ 36 ಆಗುತ್ತದೆ. ಮಸಲಾ ಬೆಳಕಿನ ವೇಗವನ್ನು ಆ ರಾಕೆಟ್ ಪಡೆಯುವಂತಾದರೆ ಅವನ ಹೃದಯವು ಮಿಡಿಯುವುದೇ ಇಲ್ಲ. ಆದರೆ ಸಾಯುತ್ತಾನೆಯೇ? ಇಲ್ಲ. ಏಕೆಂದರೆ ರಕ್ತ ಸಂಚಾರದ ಆಗತ್ಯವು ಮೂರು ಮಿತಿಗಳಲ್ಲಿ ದೇಹಕ್ಕೆ ಇರುತ್ತದೆ. ಆ ಕಾರಣದಿಂದ ಹೃದಯವು ಮಿಡಿಯುತ್ತದೆ. ಆದರೆ ದೇಹವು ಎರಡೇ ಮಿತಿ ಗಳುಳ್ಳ, ಅಗಲ ಉದ್ದ ಮಾತ್ರ ಇರುವಂತಾದಾಗ ಮೂರನೆಯ ಮಿತಿಯಾದ ದಪ್ಪವು ಇಲ್ಲದೇ ಇರುವಂತಾದಾಗ, ರಕ್ತ ಸಂಚಾರದ ಅಗತ್ಯವು ಇರುವುದಿಲ್ಲ.

ಅಂದಮೇಲೆ ಹೃದಯಂವು ಮಿಡಿಯುವ ಅಗತ್ಯವೇ ಇಲ್ಲ. ಹೃದಯವೂ ಅತಿ ತಿಳಿಯಾದ ಪೂರೆಯಾಗಿ ಬಿಡುತ್ತದಲ್ಲ !!

ಶ್ವಾಸೋಚ್ಛ್ವಾಸಗಳೂ ನಿಮಿಷಕ್ಕೆ 18 ಬಾರಿ ಆರೋಗ್ಯವಂತನಲ್ಲಿ ಆಡುತ್ತದೆ. ಹೃದಯದ ಬಡಿತದಂತೆ ಇದೂ ಒಂದು ತೆರನ ಗಡಿಯಾರವೇ ! ಪ್ರತಿ ಸೆಕೆಂಡಿಗೆ 1,67,655 ಮೈಲಿಗಳ ವೇಗದಲ್ಲಿ ಹಾರುವ ರಾಕೆಟ್ಟಿನಲ್ಲಿ ಮಾನವನನ್ನು ಕೂರಿಸಿ ಉಡಾಯಿಸಿದರೆ ಆ ವೇಗವು ಸಿದ್ಧಿಸಿದಾಗ ಅವನ ಹೃದಯವು ಪ್ರತಿ ನಿಮಿಷಕ್ಕೆ 36 ಆದಾಗ, ಶ್ವಾಸದ ಗತಿಯು ನಿಮಿಷಕ್ಕೆ 9 ಆಗುತ್ತದೆ,

ಆದರೆ ಅಂತಹ ಮಾನವನು ತನ್ನ ಹೃದಯಂದ ಬಡಿತವನ್ನಾಗಲೀ, ಶ್ವಾಸೋಚ್ಛ್ವಾಸದ ಗತಿಯನ್ನಾಗಲೀ, ತನ್ನ ಕೈಗೆ ಕಟ್ಟಿರುವ ಗಡಿಯಾರದ ದೆಸೆಯಿಂದ ಎಣಿಸಿದರೆ, ಹೃದಯವು 72 ಅನ್ನೂ ಉಸಿರಾಡುವಿಕೆಯು 18ನ್ನೂ ತೋರಿಸುತ್ತದೆ. ಇದು ಹೇಗೆ ? ಅವನ ಕೈಗೆ ಕಟ್ಟಿಕೊಂಡಿರುವ, ಮತ್ತು ಆ ವೇಗದಲ್ಲಿ ಸಾಗುತ್ತಿರುವ ಕೈಗಡಿಯಾರವೂ ಅರ್ಧದಷ್ಟು ಮಂದವಾಗುತ್ತದೆ. ಭೂಲೋಕದಲ್ಲಿ ನಿಂತು ನೋಡುವವನಿಗೆ, ಅವನ ಗಡಿಯಾರ, ಹೃದಯ, ಶ್ವಾಸದ ಗತಿ ಎಲ್ಲವೂ ಅರ್ಧಕ್ಕೆ ಇಳಿದಿರುವುದು ತಿಳಿಯುತ್ತದೆ. ಆದರೆ ರಾಕೆಟ್ಟಿನಲ್ಲಿ ಹಾರುತ್ತಿರುವವನಿಗಲ್ಲ. ಅವನ ಎಲ್ಲ ಪ್ರಮಾಣಗಳೂ ಅರ್ಧದಷ್ಟು ಕಡಿಮೆಯಾಗಿರುವುದರಿಂದ ಯಾವ ವ್ಯತ್ಯಾಸವನ್ನೂ ಆತ ಗ್ರಹಿಸಲಾರ.

ಅಂದರೆ, ಮಸಲಾ, ಇಂತಹ ರಾಕೆಟ್ ಪ್ರವಾಸಿಯು ಬೆಳಕಿನ 90 ಶತಾಂಶ ವೇಗದಲ್ಲಿ ಒಂದು ವರ್ಷ ಪ್ರಯಾಣಮಾಡಿ ಹಿಂತಿರುಗಿದರೆ, ಭೂಲೋಕದಲ್ಲಿ ಆಗ ಎರಡು ವರ್ಷಗಳು ಮುಗಿದುಹೋಗಿರುತ್ತದೆ.ಭೂಲೋಕದ ಕ್ಯಾಲಂಡರಿನ ಪ್ರಕಾರ 1972ರ ಜನವರಿ ಒಂದರಂದು ಪ್ರವಾಸ ಹೊರಟು ಒಂದು ವರ್ಷ ಪ್ರಯಾಣಮಾಡಿ ಆತ ಹಿಂದಿರುಗಿದರೆ 1974ರ ಜನವರಿ 1 ಆಗಿರುತ್ತದೆ. 1973ರ ಕ್ಯಾಲೆಂಡರಿನ ಅರಿವೇ ಇರುವುದಿಲ್ಲ ಅವನಿಗೆ. ದೀರ್ಘ ಕಾಲ ಬದುಕುವ ಆಸೆಯಿರುವವರಿಗೆ ಇದೂ ಒಂದು ದುಸ್ಸಾಧ್ಯವಾದ ಮಾರ್ಗ!!

ಇವೆಲ್ಲ ಪರೀಕ್ಷಾಯೋಗಗಳಿಂದ ಒಂದು ವಿಷಯವು ಸ್ಪಷ್ಟವಾಗುತ್ತದೆ. Space ಅಂದರೆ ದೇಶವನ್ನು ನಿಷ್ಕರ್ಷಿಸುವ ಉದ್ದ, ಅಗಲ, ಗಾತ್ರ ಎಂಬ ಮೂರು ದಿಕ್ಕಿನ ಅಳತೆಗಳು, ಕಾಲ ಎಂದರೆ ಇಷ್ಟು ಅಂತರದ ಸಮಯದಲ್ಲಿ ; ಎನ್ನುವುದರ ಜತೆಗೆ ಅತಿ ನಿಕಟವಾದ ಸಂಬಂಧವನ್ನು ಹೊಂದಿದೆ ;

ಎನ್ನುವ ವಿಷಯ. ದೇಶ, Space ಮತ್ತು ಕಾಲ Time ಇವೆರಡೂ ಒಂದ ಕ್ಕೊಂದು ನಿಕಟವಾಗಿ ಬೆಸೆದುಕೊಂಡಿವೆಯೇ ಹೊರತು ದೇಶವಾಗಲೀ, ಕಾಲ ವಾಗಲೀ ಸ್ವತಂತ್ರವಾಗಿ ಇರಲು ಸಾಧ್ಯವೇ ಇಲ್ಲವೆನ್ನುವುದು ಖಂಡಿತವಾಯಿತು. ಆದುದರಿಂದಲೇ Hermann Minkowski ಎಂಬ ಪ್ರಸಿದ್ಧ ಭೌತವಿಜ್ಞಾನಿಯು 'From henceforth space by itself and time by itself are doomed to fade away into mere shadows and only a kind of union between the two will preserve an independent reality' ಎಂದು ನುಡಿದ. Space ನ ಮೂರು ಪ್ರಮಾಣಗಳು ಮತ್ತು ಕಾಲ ಎಂಬ ನಾಲ್ಕನೆಯ ಪ್ರಮಾಣವು, ಇವು ನಾಲ್ಕೂ ವಿಶದೀಕೃತವಾದರೆ ವಸ್ತುವಿನ ವಿವರಗಳನ್ನು ಸಂಪೂರ್ಣವಾಗಿ ಕೊಟ್ಟಂತಾಗುತ್ತದೆ. ಕಾಲ ಮತ್ತು ದೇಶ ಇವುಗಳ ಅವಿಚ್ಛಿನ್ನತೆಯನ್ನು "Space-Time Continuum" ಎಂಬ ಭೌತವಿಜ್ಞಾನಿಗಳ ವಿವರಣೆಯು ಲಕ್ಷಣವಾಗಿ ಪ್ರತಿಪಾದಿಸುತ್ತದೆ. Space-Time Continuum ಎಂಬುದು ಕೇವಲ ಗಣಿತಶಾಸ್ತ್ರದ ಕಲ್ಪನೆಯಲ್ಲ. ಬ್ರಹ್ಮಾಂಡವೇ Space-Time Continuumನ ಪ್ರತ್ಯಕ್ಷ ಪ್ರದರ್ಶನ. ವಾಸ್ತವಿಕ ಪ್ರಪಂಚವೆಲ್ಲವೂ ದೇಶದಲ್ಲಿಯೂ ಇದೆ. Time ಕಾಲದಲ್ಲಿಯೂ ಇದೆ. ಕಾಲದ ಅಳತೆಗಳೆಲ್ಲವೂ, ಉದಾಹರಣೆಗೆ ಸೆಕೆಂಡು, ನಿಮಿಷ. ಘಳಿಗೆ, ವಿಘಳಿಗೆ, ಆರು ಋತುಗಳು, 60 ಸಂವತ್ಸರಗಳು, ಇವೆಲ್ಲವೂ ಭೂಮಂಡಲ ಮತ್ತು ಸೂರ್ಯಮಂಡಲ ; ಭೂಮಂಡಲ ಮತ್ತು ಚಂದ್ರಮಂಡಲಗಳ, ಪರಸ್ಪರ ಸ್ಥಾನಮಾನದ ವಿವರಣೆಯೇ ಆಗಿದೆ. ಮಕರಸಂಕ್ರಾಂತಿ, ಕರ್ಕಾಟಕಸಂಕ್ರಾಂತಿ ಇವು ಉತ್ತರ ಹಾಗು ದಕ್ಷಿಣದತ್ತ ಸ್ವಲ್ಪ ಮಟ್ಟಿಗೆ ಸೂರ್ಯನು ವಾಲುವುದನ್ನು ಗುರುತಿಸುತ್ತವೆ. ಭೂಮಿಯ ಮೇಲೆ ಸೂರ್ಯನ ಬೆಳಕು ಬೀಳುವ ದಿಕ್ಕೋಣಗಳು ಅವು. ಪೂರ್ವದಿಂದ ಪಶ್ಚಿಮಕ್ಕೆ ಹಾದು ಹೋಗುವಂತೆ ಕಾಣುವ ಸೂರ್ಯ ಒಮ್ಮೆ ತುಸು ಉತ್ತರದತ್ತ ಮತ್ತೊಮ್ಮೆ ತುಸು ದಕ್ಷಿಣದತ್ತ ವಾಲುವಂತಾಗುತ್ತದೆ. ದೇಶ, Space ನಲ್ಲಿ ಕಾಣ ಬರುವ ಈ ವ್ಯತ್ಯಾಸವನ್ನು ಕಾಲದ ಎಣಿಕೆಯಿಂದ ನಿಗದಿ ಮಾಡಲಾಗಿದೆ.

ನಾವು ವಾಸಿಸುತ್ತಿರುವ ಭೂಲೋಕದ, ಅದಕ್ಕೆ ಒಂದು ರೀತಿಯಲ್ಲಿ ಜೀವಪಾಲಕವಾದ ಸೂರ್ಯನ ಮಂಡಲದ ದೃಷ್ಟಿಯಲ್ಲಿ Space-Time

Continuum ಅನ್ನು ಕಂಡೆವು, ಈತನಕ ವಿಶ್ಲೇಷಿಸಿದೆವು. ಆದರೆ ಬ್ರಹ್ಮಾಂಡ ದಲ್ಲಿ, Cosmos ನಲ್ಲಿ ನಕ್ಷತ್ರಮಂಡಲಗಳು ಕೋಟ್ಯಂತರ ಇರುವ ಎಡೆಯಲ್ಲಿ. Space ನಲ್ಲಿ Time ನ ಪಾತ್ರವೇನು ? ಪ್ರಭಾವವೇನು ? ಸ್ವಾತಂತ್ರ್ಯವೇನು?

Arcturus (ಸ್ವಾತೀ) ಎಂಬ ನಕ್ಷತ್ರವೊಂದಿದೆ. ಭೂಲೋಕದಿಂದ 38 ಬೆಳಕುವರ್ಷಗಳ ಅಂತರವು ಭೂಲೋಕಕ್ಕೂ Arcturusಗೂ ಮಧ್ಯೆ ಇದೆ. ಬೆಳಕುವರ್ಷ ; Light year ಅಂದರೆ ಒಂದು ವರ್ಷದಲ್ಲಿ ಬೆಳಕು ಹಾದುಹೋಗುವ ದೂರ. ಅಂದರೆ 365 ದಿನಗಳು x 24 ಗಂಟೆಗಳು x 60 ನಿಮಿಷಗಳು x 60 ಸೆಕೆಂಡುಗಳುx186·284 ಮೈಲಿಗಳು. ಅಬ್ಬಾ ! ಈ ಸುಲಭವಾದ ಲೆಕ್ಕವನ್ನು ಮುಂದುಕರು ಮೂರು ಬಾರಿ ಮಾಡಿದರೆ ಮೂರು ಉತ್ತರಗಳು ದೊರಕುತ್ತವೆ!! ಮಕ್ಕಳು ಲೆಕ್ಕ ಮಾಡಿದರೂ ಅದೇ ಫಲಿತಾಂಶ!! ಒಂದು ಬೆಳಕುವರ್ಷ = 58,746,522,24,000 ಮೈಲಿಗಳು. Arcturus ನಕ್ಷತ್ರವು ಇದರ 38 ರಷ್ಟು ದೂರದಲ್ಲಿದೆ ! ಅಂದರೆ ಆ ನಕ್ಷತ್ರದಿಂದ ಹೊರಟ ಬೆಳಕು ನಮ್ಮ ಭೂಮಂಡಲಕ್ಕೆ ಬರಲು 38 ವರ್ಷಗಳಾಗುತ್ತವೆ. ಈಗ ನಾವು ಅಲ್ಲಿಂದ ಬಂದ ಬೆಳಕನ್ನು ಕಾಣುತ್ತೇವೆ. ಆದರೆ ಅದು ಹೊರಟು ಆಗಲೇ 38 ವರ್ಷಗಳಾಗಿವೆ. ಈಗ Arcturus ನಲ್ಲಿ ಏನು ಅನಾಹುತ ವಾಗಿದೆಯೋ, ಅದು ಉಳಿದಿದೆಯೋ, ಅಳಿದಿದೆಯೋ ಅದನ್ನು ತಿಳಿಯ ಬೇಕಾದರೆ ಇನ್ನು 38 ವರ್ಷಗಳಾಗಬೇಕು ! ಮಸಲಾ ಅದು ಈಗ ಸಿಡಿದು ಅಳಿದೇಹೋಯಿತು ಅನ್ನಿ. Spaceನಲ್ಲಿ ಅದು ಯಾವ ಸ್ಥಳವನ್ನೂ ಆಕ್ರಮಿಸಿ ಕೊಂಡಿಲ್ಲ ಅನ್ನಿ.. ಆದರೂ ಅದರಿಂದ ಎಂದೋ ಹೊರಟ ಬೆಳಕು ಪಸರಿಸುತ್ತಿದೆ. ಅಂದರೆ ಕಾಲದಲ್ಲಿ ಅದರ ಪ್ರಭಾವ ಇನ್ನೂ ಮುಂದುವರಿದಿದೆ. ವಿಜ್ಞಾನಿಗಳ ಪೋಟೋಗ್ರಾಫಿಕ್ ಪ್ಲೇಟುಗಳ ಮೇಲೆ ಮಚ್ಚೆ ಮೂಡುತ್ತವೆ. ವಾಸ್ತವಿಕ ವಾಗಿ Arcturus ಇದೆಯೇ ? ಈ ಕ್ಷಣದಲ್ಲಿ ಅದು ಇದೆಯೋ ಇಲ್ಲವೋ ಹೇಳಲಾರೆವು. ಆದರೆ Space-time continuumನಲ್ಲಿ ಅದು ವಾಸ್ತವಿಕ ವಾಗಿ ಇದೆ. ಕೇವಲ Timeನಲ್ಲಿ ಅದರ ಸೂತಕ ಇರಬಹುದು. Spaceನಲ್ಲಿ ಇಲ್ಲದಿದ್ದರೂ Spaceನಲ್ಲಿ ಇದ್ದರೂ, Time ಆಗುವ ತನಕ ನಮಗೆ ವಾಸ್ತವಿಕ ವಾಗಿ ತಿಳಿಯುವುದಿಲ್ಲ. Arcturus ಅನ್ನು ದೂರದರ್ಶಿ ಯಂತ್ರದಲ್ಲಿ

ವಿಜ್ಞಾನಿಯು ಬಹಿರ್ದೃಷ್ಟಿಯನ್ನು ಮೂಡುವಾಗ, ಕಾಲಮಾನದ ಪ್ರಕಾರ ಭೂತಕಾಲದಲ್ಲೂ ಇಣಿಕಿನೋಡುತ್ತಿರುತ್ತಾನೆ.

ಕೀರ್ತಿಶೇಷ ಸುಪ್ರಸಿದ್ಧ ಭೌತವಿಜ್ಞಾನಿ ಸರ್ ಜೇಮ್ಸ್ ಜೀನ್ಸ್ ಅವರು ಬ್ರಹ್ಮಾಂಡವನ್ನು ಈ ರೀತಿ ವರ್ಣಿಸಿದರು.

'A soap bubble with corrugations on its surface is perhaps the best representation in terms of simple and familiar materials of the new universe revealed to us by the Theory of Relativity. The universe is not the interior of the soap bubble, but its surface, and we must always remember that while the surface of the soap-bubble has only two dimensions, the universe bubble has four-three dimensions of space and one of time. And the substance out of which the bubble is blown, the soap film, is empty space welded on to empty time.'

ಕೇವಲ 'ಕಾಲ' ಎಂಬುದು ಇಲ್ಲವೇ ಇಲ್ಲ. Space ಎಂಬುದೂ ಪ್ರತ್ಯೇಕವಾಗಿ ಇಲ್ಲ. ಇವೆರಡೂ ಕೂಡಿಕೊಂಡಿರುವುದೇ ಅವಿಚ್ಛಿನ್ನವಾದ ದೇಶ ಮತ್ತು ಕಾಲ. ಹಾಗಾದರೆ ನಮ್ಮ ದೈನಂದಿನ ಜೀವನದಲ್ಲಿ 'ಕಾಲ'ದ ಅನುಭವವು ಕಂಡುಬರುತ್ತದೆಯಲ್ಲಾ. Spaceನ ಪ್ರತ್ಯೇಕ ಅನುಭವವೂ ತಿಳಿಯುತ್ತದಲ್ಲ! ಇವೆರಡೂ ಅನುಭವಗಳು ಮಾಯಾರೂಪಿನವೇ? ಕಾಲದ ವೈಯಕ್ತಿಕ ಅನುಭವವನ್ನು ಕುರಿತು ಐನ್‌ಸ್ಟೈನ್ ನುಡಿದುದು ಹೀಗೆ ;—

'The experiences of an individual appear to us arranged in a series of events : in this series the single events which we remember appear to be ordered according to the criterion of 'earlier' and 'later'. There exists therefore for the individual an I-Time, or subjective time. This in itself is not measurable. I can indeed, associate numbers with the events in such a way that the greater number is associated with the later event than with an earlier one. This association I can define by means of a clock by comparing the order of events furnished by the clock with the order of the

given series of events. We understand by a clock something which provides a series of events which can be counted.'

I-time, or subjective time, ಅಂದರೆ ಸ್ವಂತವಾದ ವೈಯುಕ್ತಿಕ ಕಾಲ. ಇದನ್ನು ಅಳತೆಹಾಕಲು ಗಡಿಯಾರವನ್ನು ಬಳಸಿಕೊಳ್ಳುತ್ತೇವೆ. ಕೇವಲ ಮತ್ತು ವೈಯಕ್ತಿಕ ಇವೆರಡೂ ಕಾಲದ ಮಾಯಾರೂಪಗಳೇ!

ಭೌತವಿಜ್ಞಾನಿಗಳು ಕಾಲವನ್ನು ಕುರಿತು ವಿಶ್ಲೇಷಿಸುವಾಗ ಅವರಲ್ಲಿ ಅತ್ಯಂತ ಮೇಧಾವಿ ಎನಿಸಿಕೊಂಡ ಐನ್‌ಸ್ಟೈನನು, 'ವೈಯಕ್ತಿಕವಾದ ಅನುಭವದ ಕಾಲ' ಎಂದು ಒಂದು ಪ್ರತ್ಯೇಕವಾದುದನ್ನು ಗಮನಿಸಿದ್ದ. ಇದು ಎಣಿಕೆಗೆ ಸಿಗುವುದಲ್ಲ ಎಂದೂ ಹೇಳಿದ.

ಅನುಭವದ ಕಾಲ, ಅಥವಾ 'ಮಾನಸಿಕವಾಗಿ ಕಾಣಬರುವ ಕಾಲ' ಇದನ್ನು ಕುರಿತು ಪ್ರತ್ಯೇಕವಾದ ಅಧ್ಯಾಯವನ್ನು ಮುಂದೆ ಬರೆಯಲಾಗುವುದು. ಭೌತ ವಿಜ್ಞಾನಿಗಳ ಕಾಲಕ್ಕೂ ನಮ್ಮ ವೈಯಕ್ತಿಕವಾದ, ಮನಸ್ಸಿನಲ್ಲಿ ಗಮನಿಸುವ ಕಾಲಕ್ಕೂ ಯಾವ ರೀತಿಯ ಸಂಬಂಧವಿದೆ ಎನ್ನುವುದನ್ನು ಅಲ್ಲಿ ವಿವರವಾಗಿ ತಿಳಿಯಲೆತ್ನಿಸುವ.

## 2. ಕಾಲವನ್ನು ಅಳೆಯುವುದು

ಪುರಾತನ ಕಾಲದಿಂದ ಮಾನವನು ಕಾಲವನ್ನಳೆಯಲು, ಸೂರ್ಯ ಚಂದ್ರರ ಗತಿ; ಅವುಗಳಿಂದ ಉಂಟಾದ ನೆರಳಿನ ಪ್ರಮಾಣ, ಇತ್ಯಾದಿಗಳನ್ನು ಬಳಸುತ್ತಿದ್ದ. ನೂರಾರು ಇಂತಹ ಯಂತ್ರಗಳಿವೆ. ಅನಂತರ ಗಡಿಯಾರಗಳನ್ನು ಸೃಷ್ಟಿಸಿದ. ಇವುಗಳಲ್ಲೂ ಅನೇಕ ರೀತಿಯವಿವೆ. ಭೌತವಿಜ್ಞಾನದ ದೃಷ್ಟಿಯಿಂದ ಕಾಲವನ್ನು ಅಳೆಯುವ ಸಾಧನಗಳನ್ನು ಮೂರು ಭಾಗಗಳನ್ನಾಗಿ ವಿಂಗಡಿಸಬಹುದು.

### (1) ಗುರುತ್ವಾಕರ್ಷಣ ಶಕ್ತಿಯಿಂದ.

ಸೂರ್ಯನ ಸುತ್ತ ಭೂಮಂಡಲವು ನಿಖರವಾದ ಪಥದಲ್ಲಿ ಪ್ರದಕ್ಷಿಣೆಯನ್ನು ಒಂದೇ ವೇಗದಲ್ಲಿ ಹಾಕುತ್ತಿರುವುದನ್ನು ಬಳಸಿಕೊಂಡು, ಪೂರ್ಣ ಪ್ರದಕ್ಷಿಣೆಗೆ ಒಂದು ವರ್ಷ ಎಂದು ಒಪ್ಪಿದರು. ತದನಂತರ ರಾತ್ರಿ ಹಗಲು ಎಂದು ಎರಡು ಭಾಗ ಮಾಡಿದರು. ಅನುಭವದಿಂದ ಜೀವನದ ಸೌಕರ್ಯದ

ದೃಷ್ಟಿಯಿಂದಲೂ ಈ ವಿಭಾಗಗಳು ಪ್ರಯೋಜಕವಾಗಿದ್ದುವು. ನಂತರ ಗಂಟೆ, ನಿಮಿಷ, ಸೆಕೆಂಡು, ಇತ್ಯಾದಿ.

ಈ ನಿಯಮವನ್ನು ಬಳಸಿಕೊಂಡು ಪೆಂಡುಲಂ ಗಡಿಯಾರಗಳನ್ನು ರಚಿಸಿಕೊಂಡರು. ಪೆಂಡುಲಂ ನಿಖರವಾಗಿ ಕಾಲದ ಒಂದು ಪ್ರಮಾಣವನ್ನು ಸೂಚಿಸುತ್ತದೆಯಾದ್ದರಿಂದ ಗೆಲಿಲಿಯೋ ನಂತರ ಇಂತಹ ಗಡಿಯಾರಗಳು ಸೃಷ್ಟಿಸಲ್ಪಟ್ಟವು.

2. (1) ಲೋಹದ ಅಣುಗಳ ಮಧ್ಯೆ ಶೇಖರಿಸಲ್ಪಡಬಹುದಾದ ಶಕ್ತಿಯನ್ನು ಬಳಸಿಕೊಂಡು ಹೊಸ ತೆರನ ಗಡಿಯಾರಗಳನ್ನು ಸೃಷ್ಟಿಸಿದರು. ಕೈ ಗಡಿಯಾರಗಳಂತಹವು. ಇವುಗಳನ್ನು ನಡಸುವ ಶಕ್ತಿಯು Hair-spring ನಲ್ಲಿದೆ. Hair-spring ಎಂದರೆ ಬಲು ಹಗುರವಾದ ಕೂದಲಿನಂತಿರುವ ತಂತಿಯ ಸುರುಳಿ. ಇದನ್ನು ಬಿಗಿಯಾಗುವಂತೆ ಕೀಲಿ ತಿರುಗಿಸಿದರೆ, ತಂತಿಯ ಲೋಹದ ಅಣುಗಳನ್ನು ಹತ್ತಿರಹತ್ತಿರಕ್ಕೆ ತಂದು ಒತ್ತಿದಂತಾಗುತ್ತದೆ. ಲೋಹದ ಅಣುಗಳು ಸಹಜಸ್ಥಿತಿಗೆ ಬರಲು ಸಡಿಲವಾಗುತೊಡಗುತ್ತವೆ. ಸಡಿಲಗೊಳ್ಳುವ ಈ ಸ್ವಾಭಾವಿಕ ಪ್ರವೃತ್ತಿಯನ್ನು ಕೊಕ್ಕಿ ಚಕ್ರಗಳ ಮೂಲಕ ಹತೋಟಿಯಲ್ಲಿಟ್ಟು ಕಾಲದ ಅಳತೆಯನ್ನು ಸಾಧಿಸಬಹುದು. Inter-atomic forces giving the hair-spring its strength.

(2) ಲ್ಯಾಬೋರೇಟರಿಗಳಲ್ಲಿ ಕೇಸಿಯಂ (Caseium) ಗಡಿಯಾರಗಳನ್ನು ಬಳಸುತ್ತಾರೆ. ಕೇಸಿಯಂ ಅಣುವಿನೊಳಗೆ ನಡೆಯುವ ನಡುಕವನ್ನು (Vibration) ಬಳಸಿಕೊಂಡು ಗಡಿಯಾರವನ್ನು ರಚಿಸಿದ್ದಾರೆ. ಇದೂ ಅಣುಗಳ ಸಹಜ ಶಕ್ತಿಯಿಂದ ನಿರ್ಮಿಸಲ್ಪಟ್ಟ ಗಡಿಯಾರ.

(3) ನ್ಯೂಕ್ಲಿಯರ್ ಪರಿವರ್ತನೆ. ರೇಡಿಯಂ ವಸ್ತುವು ಶಕ್ತಿಕಿರಣಗಳನ್ನು ಹೊರಸೂಸುತ್ತದೆ. ಇಷ್ಟು ವೇಳೆಯಲ್ಲಿ ಇಷ್ಟು ಎಂದು ಲೆಕ್ಕಮಾಡಿ ಹೇಳಬಹುದು. ಕಟ್ಟಕೊನೆಗೆ ಅದು ಸೀಸವಾಗುತ್ತದೆ. ಯಾವ ಶಕ್ತಿಕಿರಣಗಳನ್ನು ಉಳಿಸಿಕೊಂಡಿರುವುದಿಲ್ಲ. ಈ ನಿಯಮವನ್ನು ಬಳಸಿಕೊಂಡು ಕಾಲವನ್ನು ಅಳೆಯುತ್ತಾರೆ. ಹಳೆಯ ಕಾಗದ ಅಥವಾ ವಾಲೆಗರಿಯನ್ನು ಪರೀಕ್ಷೆಗೆ ಒಳಪಡಿಸಿದರೆ ರೇಡಿಯೋ ಆಕ್ಟೀವ್ ಕಾರ್ಬನ್ ಅದರಲ್ಲಿ ಎಷ್ಟು ಉಳಿದಿದೆ ಎಂದು ಲೆಕ್ಕಿಸಬಹುದು. ಅಷ್ಟು ರೇಡಿಯೋ ಆಕ್ಟಿವಿಟಿ ಕಡಿಮೆಯಾಗ

ಬೇಕಾದರೆ ಇಷ್ಟು ಸಹಸ್ರ ವರ್ಷಗಳಾಗಿರಬೇಕು ಎಂಬುದು ಖಚಿತವಾಗಿ ತಿಳಿಯುತ್ತದೆ. ಈ ರೀತಿಯ ರೇಡಿಯೋ ಆಕ್ಟಿವ್ ವಿಧಾನಗಳಿಂದ ಭೂಮಂಡಲದ ವಯಸ್ಸನ್ನು 4,500ಮಿಲಿಯನ್ ವರ್ಷಗಳು ಎಂದು ನಿರ್ಧರಿಸಿದ್ದಾರೆ. ಅಂದರೆ 450 ಕೋಟಿ ವರ್ಷಗಳು. ಇಷ್ಟು ದೀರ್ಘಾವಧಿಯ ಕಾಲವನ್ನು ಗ್ರಹಿಸುವುದು ಕಷ್ಟ. ಅದರ ಕಲ್ಪನೆಯೇ ದುಸ್ಸಾಧ್ಯ. ಆದಕಾರಣ ಉದಾಹರಣೆಯೊಂದಿಗೆ ಇದನ್ನು ಈ ರೀತಿ ವಿವರಿಸಿದ್ದಾರೆ.

ಭೂಮಂಡಲದ ಚರಿತ್ರೆಯನ್ನು ಸಾವಿರ ಪುಟಗಳ ನಿಘಂಟಿನಲ್ಲಿ ಬರೆಯುವಂತಾದರೆ ಪ್ರತಿಯೊಂದು ಕಾಲಾವಧಿಗೂ ಸರಿಸಮಾನವಾದ ಪುಟಗಳ ಸಂಖ್ಯೆಯನ್ನು ನಿಗದಿಮಾಡಿದರೆ; ಆಗ ಮೊದಲ 800 ಪುಟಗಳು–ಭೂಮಂಡಲದ ಬಾಲ್ಯಾವಸ್ಥೆಯನ್ನು ವಿವರಿಸುತ್ತದೆ. ಕೊನೆಯ 200 ಪುಟಗಳು-ಭೂಮಂಡಲದಲ್ಲಿ 'ಜೀವ'ವು ಪ್ರಾರಂಭವಾಗಿ ಪ್ರಗತಿ ಪಡೆದುದನ್ನು ತಿಳಿಸುತ್ತದೆ. ಈ 200 ಪುಟಗಳಲ್ಲಿ ಕಟ್ಟಕಡೆಯ 20 ಪುಟಗಳು ಹತ್ತುಕೋಟಿ ವರ್ಷಗಳಿಗೆ ಮೀಸಲಾಗುತ್ತದೆ. ಕೊನೆಯ ಪ್ಯಾರಾದಲ್ಲಿ ಮಾನವನ ಅವತಾರದ ಸೂಚನೆಗಳು ಇರುತ್ತವೆ. ಕೊನೆಯ ಪಂಜ್ಞ್ತಿಯು ಕಳೆದ 80,000 ವರ್ಷಗಳಷ್ಟು ಚರಿತ್ರೆಯನ್ನು ಒಳಗೊಂಡಿರುತ್ತದೆ. ಕಟ್ಟ ಕೊನೆಯು ಮಾತು (Word) ಕಳೆದ 5,000 ವರ್ಷಗಳನ್ನೂ ಪ್ರತಿನಿಧಿಸುತ್ತದೆ.

ಕಳೆದ ಶತಮಾನದ ಪಾಡು ಏನಪ್ಪಾ! ಈ ಅಗಾಧ ಅವಾಂತರದಲ್ಲಿ ಎಂದರೆ:— ಕಟ್ಟಕೊನೆಯಲ್ಲಿರ ಬೇಕಾದ (Full stop) ವಿರಾಮ ಚಿಹ್ನೆಯಲ್ಲಿ 'ಒಂದು ಅಲ್ಪವಾದ ಭಾಗ!

ಮಾಯಾರೂಪಿಯಾದ, ಆದರೂ ಲೋಕದಲ್ಲಿನ ಇಂದಿನ ಬಾಳಿಗೆ ಅವಶ್ಯಕವಾದ ಮನೋಕಲ್ಪನೆಯ 'ಕಾಲದ' ದೃಷ್ಟಿಯಿಂದ ನೋಡಿದರೆ, 'ಕೋಟಿ ಕೋಟಿ ಯುಗಧಾರಿಣೇನಮಃ' ಎಂದು ನುಡಿದ ವ್ಯಾಸಮಹರ್ಷಿಯೂ ಸತ್ಯವನ್ನು ನುಡಿದ. ಭೌತವಿಜ್ಞಾನಿಗಳೂ ಸತ್ಯವನ್ನು ನುಡಿದರು. 'ಕಾಲವು ಮಾಯಾರೂಪಿಯಾದರೂ ಅದು ಸಹಜವಾಗಿ ಇಲ್ಲದೇ ಇದ್ದರೂ ಬಾಳಿಗೆ, ಜ್ಞಾನಾರ್ಜನೆಗೆ ಅತ್ಯಗತ್ಯ'. ಭೌತಶಾಸ್ತ್ರಕ್ಕೂ ಆದಿಭೌತಿಕ, ಆದಿದೈವಿಕ, ಆಧ್ಯಾತ್ಮಿಕ ಶಾಸ್ತ್ರಕ್ಕೂ ಎಷ್ಟು ನಿಕಟವಾದ ಸಂಬಂಧವಿದೆ ಎಂಬುದನ್ನು ಭೌತ

ವಿಜ್ಞಾನಿಗಳು ಆತ್ಮದರಿವಿನಿಂದ ಸೂಚಿಸಿದ್ದಾರೆ. ಇದರ ಪ್ರಮುಖ ವಿವರಗಳನ್ನು ಮುಂದಿನ ಅಧ್ಯಾಯಗಳಲ್ಲಿ ಕಲಿಯಲೆತ್ನಿಸುವ. ಮಾಯಾ ಮತ್ತು ಸತ್ಯ ಇವುಗಳ; Substance ಮತ್ತು Essence, ಇವುಗಳ Becoming ಮತ್ತು Being ಇವುಗಳ ಅತಿ ನಿಕಟ ಸಂಪರ್ಕ ಮತ್ತು ಸಂಬಂಧಗಳನ್ನು ಅರಿಯಲು ತೊಡಗುವ; ಇವೆಲ್ಲಕ್ಕೂ ಆಧಾರದಂತಿರುವ ಕಾಲದ ವಿಶ್ಲೇಷಣೆಯಿಂದ.

## 3. 'ಕಾಲದ ಸಹಜ ಗತಿ'

ಕಾಲವು ಅನಂತ ವಾಹಿನಿ. ಮುಂದು ಮುಂದಕ್ಕೆ ಪ್ರವಹಿಸುತ್ತಲೇ ಇರುತ್ತದೆ. ಬ್ರಹ್ಮಾಂಡದ ಇತರ ಯಾವ ಪ್ರಭಾವಕ್ಕೂ ಒಳಗಾಗದೇ ಒಂದೇ ಗತಿಯಲ್ಲಿ ಸಾಗುತ್ತದೆ ಎಂದು ಜನರು ತಮ್ಮ ಸ್ವಾನುಭವದಿಂದ ತಿಳಿದಿದ್ದರು. ನಿರಂಕುಶವಾಗಿ ಪ್ರವಹಿಸುವ ಕಾಲವನ್ನು ಯಾರೂ ನಿಲ್ಲಿಸಲು ಸಾಧ್ಯವಿಲ್ಲ; ಅದನ್ನು ಅವಸರಪಡಿಸಲುಕೂಡ ಸಾಧ್ಯವಿಲ್ಲ; ಅದರ ಗತಿಯನ್ನು ಮಂದಗತಿಗೆ ಇಳಿಸುವುದೂ ಅಶಕ್ಯ; ಇವೆಲ್ಲವೂ ದೃಢವಾಗಿ ನಂಬಲ್ಪಟ್ಟಿದ್ದುವು. ಪಂಚೇಂದ್ರಿಯಗಳ ಮೂಲಕ ಹೊರ ಪ್ರಪಂಚವನ್ನು ಅರಿತಾಗ, ಆಗಿ ಹೋದ ಘಟನೆಗಳನ್ನು ಪುನಃ ಅದೇ ಕಾಲದಲ್ಲಿ ಸಂಭವಿಸುವಂತೆ ಮಾಡುವುದೂ ಅಸಾಧ್ಯ ಎನ್ನುವುದು ಸ್ಪಷ್ಟವಾಯಿತು. ಎಂಟನೆಯ ವಯಸ್ಸಿನಲ್ಲಿ ಸೀಬೆಹಣ್ಣನ್ನು ತಿಂದಿರುತ್ತೇನೆ, ಬಲು ಖುಷಿಪಟ್ಟಿರುತ್ತೇನೆ. ಮೂವತ್ತರ ಪ್ರಾಯದಲ್ಲಿ ಪುನಃ ರುಚಿಯಾದ ಸೀಬೆಹಣ್ಣನ್ನು ತಿನ್ನಬಹುದು. ಎಂಟರ ವಯಸ್ಸಿನಲ್ಲಿ ತಿರುಗಿ ತಿನ್ನಲು ಸಾಧ್ಯವಿಲ್ಲ, ಎಂಟು ಮುಗಿದು ಹೋಯಿತು. ಜಪ್ಪಯ್ಯ ಅಂದರೂ ಅದು ಹಿಂತಿರುಗುವುದಿಲ್ಲ, ಈ ಅನುಭವದ ಕಾರಣ ಕಾಲವು ಮುಂದು ಮುಂದಕ್ಕೆ ಒಂದೇ ಗತಿಯಲ್ಲಿ ಪ್ರವಹಿಸುತ್ತದೆ ಎಂದು ಜನರು ನಂಬಿದ್ದರು.

ಭೌತವಿಜ್ಞಾನಿಗಳು ಕಾಲದ ಈ ಗುಣವನ್ನು "The time arrow" ಎಂಬ ಪದದಿಂದ ವರ್ಣಿಸಿದರು. ಬಿಟ್ಟ ಬಾಣವು ಒಂದೇ ದಿಕ್ಕಿನಲ್ಲಿ ಹೇಗೆ

ಮುಂದುವರಿಯುವುದೋ ಅದೇ ರೀತಿಯಲ್ಲಿ ಕಾಲವೂ ಮುನ್ನಡೆಯುತ್ತದೆ ಎನ್ನುವ ಸ್ಥೂಲ ಅರ್ಥದಲ್ಲಿ.

ಇದು ಸರಿಯೇ? ಕಾಲಚಕ್ರ ಉರುಳುತ್ತದೆ ಎನ್ನುತ್ತಾರಲ್ಲ ಇದು Time arrow ಕಲ್ಪನೆಗೆ ವ್ಯತಿರಿಕ್ತವಲ್ಲವೇ? ಕಾಲಚಕ್ರ ಉರುಳಿತು ಎಂದರೆ ನನ್ನ ಬಾಳಿಗೆ ಅನ್ವಯಿಸಿದಾಗ ಉರುಳುತ್ತಿರುವ ಕಾಲಚಕ್ರದಲ್ಲಿ ಒಂದು ಭಾಗವನ್ನು ನಾನು ಅವಲಂಬಿಸಿದ್ದೆ. ಆಗೊಮ್ಮೆ 8 ವರ್ಷ ವಯಸ್ಸಾಗಿತ್ತು. ಅಂದರೆ ಹುಟ್ಟಿದ ಬಳಿಕ ಅಷ್ಟು ವರ್ಷಗಳು ಸಂದಿದ್ದವು. ಇನ್ನೊಂದು 70 ವರ್ಷ ಹೀಗೆಯೇ ಕಳೆದೆ. ಅನಂತರ ಸತ್ತೆ. ಸತ್ತಮೇಲೆ ಕಾಲಚಕ್ರ ಉರುಳುತ್ತಿರುವುದು ನನಗೆ ತಿಳಿಯುವುದೇ ಇಲ್ಲ. ನನ್ನಪಾಲಿಗೆ ಈಗ 'ಕಾಲ' ಸ್ಥಬ್ಧವಾಗಿಹೋಯಿತು. ಕಾಲವೂ ಸಮಾಧಿಯಾಯಿತು. ಆಯಿತು, ಆದರೆ ಕಾಲಚಕ್ರ ತಿರುಗುತ್ತಲೇ ಇರಬಹುದಲ್ಲ. ನನಗೆ ತಿಳಿಯದೇ ಇದ್ದರೂನೂ. ಒಂದು ಪೂರ್ಣ ಸುತ್ತು ತಿರುಗಿದಾಗ ತಿರುಗಿ ನಾನು ಹುಟ್ಟಬಹುದು. ಪುನರ್ಜನ್ಮ ಪಡೆಯಬಹುದು. ಆಗಲೂ 8ನೇ ವರ್ಷ ಬರಬಹುದು. ಹಿಂದಿನ ಜನ್ಮದ ಸ್ಮರಣೆಯೂ ಬರಬಹುದು. ಆಗ ಕಾಲವು ಮರುಕಳಿಸಿತು, ಎನ್ನಬಹುದು. 8ನೆ ವರ್ಷವೂ ಬಂದುದರಿಂದ ಒಮ್ಮೆ ಆದ ಘಟನೆ ತಿರುಗಿ ಸಂಭವಿಸಿತು ಎನ್ನಬಹುದು ಅಂದರೆ Time arrow ಕಲ್ಪನೆಯು ಪಾಡೇನು! ಒಮ್ಮೆ ಆದ ಘಟನೆ ಮರುಕಳಿಸಿದರೂ ಇನ್ನೊಂದು ಬೇರೆ ಜನ್ಮದಲ್ಲಿ. ಅಂದರೆ ಮೊದಲು ಸಂಭವಿಸಿದ ಘಟನೆಯು ಅಂದೇ ಮುಗಿಯಿತು. ಅದೇ ಘಟನೆಯು ಅದೇ ಜನ್ಮದಲ್ಲಿ ಪುನಃ ಆಗಲು ಅಸಾಧ್ಯ. Time arrow ಕಲ್ಪನೆ ಸರಿ ಎಂದನ್ನಬೇಕು.

ಇವುಗಳಿಂದ, ಐನ್‌ಸ್ಟೈನ್ ಹೇಳಿದ "I-time" ವೈಯಕ್ತಿಕ ಅನುಭವದ ಕಾಲ ಮತ್ತು ಕೇವಲ ಕಾಲ ಇವೆರಡೂ ಪ್ರತ್ಯೇಕವಾದವು. I ಎಂದರೆ ನಾನು ಎನ್ನುವ ಕಲ್ಪನೆಗೆ ಅಂಟಿಕೊಂಡ ಕಾಲದ ಗುಣಗಳೇ ಬೇರೆ. ಕೇವಲ ಕಾಲದ ಗುಣಗಳೇ ಬೇರೆ ಎನ್ನಬೇಕು. I-Time, ವೈಯಕ್ತಿಕ ಕಾಲದಲ್ಲಿ ಕಾಲವು ಸ್ಥಬ್ಧವಾಗಲು ಸಾಧ್ಯ; ಅವಸರದಿಂದ ಕಾಲವು ನಡೆಯಬಹುದು. ಮಂದಗತಿಯಲ್ಲೂ ಅದು ತೆವಳಬಹುದು. ಈ ವಿಷಯಗಳನ್ನು ಮುಂದಿನ

ಅಧ್ಯಾಯಗಳಲ್ಲಿ ವಿವರಿಸಲಾಗುವುದು. "ಕೇವಲ ಕಾಲ" 'Absolute time' ಇದನ್ನು ಭೌತವಿಜ್ಞಾನಿಗಳು ಐನ್‌ಸ್ಟೈನನ ತರುವಾಯ ಹೇಗೆಂದು ಅರ್ಥಮಾಡುತ್ತಾರೆ? ಅಂತಹುದೊಂದು ಇಲ್ಲವೇ ಇಲ್ಲ ಎನ್ನುತ್ತಾರೆ. ಇರುವುದೆಲ್ಲಾ Space-Time Continuum. ಅವಿಚ್ಛಿನ್ನವಾದ ದೇಶಕಾಲದ ಒಕ್ಕೂಟದ ಪಸರಿರುವಿಕೆ. ಹೀಗಂದರೇನು?

ಮ್ಯಾಗ್ನೆಟ್ (Magnet) ಒಂದನ್ನು ಇರಿಸಿ ಅದರ ಮೇಲೆ ಕಾಗದವೊಂದನ್ನು ಹರಡುವುದು. ಕಾಗದದ ಮೇಲೆ ಕಬ್ಬಿಣದ ಹುಡಿಯನ್ನು ಉದುರಿಸಿದರೆ, ಕಬ್ಬಿಣದ ಹುಡಿಯು ರೇಖೆ ರೇಖೆಗಳಾಗಿ ಸಾಲುಗಟ್ಟುತ್ತವೆ. ಮ್ಯಾಗ್ನೆಟ್ಟಿನ ಎರಡು ತುದಿಗಳಲ್ಲಿಯೂ ಮೀಸೆ ಕಟ್ಟಿದಂತೆ ಕಬ್ಬಿಣದ ಹುಡಿಯು ಒತ್ತಡವಾಗಿ ಶೇಖರಿಸಲ್ಪಡುತ್ತದೆ. ಹೈಸ್ಕೂಲುಗಳಲ್ಲಿ ಈ ಪ್ರಯೋಗವನ್ನು ವಿದ್ಯಾರ್ಥಿಗಳೆದುರಿಗೆ ಮಾಡಿ ತೋರಿಸುತ್ತಾರೆ. ಎಲ್ಲರಿಗೂ ತಿಳಿದಿರಬಹುದಾದ ವಿಷಯ.

ಮ್ಯಾಗ್ನೆಟ್ಟಿನ ಮೇಲೆ ಹರಡಿರುವ ಕಾಗದದ ಹತ್ತಿರದಲ್ಲಿ ಮ್ಯಾಗ್ನೆಟಿಕ್ ಫೀಲ್ಡ್ ಇರುತ್ತದೆ. ಮ್ಯಾಗ್ನೆಟಿಕ್ ಪರಿಸರವಿರುತ್ತದೆ. ಈ ಶಕ್ತಿಯು ರೇಖೆ ರೇಖೆಗಳಾಗಿ ಮ್ಯಾಗ್ನೆಟ್ಟಿನ ಎರಡೂ ಧ್ರುವಗಳ ಅಂತರದಲ್ಲಿ ಇರುತ್ತವೆ. ಕಬ್ಬಿಣದ ಹುಡಿಯನ್ನು ಹಾಕಿದಾಗ, ಆ ಕಣಗಳು ಈ ರೇಖೆಗಳಿಂದ ಪ್ರಭಾವಿಸಲ್ಪಟ್ಟು, ಅದೇ ರೀತಿಯಲ್ಲಿ ಚಿತ್ರ ಕಟ್ಟುತ್ತವೆ. ಮ್ಯಾಗ್ನೆಟ್ಟಿನ ಎರಡೂ ಧ್ರುವಗಳ ಬಳಿ ಮ್ಯಾಗ್ನೆಟಿಕ್ ಶಕ್ತಿಯು ಅಧಿಕವಾಗಿರುವುದರಿಂದ ಆ ಸ್ಥಳಗಳಲ್ಲಿ ಕಬ್ಬಿಣದ ಹುಡಿಯು ಭರ್ಜರಿ ಮೀಸೆಯಂತೆ ದಟ್ಟವಾಗಿ ಕೂಡುತ್ತವೆ.

ಇದೇ ರೀತಿಯಲ್ಲಿ ಬ್ರಹ್ಮಾಂಡದಲ್ಲೆಲ್ಲೂ ನಾಲ್ಕು ಅಳತೆಗಳುಳ್ಳ,- ಮೂರು Space ಇನದು, ಒಂದು ಕಾಲದ್ದು;- Space-time continuum, ಹರಡಿಕೊಂಡಿರುತ್ತದೆ. ಬ್ರಹ್ಮಾಂಡದಲ್ಲಿರುವ ವಸ್ತುಗಳು Space Time Continuum ಇನ ಪ್ರಭಾವಕ್ಕೆ ಒಳಗಾಗಿ, ಚಲಿಸುತ್ತವೆ. ಅಥವಾ ಇರುತ್ತವೆ. Space-Time Continuum ಎನ್ನುವುದು ಮ್ಯಾಗ್ನೆಟಿಕ್ ಪರಿಸರವಿದ್ದಂತೆ.

ಭೌತವಿಜ್ಞಾನಿಗಳ ಈ ದೃಷ್ಟಿ ಕೋನದಿಂದ ನೋಡಿದರೆ ಕೇವಲ ಕಾಲ, ಅಥವಾ Absolute time ಇಲ್ಲವೇ ಇಲ್ಲ. ಇಲ್ಲದೆ ಇರುವ ಕಲ್ಪನೆಯು, ಅವಸರಪಡುವುದಾಗಲೀ ಮಂದಗತಿಯಲ್ಲಿರುವುದಾಗಲೀ, ಹೇಗೆ ಸಾಧ್ಯ ? I-Time ಅಥವಾ ವೈಯಕ್ತಿಕ ಕಾಲದ ಗುಣಗಳನ್ನು Absolute Time ನಲ್ಲಿ ಕಾಣಲಸಾಧ್ಯ ; ಏಕೆಂದರೆ ಅಂತಹುದೊಂದು ಇಲ್ಲವೇ ಇಲ್ಲ !

## 4. ಕಾಲದ ಮೇಲೆ ವೇಗದ ಪರಿಣಾಮ

ಬೆಳಕಿನ ವೇಗಕ್ಕಿಂತಲೂ ಹೆಚ್ಚಾದ ವೇಗವನ್ನು ಬ್ರಹ್ಮಾಂಡದಲ್ಲಿ ಯಾವ ವಸ್ತುವೂ ಸಾಧಿಸಲು ಆಗುವುದಿಲ್ಲ. ಗಣಿತ ಶಾಸ್ತ್ರದ ಪ್ರಕಾರ ಇದನ್ನು ಐನ್‌ಸ್ಟೈನ್ ಸಿದ್ಧಾಂತ ಮಾಡಿ ತೋರಿಸಿದ.

ಆದರೆ ಗಣಿತ ಶಾಸ್ತ್ರದ ಪ್ರಕಾರವೇ, ಕೆಲವು Particles, ಕಣಾಲ್ಪಗಳು, ಕೆಲವು ಸಂದರ್ಭಗಳಲ್ಲಿ ಬೆಳಕಿನ ವೇಗಕ್ಕಿಂತಲೂ ಹೆಚ್ಚು ವೇಗದಲ್ಲಿ ಸಾಗಬಹುದು ಎಂದು ಕೆಲವು ಭೌತ ವಿಜ್ಞಾನಿಗಳು ಸಿದ್ಧಾಂತ ಮಾಡಿದ್ದಾರೆ. ನಮ್ಮ ದೇಶದ ಸುದರ್ಶನ್ ಚಾಂಡಿ ಅವರು ಇಂತಹವರಲ್ಲಿ ಪ್ರಮುಖರು. "Tachyons" ಎಂದಿವನ್ನು ಅವರು ಹೆಸರಿಸಿದ್ದಾರೆ.

ಇದು ಇರುವುದಾದರೆ, ಇದೆ ಎಂದು ಹೇಳಲು ಸಾಕಷ್ಟು ಪರೀಕ್ಷಾ ಪ್ರಯೋಗದ ಸಾಕ್ಷ್ಯಗಳೂ ಇವೆ; ಇದರ ಪರಿಣಾಮವೇನಾಗಬಹುದು ?

Space,Time Continuum ನಲ್ಲಿ, ಅಂದರೆ ನಮ್ಮ ಭೂಲೋಕದಲ್ಲಿಯೂ ; ಒಂದು ಕಣಾಲ್ಪ ಅಥವಾ Particle ಇನ ಸ್ಥಿತಿಯನ್ನು ಗಮನಿಸುವ.

ಈ ಪಾರ್ಟಿಕಲ್, ನೂರು ಮೈಲಿಗಳು ಪ್ರತಿ ಸೆಕೆಂಡಿಗೆ, ಈ ವೇಗದಲ್ಲಿ ಸಾಗುತ್ತಿದೆ ಅನ್ನಿ. Space ಇ ನಲ್ಲಿ ಈ ಪಾರ್ಟಿಕಲ್ ಮದ್ರಾಸಿನಲ್ಲಿದೆ ಎನ್ನಿ. ಮದ್ರಾಸಿನಿಂದ ಬೆಂಗಳೂರಿಗೆ 200 ಮೈಲಿ ದೂರವಿದೆ. ಈ ಪಾರ್ಟಿಕಲ್ ಮದ್ರಾಸಿನಿಂದ ಬೆಂಗಳೂರಿನತ್ತ ಧಾವಿಸುತ್ತಿದೆ. ಅಂದರೆ 2 ಸೆಕೆಂಡುಗಳಲ್ಲಿ ಬೆಂಗಳೂರನ್ನು ಸೇರುತ್ತದೆ.

Space-Time Continuum ಭಾಷೆಯಲ್ಲಿ ಇದನ್ನು ಹೇಗೆ ವರ್ಣಿಸುವುದು? ಮಂದ್ರಾಸಿನಿಂದ ಪಶ್ಚಿಮಕ್ಕೆ, ಹತ್ತು ಅಡಿಗಳ ಎತ್ತರದಲ್ಲಿ, ಹಿಮಾಲಯದಿಂದ ಸಾವಿರ ಮೈಲಿ ದಕ್ಷಿಣಕ್ಕಿರುವ ಹಾದಿಯಲ್ಲಿ, ಇಷ್ಟು ಹೊತ್ತಿಗೆ, ಪಾರ್ಟಿಕಲ್ ಹೊರಟಿತು. ಎರಡು ಸೆಕೆಂಡುಗಳಲ್ಲಿ ಅದು ಬೆಂಗಳೂರನ್ನು ತಲಪಿತು. ಅಂದರೆ ಮೂರೂ ಮಿತಿಗಳ Spaceಇನ ವಿವರಣೆಯೂ ಆಯಿತು, Time ಇನ ಸೂಚನೆಯೂ ಆಯಿತು.

ಆದರೆ ಮಸಲಾ ಈ ಪಾರ್ಟಿಕಲ್, ಬೆಳಕಿನ ವೇಗದಲ್ಲಿ ಧಾವಿಸಿತು ಅನ್ನಿ. ಆಗ ಅದು ಎರಡು ಸೆಕೆಂಡುಗಳಲ್ಲಿ 3,72,568 ಮೈಲಿಗಳ ದೂರ ಸಾಗಿರುತ್ತದೆ. ಮದ್ರಾಸು ಬೆಂಗಳೂರಿನ ವೃತ್ತದಲ್ಲಿ; ಭೂಮಂಡಲದ ಸುತ್ತಳತೆಯು ಸುಮಾರು 25,000 ಮೈಲಿಗಳಿಗಿಂತ ಕಡಿಮೆ ಇರುತ್ತದೆ. ಅಂದರೆ ಆ ಕಣಾಲ್ಪವು (Particle) 2 ಸೆಕೆಂಡುಗಳಲ್ಲಿ ಸುಮಾರು 15 ಸರ್ತಿ ಭೂಪ್ರದಕ್ಷಿಣೆ ಮಾಡಿರುತ್ತದೆ. 15 ಸಲ ಬೆಂಗಳೂರನ್ನು ದಾಟಿ ಹೋಗಿರುತ್ತದೆ. ಇವೆಲ್ಲವೂ ಸುಲಭವಾಗಿ ತಿಳಿಯುವಂತಹ ವಿಷಯಗಳು.

ಆದರೆ ಈ Particle ಕಣಾಲ್ಪವು ಬೆಳಕಿನ ವೇಗಕ್ಕಿಂತ ಎರಡರಷ್ಟು ವೇಗದಲ್ಲಿ ಧಾವಿಸಿತು ಅನ್ನಿ. ಆಗ ಲೆಕ್ಕದ ಪ್ರಕಾರ ಅದು 2 ಸೆಕೆಂಡುಗಳಲ್ಲಿ 30 ಸಲ ಭೂಪ್ರದಕ್ಷಿಣೆಯನ್ನು ಮಾಡಿ 30 ಸಲ ಬೆಂಗಳೂರನ್ನು ದಾಟಿ ಹೋಗಬೇಕು. ಆದರೆ ಬೆಳಕಿನ ವೇಗಕ್ಕಿಂತ ಯಾವ ಕಣವೂ ಧಾವಿಸಲಾರದು Space-Time Continuum ನಲ್ಲಿ. ದೇಶಕಾಲಾವಚ್ಛಿನ್ನ ಪರಿಸರದಲ್ಲಿ. ಅಂದರೆ ಏನಾಗುತ್ತದೆ? ದೇಶ ಕಾಲದ ನಿಕಟ ಬಂಧನದಿಂದ ಕಾಲವು ಬಿಡಿಸಿಕೊಂಡು ಅತಿ ಮುಂದಕ್ಕೆ ಹೋಯಿತು ಅನ್ನಬೇಕು. ಕೆಲಕಾಲಾನಂತರ ದೇಶವು ಮುಂದುವರಿಯುತ್ತಾ ಕಾಲವು ಈಗಾಗಲೇ ಸಾಗಿರುವಲ್ಲಿಗೆ ಸೇರುತ್ತದೆ ಎನ್ನಬೇಕು. ಅಂದರೆ ಕಾಲವು "ದೇಶಕಾಲ"ದ ಒಕ್ಕೂಟದಿಂದ ಮುಂದುವರೆಯಲು ಸಾಧ್ಯವಾದರೆ, ಈಗಿನ ಭವಿಷ್ಯತ್ ಕಾಲವು, ಆಗ, ಆ ಸ್ಥಿತಿಯಲ್ಲಿ ವರ್ತಮಾನ ಕಾಲವಾಗುತ್ತದೆ!

ಹೀಗಾದರೆ, ಹಾಗಾದರೆ, ಎನ್ನುವ ಈ "ರೇ" ರಾಜ್ಯದಲ್ಲಿ ತರ್ಕಬದ್ಧವಾಗಿ ಯೋಚಿಸೋಣ. 1972ರ ಜೂನ್‌ನಲ್ಲಿ ಬೆಂಗಳೂರಿನಲ್ಲಿ ನಾನಿರುತ್ತೇನೆ. ದೇಶಕಾಲದ ಒಕ್ಕೂಟದಲ್ಲಿ ನಾನಿರುತ್ತೇನೆ. ನನ್ನ ಪರಿಸರದ ಅರಿವು

ಸಾಕಷ್ಟು ಮಟ್ಟಿಗೆ ಇದೆ. ಇನ್ನು 20 ವರ್ಷಗಳಲ್ಲಿ ದೇಶಕಾಲದ ಒಕ್ಕೂಟವು ಸಾಕಷ್ಟು ವ್ಯತ್ಯಾಸವನ್ನು ಹೊಂದಿರುತ್ತದೆ. ಅದು ಪ್ರಗತಿಯೇ ಆಗಿರ ಬಹುದು, ಅಧೋಗತಿಯೇ ಆಗಿರಬಹುದು. ಆದರೂ ವ್ಯತ್ಯಾಸವೇನೋ ಆಗಿಯೇ ಇರುತ್ತದೆ.

ಮಸಲಾ 1972ರ ಜೂನ್ 6 ರಂದು, ಅಂದರೆ ಈ ದಿನ, ಕಾಲವು, ದೇಶಕಾಲದ ಒಕ್ಕೂಟದಿಂದ ಬಿಡಿಸಿಕೊಂಡು, ಬೆಳಕಿನ ವೇಗಕ್ಕಿಂತ ಮಿಗಿಲು ವೇಗದಲ್ಲಿ ಉಡ್ಡಾಯಿಸಿಬಿಡುತ್ತೆ ಅನ್ನಿ. ಕೆಲವೇ ಸೆಕೆಂಡುಗಳಲ್ಲಿ ಅದು 1992ರ ಜೂನ್ 6 ರಲ್ಲಿಗೆ ತಲುಪಿರುತ್ತದೆ. ಆಗ ನಾನೂ ಅಂದರೆ, ಅರಿಯುವಂತಹ ನನ್ನ ಒಂದು ಅಂಶವು, ಒಕ್ಕೂಟದಿಂದ ಬಿಡಿಸಿಕೊಂಡ ಕಾಲದೊಂದಿಗೆ ಹಾರಿ ರುತ್ತದೆ. 1992ರ ಜೂನ್ 6ರ ಪರಿಸರದ ಅರಿವು ನನಗೆ ಸ್ಪಷ್ಟವಾಗುತ್ತದೆ. ಈ ಅರಿವು ಪಡೆದ ಅಂಶವೊಂದನ್ನು ಬಿಟ್ಟು ಮಿಕ್ಕ ಎಲ್ಲ ನಾನೂ ದೇಶಕಾಲದ ಒಕ್ಕೂಟದಲ್ಲಿ 1972ರ ಜೂನ್ 6 ರಲ್ಲಿ ಇದ್ದೇ ಇರುತ್ತೇನೆ. ಆ ಅಂಶದ ಅರಿವೂ ನನಗೆ ಭವಿಷ್ಯದ ಕನಸಿನಂತೆ ಸ್ಪಷ್ಟಕಾಣಿಸುತ್ತದೆ; ಅದನ್ನು ಇಂದು, ಅಂದರೆ 1972ರ ಜೂನ್ 6 ರಂದು ನುಡಿಯುತ್ತೇನೆ. ನಾನು ನುಡಿದುದು 1992ರಲ್ಲಿಯೂ ಕೇವಲ ಅಸಂಭವ ಎನ್ನುವುದು ಎಲ್ಲರಿಗೂ ತಿಳಿದಿರುತ್ತದೆ. ನನ್ನ ಭವಿಷ್ಯದ ನುಡಿಯನ್ನು ಯಾರೂ ನಂಬುವುದಿಲ್ಲ. ವಿಚಾರ ಮಾಡುವ ನನ್ನ ಮನಸ್ಸಿನ ಭಾಗವೂ ನಂಬುವುದಿಲ್ಲ.

ಆದರೆ 1992 ರ ಜೂನ್ 6 ಬಂತು. ಅಂದರೆ ದೇಶಕಾಲದ ಒಕ್ಕೂಟವು ಆ ಹಂತಕ್ಕೆ ತಲಪಿತು. ಆಗ 20 ವರ್ಷಗಳ ಹಿಂದೆ ನಾನು ನುಡಿದುದು ಸತ್ಯ ವಾಗಿ ಪರಿಣಮಿಸುತ್ತದೆ. 20 ವರ್ಷಗಳ ಹಿಂದೆಯೇ ಹೀಗಾಗುತ್ತದೆ ಎಂದು ನುಡಿದಿದ್ದ, ಎಂದು ಆಗ ಜನರು ಆಶ್ಚರ್ಯಪಡುತ್ತಾರೆ.

ಕಾಲವು, ದೇಶಕಾಲದ ಒಕ್ಕೂಟದಿಂದ ಬಿಡಿಸಿಕೊಂಡು ಉಡ್ಡಾಯಿಸಿ ಕೊಂಡು ಹೋದರೆ, 1992 ಜೂನ್ 6 ರನ್ನು ತಲುಪಿದಾಗ, ಆಗ ಅದಕ್ಕೆ ಕಂಡುದು ಅದರ ವರ್ತಮಾನ ಕಾಲದ ದೇಶ! ಅದಕ್ಕೂ ಭವಿಷ್ಯದ ಅಂದರೆ ಜೂನ್ 1992 ರ ಮುಂದಿನ ಭವಿಷ್ಯದ ಅರಿವು ಇರುವುದಿಲ್ಲ.

ಈ ರೀತಿಯಲ್ಲಿ ಕಣಾಲ್ಪವೊಂದು ಬೆಳಕಿನ ವೇಗಕ್ಕಿಂತ ಎರಡರಷ್ಟು ಪಟ್ಟು ವೇಗವಾಗಿ ಮದ್ರಾಸಿನಿಂದ ಬೆಂಗಳೂರಿನತ್ತ ಧಾವಿಸಿತು ಅನ್ನಿ.

ಮೂವತ್ತು ಸರ್ತಿ ಭೂಪ್ರದಕ್ಷಿಣೆಯನ್ನು ಮಾಡಿರುತ್ತದೆ. ಆದರೆ 2 ಸೆಕೆಂಡು ಗಳಲ್ಲಿ ಅದು ಕಡೆಯ ಸರ್ತಿ ಭೂಪ್ರದಕ್ಷಿಣೆಯನ್ನು ಮಾಡುವಾಗ, ಮದ್ರಾಸು ಬೆಂಗಳೂರು ಮತ್ತೆ ಇವುಗಳ ಮಧ್ಯೆ ಇರುವ ತಾಣದಲ್ಲಿ ಅದು ಕಾಣು ವುದೇನನ್ನು? 1992 ರದೋ ಅಥವಾ 2992 ರದೋ ಇಸವಿಯಲ್ಲಿ ಮದ್ರಾಸ್ ಬೆಂಗಳೂರು ಮತ್ತು ಮಧ್ಯಾಂತರ ಪ್ರದೇಶದ ದೃಶ್ಯವನ್ನು. ಆ ವೇಳೆಗಳಲ್ಲಿ ಈ ಸ್ಥಳವು ಯಾವ ರೀತಿಯಲ್ಲಿ ಬದಲಾವಣೆಯಾಗಿರುತ್ತದೋ ಯಾರು ಬಲ್ಲರು? ಈ ಊರುಗಳ ಮಧ್ಯೆ ಅಂತರಿಕ್ಷದಲ್ಲಿ ಮಾನೋರೈಲುಗಳು ಓಡುತ್ತಿರ ಬಹುದು! ಅಥವಾ ಭೂಗರ್ಭದಲ್ಲಿ ಟ್ಯೂಬ್ ರೈಲುಗಳು ಜೆಟ್ ವಿಮಾನಗಳ ವೇಗದಲ್ಲಿ ಸಾಗುತ್ತಿಋಬರಹುದು! ಅಥವಾ ಮಾನವರೇ ಸ್ವಯಂ ಚಾಲಿತ ರೆಕ್ಕೆಗಳನ್ನು ಅಳವಡಿಸಿಕೊಂಡು ಇಂದು ಊಹಿಸಲೂ ಆಗದ ವೇಗದಲ್ಲಿ ಪ್ರಯಾಣವನ್ನು ಮಾಡುತ್ತಿರಬಹುದು! ಇದನ್ನು ಕಣಾಲ್ಪವು ಕಾಣಬಹುದು ಕಂಡುದನ್ನು ಇಂದು ನುಡಿಯಲೂ ಬಹುದು!

ಭೌತ ಶಾಸ್ತ್ರದ ಪ್ರಕಾರವೂ ಕೂಡ, ಕೆಲವು ಕಣಗಳು, ಕೆಲವು ವೇಳೆ ಬೆಳಕಿನ ವೇಗಕ್ಕಿಂತ ವೇಗವಾಗಿ ಸಾಗಬಲ್ಲವು, ಎಂದು ಹಲವಾರು ವಿಜ್ಞಾನಿ ಗಳು ಗಣಿತ ಶಾಸ್ತ್ರದ ಸಾಕ್ಷ್ಯಗಳಿಂದ ಸಿದ್ಧಾಂತ ಮಾಡಿದ್ದಾರೆ. ಇದನ್ನು ಓದಿದ ಕುಹಕಿಯೊಬ್ಬರು ಪಂಚಪಂಜ್ಞಿತ್ತಿಯೊಂದನ್ನು ಬರೆದರು :–

ಜ್ಯೋತ್ಸ್ನಾದೇವಿ ಎಂಬ ತಾರೆಯಿದ್ದಳು.
ಕಾಮನೊಡನೆ ರಾಕೆಟ್ಟಲ್ಲಿ ಜಿಗಿದು ಬಿಟ್ಟಳು.
Relativity ಯನ್ನು ನಂಬಿ
ಹೃದಯದಲ್ಲಿ ಒಲವ ತುಂಬಿ
ಹಿಂದಿನ ರಾತ್ರಿಯೇ ತೌರಿಗೆತಾ ಬಂದೇ ಬಿಟ್ಟಳು.

ಅಣಕಪಂಜ್ಞಿತ್ತಿಗಳು ಹೇಗೆ ಇರಲಿ; ವೈಜ್ಞಾನಿಕವಾಗಿ ಅವಕ್ಕೆ ಬೆಂಬಲ ವಿದೆ ಎನ್ನುವುದು ಸ್ಪಷ್ಟ.

## 5. ನಮ್ಮ ಊಹೆಗಳಲ್ಲಿ ಒಂದು

ಡ್ಯೂಯಿ. ಬಿ. ಲಾರ್ಸನ್ (Dewey. B. Larson) ಎಂದೊಬ್ಬ ಪ್ರಸಿದ್ಧ ಭೌತ ವಿಜ್ಞಾನಿಯಿದ್ದಾನೆ. ಆತನ ಸಿದ್ಧಾಂತವು ಬಲುನವ್ಯವಾದುದು,

ಸರಳವೂ ಆದುದು ಅದನ್ನು ಬಲು ಮಂದಿ ಒಪ್ಪಿಕೊಂಡಿಲ್ಲ. ಆದರೂ "ಕಾಲ"ದ ದೃಷ್ಟಿಯಿಂದ ಆತನ ಸಿದ್ಧಾಂತವು ಕ್ರಾಂತಿಕಾರಿಯಾದುದು. ಆದ ಕಾರಣ ಆತನ ಸಿದ್ಧಾಂತಗಳನ್ನು ಸ್ವಲ್ಪಮಟ್ಟಿಗೆ ವಿವರಿಸುತ್ತೇನೆ.

ಆತನೂ ಇತರ ವಿಜ್ಞಾನಿಗಳಂತೆ, ದೇಶ ಎಂದರೆ Space, ಮೂರು ಮಿತಿಗಳು ಅಥವಾ ಅಳತೆಗಳುಳ್ಳದ್ದು ಎಂದು ಹೇಳುತ್ತಾನೆ. ಉದ್ದ, ಅಗಲ, ದಪ್ಪ ಅಥವಾ ಆಳ. ಕಾಲವೂ ಮೂರು ಅಳತೆಗಳುಳ್ಳದ್ದು ಎನ್ನುತ್ತಾನೆ, ಅವ! ಅದಕ್ಕೂ ಉದ್ದ, ಅಗಲ, ಆಳ ಅಥವಾ ದಪ್ಪ ಇದೆ ಎನ್ನುತ್ತಾನೆ. ಅವನ ಸಿದ್ಧಾಂತದ ಪ್ರಕಾರ.

1. Space is THREE Dimensional, homogeneous and Isotropic, throuhgout the universe.

2. Time is also 3 dimensional & progress uniformly throughout the universe.

ಅಂದರೆ Time-arrow ಎನ್ನುವುದನ್ನು ಅಲ್ಲಗಳೆದಂತಾಯಿತು.

3. Throughout the universe, the scalar Relation between Space & Time is Reciprocal and this relation Constitutes Motion.

ಈ ಸಿದ್ಧಾಂತದ ಪ್ರಕಾರ ಕಾಲವು ಎಲ್ಲ ದಿಕ್ಕುಗಳಲ್ಲಿಯೂ ಪಸರಿಸುತ್ತದೆ. ಹಿಂದಕ್ಕೆ ಮುಂದಕ್ಕೆ, ಮತ್ತು ಪಕ್ಕಗಳಿಗೆ ಕೂಡ ಸಮಾನ ರೀತಿಯಲ್ಲಿ ಹರಡಬಲ್ಲದು ಮತ್ತು ಹರಡುತ್ತದೆ.

ದೇಶ, ಕಾಲದ ಪರಸ್ಪರ ಸಂಬಂಧವೇ ಚಲನ.

ಕ್ರಾಂತಿಕಾರಿಯಾದ "ಕಾಲ"ದ ಕಲ್ಪನೆಯೇ ಹೌದು. ಆದರೆ ಇದರ ಪ್ರಕಾರ, ಆತ ಭೌತ ಶಾಸ್ತ್ರದ ಎಲ್ಲ ನಿಯಮಗಳನ್ನೂ ವಿವರಿಸಿ ತೋರಿಸುತ್ತಾನೆ!

ಅಂದರೆ "ಕಾಲ"ದ ದೃಷ್ಟಿಯಿಂದ "ಇದೇ ಕೊನೆಯ ಮಾತು" ಎಂಬುದಿಲ್ಲ. ಈ ಟೀಕೆಯು ವಿಜ್ಞಾನದ ಎಲ್ಲ ಶಾಖೆಗಳಿಗೂ, ಶಾಸ್ತ್ರಗಳಿಗೂ ಒಂದಲ್ಲ ಒಂದು ರೀತಿಯಲ್ಲಿ ಅನ್ವಯಿಸುತ್ತದೆ. ಅಲ್ಲವೇ!

# ಅಧ್ಯಾಯ-೨

## 1. ವೈಯಕ್ತಿಕ ಕಾಲ

Absolute Time ಅಥವಾ ಕೇವಲ ಕಾಲ ಎಂಬುದೊಂದು ಇಲ್ಲ. ದೇಶಕಾಲದ ಒಕ್ಕೂಟ; Space-Time Continuum, ಮಾತ್ರ ಬ್ರಹ್ಮಾಂಡ ದಲ್ಲಿ Magnetic field ಇನ ತರಹ ಸರ್ವ ವ್ಯಾಪಿಯಾಗಿದೆ. ಆದುದರಿಂದಲೇ ಯಾವುದೊಂದು ವಸ್ತುವು ಬ್ರಹ್ಮಾಂಡದಲ್ಲಿದ್ದರೂ, ಅದಕ್ಕೆ ನಾಲ್ಕು ಮಿತಿಗಳಿವೆ, ಉದ್ದ, ಅಗಲ, ಆಳ ಮತ್ತು ಕಾಲ ಎಂಬ ನಾಲ್ಕು ಆಳತೆಗಳು. ಇಷ್ಟನ್ನು ಅರಿತೆವು.

ಇದೆಲ್ಲಾ ಅರಿವಿಗೂ ನಾಂದಿಯನ್ನು ಹಾಡಿದ ಪ್ರಚಂಡ ಐನ್‌ಸ್ಟೈ ನ್ನನು "I-Time" ವೈಯಕ್ತಿಕ ಕಾಲವೆಂಬುದೊಂದು ನಮ್ಮ ಅನುಭವಕ್ಕೆ ಬರುತ್ತದೆ ಎಂದೂ ನುಡಿದಿದ್ದ. ಇಂತಹ ವೈಯಕ್ತಿಕ ಕಾಲವು ನಮ್ಮ ಅನು ಭವಕ್ಕೆ ಬರುವುದಾದರೆ, ನಾವು ಎನ್ನುವಾಗ ಕಾಣಬರುವ ದೇಹ, ಮನಸ್ಸು ಮತ್ತು ಮನೋಽತೀತವಾದ ಪರಾ-ವಸ್ತು. ಎಂಬ ಮೂರು ಭಾಗಗಳನ್ನು ವೈಯಕ್ತಿಕ ಕಾಲದ ವಿಶ್ಲೇಷಣೆಗೆ ಬಳಸಿಕೊಳ್ಳಬೇಕು. ಹಾಗಾಗಿ (1) ದೇಹ ಮತ್ತು ಕಾಲ (2) ಮನಸ್ಸು ಮತ್ತು ಕಾಲ (3) ಮನೋಽತೀತ ಮತ್ತು ಕಾಲ ಎಂಬ ಮೂರು ಭಾಗಗಳಲ್ಲಿ ಕಾಲದ ವಿಶ್ಲೇಷಣೆಯನ್ನು ಮಾಡುವುದು ಉಪಯುಕ್ತವಾದುದು.

## 2. ದೇಹ ಮತ್ತು ಕಾಲ

ನಮ್ಮ ದೇಹದಲ್ಲಿ ಹಲವಾರು ಅಂಗಗಳಿವೆ. ಒಂದೊಂದಕ್ಕೂ ಒಂದೊಂದು ಕಾಲದ ಗತಿ ಇದೆ. ಹೃದಯವನ್ನು ಪರೀಕ್ಷಿಸಿದರೆ, ನಿಮಿಷಕ್ಕೆ 72 ಬಾರಿ ಅದು ಮಿಡಿಯುವುದು ಗೊತ್ತಾಗುತ್ತದೆ. ಮಿಡಿಯುವುದು ಎಂದರೇನು? ಹೃದಯದ ಮಾಂಸಖಂಡವು ಸಂಕುಚಿತವಾಗುತ್ತದೆ. ಆಗ

ರಕ್ತವು ದೇಹದೊಳಕ್ಕೆ ದೂಡಲ್ಪಡುತ್ತದೆ. ಸಂಕುಚಿತಾನಂತರ ಹೃದಯವು ಪೂರ್ವಸ್ಥಿತಿಗೆ ಬರುತ್ತದೆ. ಆಗ ಮಲಿನರಕ್ತವು ಹೃದಯಕ್ಕೆ ಪ್ರವಹಿಸುತ್ತದೆ. ಈ ಎರಡೂ ಘಟನೆಗಳಾಗುವಾಗ ಲಬ್-ಡಪ್ ಎಂದು ಹೃದಯದ ಬಳಿ ಶಬ್ದವು ಕೇಳಿಸುತ್ತದೆ. ಇದನ್ನೇ ವೈದ್ಯರು ಪರೀಕ್ಷೆ ಮಾಡುವುದು, ಹಾಗೂ ನಾಡಿಯು, ಹೃದಯವು ಸಂಕುಚಿಸಿದಾನಂತರ, ಮಿಡಿಯುತ್ತದೆ. ಇದರ ಪರೀಕ್ಷೆಯೇ ನಾಡೀ ಪರೀಕ್ಷೆ. ಸಾಮಾನ್ಯವಾಗಿ ಆರೋಗ್ಯವಂತರಲ್ಲಿ ನಾಡಿಯು 72 ಬಾರಿ ಪ್ರತಿ ನಿಮಿಷಕ್ಕೆ ಮಿಡಿಯುತ್ತದೆ. ಆರೋಗ್ಯವಾಗಿರುವ ಗಡಿಯಾರವು ನಿಮಿಷಕ್ಕೆ 60 ಸೆಕೆಂಡುಗಳನ್ನು ನಿಖರವಾಗಿ ತೋರಿಸುವಂತೆ. ಕಾಲದ ಗತಿಯನ್ನು ಎಣಿಸಲು ಗಡಿಯಾರವನ್ನು ಬಳಸುವಂತೆ, ಆರೋಗ್ಯ ವಂತನ ನಾಡೀ ಮಿಡಿತವನ್ನೂ ಬಳಸಬಹುದು. ಗೆಲಿಲಿಯೋ ಮೊದಮೊದಲು ಹೀಗೆಯೇ ಮಾಡಿದ್ದು.

ನಾಡೀ ಬಡಿತವು ನಿಮಿಷಕ್ಕೆ 72 ಬಾರಿ ಆದರೆ, ಉಸಿರಾಡುವ ಗತಿಯು ನಿಮಿಷಕ್ಕೆ 18. ನಾಡೀ ಬಡಿತಕ್ಕೂ ಉಸಿರಾಡುವ ಗತಿಗೂ ಅತಿನಿಕಟ ಸಂಬಂಧವಿದೆ. ರಕ್ತವನ್ನು ಪ್ರವಹಿಸುವುದು ಒಂದರ ಕೆಲಸವಾದರೆ, ಶುದ್ಧ ಪಡಿಸುವುದು ಇನ್ನೊಂದರ ಕೆಲಸ. ಆದಕಾರಣ ಪರಸ್ಪರ ಸಂಬಂಧವು ಎರಡಕ್ಕೂ ನಿಕಟವಾಗಿದೆ. ಆ ಸಂಬಂಧವು ನಾಲ್ಕಕ್ಕೆ ಒಂದರಂತಿದೆ.

ಹೊಟ್ಟೆಯ ಕೆಲಸವು ಆಹಾರವನ್ನು ಜೀರ್ಣಿಸಿ ಕಲಸುವುದು. ಅದೂ ಹೃದಯದಂತೆ, ಮಾಂಸಖಂಡದ, ತಂತ್ರಿನ ಚೀಲ. ಸಾಮಾನ್ಯವಾಗಿ ತಂತ್ರಿನ ಚೀಲವು ನಾಲ್ಕು ತರಹ ತಾಳಗಳನ್ನು ಹಾಕುತ್ತದೆ. ಅಂದರೆ ನಾಲ್ಕು ತೆರನ ಸಂಕುಚಿತ ಮತ್ತು ಪೂರ್ವಸ್ಥಿತಿಗೆ ಬರುವುದು, ಇವನ್ನು ಮಾಡುತ್ತದೆ. ಇವು ಗಳಲ್ಲಿ ಒಂದು ನಾಡಿಯ ಮಿಡಿತಕ್ಕೆ ಅನ್ವಯಿಸುತ್ತದೆ, ಇನ್ನೊಂದು ಉಸಿರಾಟದ ಗತಿಗೆ ಅನ್ವಯಿಸುತ್ತದೆ. ಮೂರನೆಯದು 20 ಸೆಕೆಂಡು ಗಳಿಗೊಮ್ಮೆ; ನಾಲ್ಕನೆಯದು 30 ಸೆಕೆಂಡುಗಳಿಗೊಮ್ಮೆ: ಕಡೆಯ ಎರಡು ಗತಿಗಳು ದಿಟವಾಗಿ ಹೊಟ್ಟೆಯ ಹಸಿವನ್ನು ಸೂಚಿಸುತ್ತವೆ. ಹೊಟ್ಟೆಯು ತಾಳಹಾಕುತ್ತಿದೆಯಯ್ಯಾ ಎಂದು ಹಸಿದವನು ನುಡಿದಾಗ, 20 ಮತ್ತು ಇನ್ನೂ ಮುಖ್ಯವಾಗಿ 30 ಸೆಕೆಂಡಿನ ತಾಳವನ್ನೇ ಹೊಟ್ಟೆ ಹಾಕುತ್ತಿರುವುದು.

ಹೊಟ್ಟೆಯ ತಾಳ 30 ಸೆಕೆಂಡಿಗಳಿಗೊಮ್ಮೆ ಎನ್ನಬಹುದು. 28 ದಿನಗಳಿಗೊಮ್ಮೆ ಸ್ತ್ರೀಯರು ಬಹಿಷ್ಠೆಯಾಗುತ್ತಾರೆ, ಸಾಮಾನ್ಯವಾಗಿ. ಗರ್ಭಾಂಗಗಳ ಪ್ರಕೃತಿ ಸಹಜವಾದ ತಾಳವು 28 ದಿನಗಳಿಗೊಮ್ಮೆ ಎನ್ನಬಹುದು.

ದೊಡ್ಡ ಕರುಳಂಗಳು, ತಮ್ಮಲ್ಲಿ ಕೂಡಿಕೊಂಡ ಮಲವನ್ನು 24 ಗಂಟೆಗಳಿಗೊಮ್ಮೆ ; ಅಥವಾ 12 ಗಂಟೆಗಳಿಗೊಮ್ಮೆ ; ಹಾಗೂ 48 ಅಥವಾ 72 ಗಂಟೆಗಳಿಗೊಮ್ಮೆ ವಿಸರ್ಜಿಸುವುದನ್ನು ಕಲಿತುಕೊಂಡಿರುತ್ತದೆ. ದೊಡ್ಡ ಕರುಳುಗಳು ಮತ್ತು ಮಲಾಶಯವು ಕಲಿತುಕೊಂಡ ತಾಳ ಇದು.

ಮೆದುಳಿನಲ್ಲಿ ಕೂಡ, ಇದೇ ರೀತಿಯಲ್ಲಿ ಒಂದೊಂದು ಕಡೆ ಒಂದೊಂದು ತಾಳ ಹಾಕುತ್ತಿರುವುದನ್ನು ವಿವರಿಸಿದ್ದಾರೆ. The Brain Clocks ಎಂಬ ಲೇಖನದಲ್ಲಿ ಎಂಟಕ್ಕೂ ಮಿಗಿಲಾದ ತಾಳಗಳನ್ನು ವಿಶ್ಲೇಷಿಸಿದ್ದಾರೆ.

ಅಂಗಗಳೆಲ್ಲದರ ಸುವ್ಯವಸ್ಥಿತ ಕಾರ್ಯಸಾಧನೆಗೆ, ಈ ರೀತಿ ವಿಧ ವಿಧವಾದ ತಾಳಗಳು ಅಗತ್ಯ. ಹುಟ್ಟಿದಾಗಿನಿಂದ ಚಟ್ಟ ಹತ್ತುವವರೆಗೂ ಈ ತಾಳಗಳು ಒಂದೇ ರೀತಿಯಲ್ಲಿರುತ್ತವೆಯೇ? ವ್ಯತ್ಯಾಸವೇನಾದರೂ ಇದ್ದರೆ, ಕಾಲದ ಕಲ್ಪನೆಯ ಮೇಲೆ ಆ ವ್ಯತ್ಯಾಸದ ಪ್ರಭಾವವೇನು? ಹೃದಯದ ಮಿಡಿತವನ್ನು ವಿಶ್ಲೇಷಿಸೋಣ.

ತಾಯ ಗರ್ಭದಲ್ಲಿರುವ ಮಗುವಿನ ಹೃದಯವು ನಿಮಿಷಕ್ಕೆ 140-150 ಬಾರಿ
ಆಗತಾನೇ ಹುಟ್ಟಿದ ಮಗುವಿನ ಹೃದಯವು ನಿಮಿಷಕ್ಕೆ 130-140 ಬಾರಿ
ಒಂದು ವರ್ಷದ ಮಗುವಿನ ಹೃದಯವು ನಿಮಿಷಕ್ಕೆ 115-130 ಬಾರಿ
ಎರಡು ವರ್ಷದ ಮಗುವಿನ ಹೃದಯವು ನಿಮಿಷಕ್ಕೆ 100-115 ಬಾರಿ
ಮೂರು ವರ್ಷ ತುಂಬಿದ ಮಗುವಿನ ಹೃದಯವು ನಿಮಿಷಕ್ಕೆ 95-105 ಬಾರಿ
7 ರಿಂದ 14 ವರ್ಷದ ಅಂತರದಲ್ಲಿ ಬಾಲಕ ಬಾಲಕಿಯರ ಹೃದಯವು 80-90 ಬಾರಿ 14 ರಿಂದ 21 ವರ್ಷದ ವರೆಗೆ, ಹೃದಯವು ಪ್ರತಿ ನಿಮಿಷಕ್ಕೆ 75-85 ಬಾರಿ ಮಿಡಿಯುತ್ತದೆ. ಅನಂತರ 70 ರಿಂದ 80 ರ ನಂತರ ಹೃದಯದ ಬಡಿತವು ಸ್ಥಿರವಾಗುತ್ತದೆ.

ಶೈಶವದಲ್ಲಿ 120-130 ಬಾರಿ ಹೃದಯವು ಮಿಡಿಯುತ್ತದೆ ಎಂದರೇನು? ಹೃದಯದಲ್ಲಿ ನಡೆಯುವ ಎರಡು ಘಟನೆಗಳ ಅಂತರವೇ ಕಾಲ.

ಗಡಿಯಾರದ ಕಾಲದ ದೃಷ್ಟಿಯಿಂದ ನೋಡಿದರೆ. ಶೈಶವ ಹೃದಯವು ಅತಿ ವೇಗವಾಗಿ ನಡೆಯುತ್ತಿದೆ. ಅಂದರೆ 'ಕಾಲ'ವೂ ಬಲು ರಭಸದಿಂದ ಸಾಗುತ್ತಿದೆ. ಈ ದೃಷ್ಟಿಯಿಂದ ಶೈಶವವು ಬಲು ದೀರ್ಘ ಕಾಲ ಇದ್ದಂತೆ, ಆದರೆ ಗಡಿಯಾರ ಮತ್ತು ಪಂಚಾಂಗಗಳ ದೃಷ್ಟಿಯಿಂದ ಶೈಶವವು ಆಯುಃಪ್ರಮಾಣದಲ್ಲಿ ತುಂಬಾ ಅಲ್ಪಭಾಗ.

ಆಯುರ್ವೇದದಲ್ಲಿ ನಾಡಿಯ ಮಿಡಿತದಿಂದ, ಅವುಗಳ ಸಂಖ್ಯೆಯ ಮೊತ್ತದಿಂದ, ಆಯುಸ್ಸಿನ ಪ್ರಮಾಣವನ್ನು ಅಳೆಯುವುದುಂಟು. ವೈಜ್ಞಾನಿಕವಾಗಿ ಇದಕ್ಕೆ ಬೆಂಬಲವಿದೆ. ಈಗ ಭೌತಶಾಸ್ತ್ರದ ಪ್ರಕಾರ ಆಯುಃಪ್ರಮಾಣವನ್ನು ನಾಡಿಯ ಬಡಿತದಿಂದ ನಿರ್ಧರಿಸೋಣ. ಇದೂ 'ರೇ' ರಾಜ್ಯದ ಊಹೆಯೇ. ಈ ಹಂತದಲ್ಲಿ ಯಾವ ಮನುಷ್ಯನೂ ಇದನ್ನು ಸಾಧಿಸಲಾರ. ಆದರೂ:

ಬೆಳಕಿನ ವೇಗದ ಶತಾಂಶ 90 ರಷ್ಟು ವೇಗದಲ್ಲಿ ಮಾನವ ಜಿಗಿಸಲು ಸಾಧ್ಯವಾದರೆ ಆತನ ಹೃದಯವು ನಿಮಿಷಕ್ಕೆ 36 ಬಾರಿ ಮಾತ್ರ ಮಿಡಿಯುತ್ತದೆ. ಅದೇ ವೇಗದಲ್ಲಿ ಅವನು ಒಂದು ವರ್ಷ ಚಲಿಸಿದರೆ, ನಂತರ ಹಿಂತಿರುಗಿ ಧರೆಗೆ ಇಳಿದರೆ, ಇಲ್ಲಿ ಎರಡು ವರ್ಷ ಮುಗಿದು ಹೋಗಿರುತ್ತದೆ! ಅಂದರೆ ಆ ವೇಗದಲ್ಲಿ ಚಲಿಸುತ್ತಿರುವವನನ್ನು 'ಶತಮಾನಂ-ಭವತು' ಎಂದು ಆಶೀರ್ವಾದ ಮಾಡುವ ಬದಲು 'ದ್ವೇ ಶತಮಾನಂ ಭವತು' ಎನ್ನಬೇಕು!! ಆಯುಃ ಪ್ರಮಾಣವನ್ನು ಹೆಚ್ಚಿಸಲು ಎಷ್ಟು ಸುಲಭ; ಸಾಧ್ಯವಾಗುವುದಾದರೆ! ಕಾಲದ ಗತಿಯ ದೃಷ್ಟಿಯಿಂದ ಈ ನಿದರ್ಶನಗಳನ್ನೂ ವಿಶ್ಲೇಷಿಸೋಣ.

ಶೈಶವದಲ್ಲಿ ಹೃದಯವು 120-130 ಬಾರಿ ಮಿಡಿಯುತ್ತದೆ. ಅಂದರೆ ಕಾಲವು ರಭಸದಿಂದ ಪ್ರವಹಿಸುತ್ತದೆ. ಏಕೆಂದರೆ ಘಟನೆಗಳು ಅಷ್ಟು ಬೇಗ ಬೇಗ ನಡೆಯುತ್ತಿವೆ. ವೇಗದ ಫೋಟಾನ್ ರಾಕೆಟ್ಟಿನಲ್ಲಿ, ಬೆಳಕಿನ ವೇಗದ ಶತಾಂಶ 90 ರಷ್ಟು ವೇಗದಲ್ಲಿ ಜಿಗಿದಾಗ ಹೃದಯವು 36 ಬಾರಿ ಪ್ರತಿ ನಿಮಿಷಕ್ಕೆ ಮಿಡಿಯುತ್ತದೆ. ಅಂದರೆ ಘಟನೆಗಳು ಮಂದಗತಿಯಲ್ಲಿ ನಡೆಯುತ್ತಿವೆ. ಕಾಲದ ಗತಿಯೂ ಮಂದವಾಯಿತು. ಶೈಶವದಲ್ಲಿ 'ಕಾಲ'ವು ಜೂಜು ಕುದುರೆಯಂತೆ ಓಡಿದರೆ, ಫೋಟಾನ್ ರಾಕೆಟ್ಟಿನಲ್ಲಿ ಜಟಕಾ ಕುದುರೆಯ ತರಹ ಕುಂಟುತ್ತದೆ!

ಹೃದಯದ ದೃಷ್ಟಿಯಿಂದ 'ಕಾಲ'ವು ಈ ರೀತಿ ನಡೆದುಕೊಂಡರೆ, ಮಿಕ್ಕ ಅಂಗಗಳು ಅದೇ ರೀತಿಯಲ್ಲಿ ಅದೇ ಪ್ರಮಾಣದಲ್ಲಿ ನಡೆದುಕೊಳ್ಳುವುವೇ? ಇಲ್ಲ. ಏಕೆಂದರೆ ವಿಧ ವಿಧ ಅಂಗಗಳು ಬೇರೆ ಬೇರೆ ಗತಿಯಲ್ಲಿ ಮುಪ್ಪಾಗುತ್ತವೆ. ಇದನ್ನ Clonal Ageing ಎಂದು ಕರೆಯುತ್ತಾರೆ. Ageing ಅಥವಾ ಮುಪ್ಪಾಗುವುದು ಎಂದರೇನು? ಈ ಅಂಗಗಳು ನಿಯಮಿತ ಕಾಲಾವಧಿಯಲ್ಲಿ ಜೀವಂತವಾಗಿರುತ್ತವೆ. ಅನಂತರ ಜೀವಂತವಾಗಿರಲು ಸಾಧ್ಯವಿಲ್ಲ. ಕೀಲಿ ಕೊಟ್ಟ ಗಡಿಯಾರವು 36 ಗಂಟೆಗಳು ನಡೆದು ನಂತರ ನಿಂತು ಹೋಗುವುದಿಲ್ಲವೇ? ಹಾಗೆಯೇ. ಆದರೆ ಒಂದು ವ್ಯತ್ಯಾಸವಿದೆ. ಗಡಿಯಾರಕ್ಕೆ ಪುನಃ ಕೀಲಿ ಕೊಡಬಹುದು. ಪುನಃ ನಡೆಯುತ್ತದೆ. ಈ ಅಂಗಗಳಿಗೆ ಸುಲಭವಾಗಿ ಕೀಲಿ ಕೊಟ್ಟು ಪುನಃ ನಡೆಯುವಂತೆ ಮುಪ್ಪಾದ ಮೇಲೆ ಮಾಡುವುದು ಸಾಧ್ಯವಿಲ್ಲ. ಕೆಟ್ಟು ಹೋದ ಅಂಗಗಳನ್ನು ತೆಗೆದು ಹಾಕಿ ಯುವಕ ಅಂಗಗಳನ್ನು ಜೋಡಿಸಲು ಕೆಲವೊಮ್ಮೆ ಸಾಧ್ಯ.

ಒಂದೇ ಸೆಲ್ಲಿನಿಂದ ಜೀವವು ಪ್ರಾರಂಭಿಸಿದರೂ ಆದರಿಂದ ಕಾಲಾನು ಕಾಲದಲ್ಲಿ ಅಭಿವೃದ್ಧಿ ಹೊಂದುವ ವಿಧ ವಿಧ ಅಂಗಗಳು ಭಿನ್ನ ಭಿನ್ನ ರೀತಿಯಲ್ಲಿ ಮುಪ್ಪಾಗುವುದು ಆಶ್ಚರ್ಯವೆನಿಸಬಹುದು. ಆದರೆ ಅಣೆಯಾದ ಆ ಒಂದು ಸೆಲ್ಲಿನಲ್ಲಿ ಪುಟ್ಟದೊಂದು ದೇಹವೇ ಇರುತ್ತದೆ. ಮುಂದೆ ಕೈಕಾಲುಗಳಾಗುವ ಕಣವೂ ಸೆಲ್ಲಿನಲ್ಲಿದೆ. ಇತರ ಕಣಗಳಂತೆ ಅದು ಕಂಡರೂ ಅದಕ್ಕೆ ಸ್ಮರಣೆ ಇದೆ. ಸ್ಮರಣೆಯು D.NA. ಎಂಬ ರಾಸಾಯನಿಕ ವಸ್ತುವಿನಲ್ಲಿ ಅಚ್ಚಾಗಿರುತ್ತದೆ ಈ ಕಾರಣದಿಂದ ಆ ಪುಟಾಣಿ ಕಣವು, ತನ್ನ ಭವಿಷ್ಯದ ಗುರಿಯನ್ನು ತಿಳಿದಿರುತ್ತದೆ. ಮತ್ತು ಸಕಾಲದಲ್ಲಿ ಸಾಧಿಸಿಯೇ ಬಿಡುತ್ತದೆ ಇಂತಹ ಸಣ್ಣ ಪುಟ್ಟ ಕಣಗಳಲ್ಲಿ, ಈ ತೆರನ ಅಪಾರ ವ್ಯತ್ಯಾಸವಿರುತ್ತದೆ. ಒಂದೊಂದು ಕಣಕ್ಕೂ ತನ್ನ ಬಾಳ ಗುರಿಯ ಸ್ಮರಣೆ ಇರುತ್ತದೆ. ಪ್ರತಿಯೊಂದು ಕಣವು ಹೊರ ನೋಟಕ್ಕೆ ಒಂದೇ ಇದ್ದಂತೆ ಕಂಡರೂ, ಅಭಿವೃದ್ಧಿಗೊಳ್ಳುವಾಗ, ಪ್ರೌಢತೆಯನ್ನು ಪಡೆಯುವಾಗ, ವಿಪರಿಮಿತ ವ್ಯತ್ಯಾಸವನ್ನು ಕಾಣಿಸುತ್ತದೆ. ಕೈಕಾಲುಗಳೇನ್ನೋ ಒಂದರಂತೆನ್ನೊಂದು ಸ್ಥೂಲವಾಗಿ ಕಾಣಿಸಬಹುದು. ಆದರೆ ಕಾಲಿಗೂ ಕಣ್ಣಿಗೂ ಆದೆಷ್ಟು ವ್ಯತ್ಯಾಸ?

ಕೈಯಿಗೂ ಕೆನ್ನೆಗೂ ಎಷ್ಟು ವ್ಯತ್ಯಾಸ? ಮೂಗಿಗೂ ಹೊಟ್ಟೆಗೂ ಅದೆಷ್ಟು ವ್ಯತ್ಯಾಸ? ಇವೆಲ್ಲವೂ ಅದರದರ ಬಾಳಗುರಿಯ ಸ್ಮರಣೆಯಿರುವುದರಿಂದಲೇ!

ಹೀಗಾಗಿ ಪ್ರತಿಯೊಂದು ಅಂಗವೂ ತನ್ನದೇ ಆದ ಬಾಳನ್ನು ನಡೆಸುತ್ತದೆ, ತನ್ನ ಹಣೆಯ ಬರಹದ ಪ್ರಕಾರ ಅನ್ನಲೂ ಬಹುದು. ಆದರೆ ಇವೆಲ್ಲಾ ಸಹಸ್ರಾರು ಅಂಗಗಳು, ತಮ್ಮ ತಮ್ಮ ಅಭಿವೃದ್ಧಿಯಲ್ಲಿ ಸ್ವತಂತ್ರ ರೆಂದು ಕಂಡರೂ, ಒಟ್ಟುಗೂಡಿ, 'ನಾವು' ಎಂದು ಸುಮಾರು ಕಾಲ ಅಂದು ಕೊಳ್ಳುವ, ನಮ್ಮ ದೇಹವನ್ನು ವಿಚಕ್ಷಣೆಯಿಂದ ನಡೆಸುತ್ತವೆ, ಸ್ವಾತಂತ್ರ್ಯ ವನ್ನು ಬಿಟ್ಟುಕೊಟ್ಟು ಸಮೂಹದ ಒಳಿತಿಗಾಗಿ ನಡೆಸುತ್ತವೆ.

ಒಂದು ಅಖಂಡ ದೇಹ ಎಂದು ನಾವಂದುಕೊಂಡರೂ, ಅಲ್ಲಿ ಸಮೂಹಿಸಿರುವ ಹಲವಾರು ಅಂಗಗಳು ವಿವಿಧ ರೀತಿಯಲ್ಲಿ ಮುಪ್ಪಾಗುತ್ತವೆ. ಎಂದರೆ ವಿಧ ವಿಧ ರೀತಿಯಲ್ಲಿ ಅವವುಗಳ ಪ್ರತ್ಯೇಕ ಕಾಲವು ಪ್ರವಹಿಸುತ್ತದೆ. ಹೀಗಾಗುವುದರಿಂದಲೇ ಒಬ್ಬನ ತಲೆಕೂದಲು ನರೆತರೂ ಅವ ಮೂವತ್ತರ ಹೋರಿ ಪ್ರಾಯದಲ್ಲಿರುತ್ತಾನೆ. ಇನ್ನು ಕೆಲವರ ಕೂದಲು ಕಪ್ಪಾಗಿಯೂ ಹೊಳವಾಗಿಯೂ ಇದ್ದರೂ ಆತ ಎಪ್ಪತ್ತರ ಮುಪ್ಪನ್ನಪ್ಪಿರುತ್ತಾನೆ. ಅದೇ ರೀತಿಯಲ್ಲಿ ಜೀರ್ಣಕಾಂಗಗಳು ಸುಪುಷ್ಟವಾಗಿದ್ದರೂ ಹೃದಯ ಮತ್ತು ರಕ್ತ ನಾಳಗಳು ಮುಪ್ಪಾಗಬಹುದು. ಹೃದಯವು ಗಟ್ಟಿ ಗಡತವಾಗಿದ್ದರೂ ಅರಳು ಮರಳು ಐವತ್ತಕ್ಕೇ ಬಡಿಯಬಹುದು. ಇದೆಲ್ಲಾ Clonal Agenig ಇನ ಪರಿಣಾಮ, ಇದರ ಮುಖ್ಯ ಅರ್ಥವೇನೆಂದರೆ, ಒಂದೊಂದು ಅಂಗಕ್ಕೂ ಅದರದೇ ಆದ ಕಾಲಗತಿ ಇರುತ್ತದೆ ಎಂಬುದು. ಅಂದರೆ Space ನಲ್ಲಿ ಈ ಅಂಗಗಳು ವಿಧ ವಿಧ ರೀತಿಯಲ್ಲಿ ಅಭಿವೃದ್ಧಿಸುತ್ತವೆ. ತತ್ಕಾರಣ ಕಾಲದ ಗತಿಯ ದೃಷ್ಟಿಯಿಂದಲೂ ಭಿನ್ನತೆಗಳಿವೆ.

* * *

ಜಲಸ್ತಂಬನ, ಜೀವಂತ ಸಮಾಧಿ ಇತ್ಯಾದಿ ಪವಾಡಗಳಂತೆ ಕಾಣುವ ಪ್ರದರ್ಶನಗಳನ್ನು ಯೋಗಿಗಳು ನಡೆಸುವುದನ್ನು ಕಣ್ಣಾರೆ ಕಾಣಬಹುದು, ಅರ್ಧ ದಿನ ಅಥವಾ ಪೂರ್ತಿ ಒಂದು ದಿನ ಅಗೆದ ನೆಲದಲ್ಲಿ ಹೂಳಿಸಿಕೊಂಡು, ನಂತರ ಎದ್ದು ಜೀವಂತ ಬರುವುದು ಪವಾಡವೇ! ಹೊಗೆ ತುಂಬಿದ ಬಚ್ಚಲ ಮನೆಯಲ್ಲಿ ಹತ್ತು ನಿಮಿಷ ಇದ್ದರೆ ಉಸಿರು ಕಟ್ಟಿದಂತಾಗುತ್ತದೆ. ಕೆಮ್ಮುತ್ತ

ಹೊರಕ್ಕೆ ಓಡಿ ಬರುತ್ತೇವೆ. ಅಂತಹದರಲ್ಲಿ ದಿನವೆಲ್ಲಾ ಉಸಿರು ಕಟ್ಟಿಕೊಂಡು ನೆಲದ ಗೋರಿಯಲ್ಲಿರುವುದು ಆಶ್ಚರ್ಯಕರ. ನೀರಿನಲ್ಲಿ ಮುಳುಗಿ ನಡಸುವ ಇಂತಹ ಪ್ರದರ್ಶನವನ್ನು ಜಲಸ್ಥಂಬನ ಎನ್ನುತ್ತಾರೆ. ಮನುಷ್ಯರು ಸಮಾಧಿ ಸ್ಥಿತಿಯಲ್ಲಿದ್ದಾಗ ಈ ಪವಾಡಗಳನ್ನು ನಡಸುತ್ತಾರೆ.

ಸಮಾಧಿ ಸ್ಥಿತಿಯಲ್ಲಿರುವ ಇಂತಹ ಯೋಗಿಗಳನ್ನು ವೈಜ್ಞಾನಿಕವಾಗಿ ಪರೀಕ್ಷಿಸಿದ್ದಾರೆ. ಅವರ ಹೃದಯವು ಕುಟ ಕುಟ ಅಂತ ಬಹಳ ಅಲ್ಪ ಪ್ರಮಾಣದಲ್ಲಿ ಬಡಿಯುತ್ತಿರುತ್ತದೆ. ಎಲೆಕ್ಟ್ರೋ ಕಾರ್ಡಿಯೋಗ್ರಾಮಿನಲ್ಲಿ (Electro-Cardiogram) ಹೃದಯಂದ ಕಾರ್ಯವನ್ನು ಸಾಕಷ್ಟು ನಿಖರ ವಾಗಿ ಪರೀಕ್ಷಿಸಬಹುದು. ಅದರ ಪ್ರಕಾರ ಸಮಾಧಿ ಸ್ಥಿತಿಯಲ್ಲಿರುವ ಯೋಗಿ ಗಳ ಹೃದಯವು Tone ಅನ್ನು ತೋರಿಸುತ್ತದೆಯೋ ಹೊರತು, ಮಿಡಿತಗಳನ್ನು ಕಾಣಿಸುವುದಿಲ್ಲ, ಎಲೆಕ್ಟ್ರೋ ಕಾರ್ಡಿಯೋಗ್ರಾಮಿನಲ್ಲಿ. ಅಂದರೆ ಹೃದಯದ ಮಿಡಿತವು ಬಹಳಷ್ಟು ಕಡಿಮೆಯಾಗಿದೆ ಎಂದು ತಿಳಿಯುತ್ತದೆ.

ಸಮಾಧಿಯ ಕಾಲದಲ್ಲಿ ಯೋಗಿಗೆ 'ಕಾಲ'ವು ಅತಿ ಮಂದವಾಗಿ ಪ್ರವಹಿಸುತ್ತದೆ ಎನ್ನಬಹುದು. ಏಕೆಂದರೆ, ಹೃದಯಂದ ಸಹಜವಾದ ಎರಡು ಮಿಡಿತಗಳ ಅಂತರದ ಕಾಲವನ್ನು ನಾಡೀಕಾಲ ಎನ್ನಬಹುದು. ಹತ್ತಿಪ್ಪತ್ತು ನಾಡೀ ಕಾಲಗಳ ಅಂತರದಲ್ಲಿ ಸಮಾಧಿಸ್ಥ ಯೋಗಿಯ ಹೃದಯವು ಒಮ್ಮೆ ಬಡಿ ದಷ್ಟು ಮಾತ್ರ ಶ್ರಮಿಸಿರುತ್ತದೆ. ಅಂದರೆ ಸಮಾಧಿಸ್ಥ ಯೋಗಿಯು 'ಕಾಲ'ದ ಗತಿಯನ್ನು ಬಹಳಷ್ಟು ನಿಧಾನಿಸಿದ್ದಾನೆ.

* * *

ಹಿಮ ತುಂಬಿರುವ ಪೋಲಾರ್ ಪ್ರದೇಶಗಳಲ್ಲಿ ಆರು ತಿಂಗಳು ಕತ್ತಲೆ ಮತ್ತು ಅಸಾಧ್ಯ ಛಳಿ. ಇನ್ನಾರು ತಿಂಗಳು ಸದಾ ಬೆಳಕು, ಅಷ್ಟು ಛಳಿಯೂ ಇಲ್ಲ. ಅಲ್ಲಿ ವಾಸಿಸುವ ಬಿಳಿ ಕರಡಿಗಳು ಕತ್ತಲಾಗುವ ಆರು ತಿಂಗಳುಗಳು ಒಂದು ರೀತಿಯ "ಸಮಾಧಿ"ಯನ್ನು ಸಾಧಿಸುತ್ತವೆ. Hibernation ಎನ್ನು ತ್ತಾರೆ, ಈ ಸಮಾಧಿ ಸ್ಥಿತಿಯನ್ನು, ಮಂಜಿನಗಡ್ಡೆಗಳ ಗುಹೆಯಲ್ಲಿ ಸಂಪೂರ್ಣ ಮುದುಡಿಕೊಂಡು, ಬಿದ್ದಿರುತ್ತವೆ. ಅವುಗಳ ಹೃದಯದ ಮಿಡಿತವು ಆಗ ಬಹಳಷ್ಟು ನಿಧಾನವಾಗಿರುತ್ತದೆ. ತನ್ನ ದೇಹದಲ್ಲಿ ಶೇಖರಿಸಲ್ಪಟ್ಟ ಕೊಬ್ಬನ್ನೇ ಜೀರ್ಣಿಸಿಕೊಂಡು, ಬದುಕುವುದಕ್ಕೆ ಅತ್ಯಗತ್ಯವಾದಷ್ಟು ಮಾತ್ರ ಶಕ್ತಿಯನ್ನು

ಬಳಸಬೇಕು. ಹಾಗಾಗಿ ದೇಹದ ಎಲ್ಲಾ ಕಾರ್ಯಗಳು ಬಹಳ ನಿಧಾನವಾಗುತ್ತವೆ. ತತ್ ಪ್ರಕಾರ ಹೃದಯವೂ ಬಲು ಮಂದವಾಗುತ್ತದೆ. ಅಂದರೆ 'ಕಾಲ'ದ ದೃಷ್ಟಿಯಿಂದ ನೋಡಿದರೆ ಹೈಬರ್‌ನೇಷನ್ ಅವಧಿಯಲ್ಲಿ 'ಕಾಲ'ವು ಬಲು ನಿಧಾನವಾಗಿ ಪ್ರವಹಿಸುತ್ತಿದೆ ಎನ್ನಬೇಕು.

ಪೋಲಾರ್ ಕರಡಿಯಂತೆ, ಮುಳ್ಳುಹಂದಿಗಳೂ, ಕೆಲವು ತರನ ಬಾವಲಿಗಳೂ ಹೈಬರ್‌ನೇಷನ್ ಅನ್ನು ಅನುಸರಿಸುತ್ತವೆ. ಇವೆಲ್ಲವೂ 'ಕಾಲ'ದ ಗತಿಯನ್ನು ನಿಧಾನಿಸುವ ಯುಕ್ತಿಯನ್ನು ಕಲಿತಿವೆ ಎನ್ನಬೇಕು !

* * *

ಮನುಷ್ಯರಿಗೆ ತಗುಲುವ ಕೆಲವು ಬೇನೆಗಳೂ 'ಕಾಲ'ದ ಗತಿಯನ್ನು ನಿಧಾನಿಸುತ್ತವೆ, ಕತ್ತಿನ ಮುಂದೆ ಇಕ್ಕೆಡೆಗಳಲ್ಲೂ ಹರಡಿರುವ ಥೈರಾಯ್ಡ್ ಗ್ರಂಥಿಗಳು, ಕೆಲವು ಕಾರಣಗಳಿಂದ ಅಸಮರ್ಥವಾಗುತ್ತವೆ. ಆಗ ಅವುಗಳಿಂದ ಸೂಸುವ ಥೈರಾಕ್ಸಿನ್ ರಸವು ಕಡಿಮೆಯಾಗುತ್ತದೆ. ಥೈರಾಕ್ಸಿನ್ ರಸವು ಆಹಾರ ಪಚನಕ್ಕೆ ಮತ್ತು ಹೃದಯಕ್ಕೆ ಸಹಜ ಮಿಡಿತಕ್ಕೆ ಅತ್ಯಗತ್ಯ. ಆದ ಕಾರಣ ಹೈಪೊಥೈರಾಯ್ಡ್‌ಇಸಂ ಎನ್ನುವ ಬೇನೆಯಲ್ಲಿ ನಾಡಿಯ ಮಿಡಿತವು 40–ಅಥವಾ 50ರಷ್ಟಿರುತ್ತದೆ, ಪ್ರತಿ ನಿಮಿಷಕ್ಕೂ. ಇಂತಹವರಲ್ಲಿಯೂ 'ಕಾಲ'ವು ನಿಧಾನವಾಗಿ ನಡೆಯುತ್ತದೆ ಎನ್ನಬಹುದು.

* * *

### ಆ. 'ಕಾಲ'ದ ಗತಿಯನ್ನು ದೇಹದಲ್ಲಿ ಅವಸರಪಡಿಸಲು ಸಾಧ್ಯವೇ ?

ಈ ತನಕ ಕಾಲದ ಗತಿಯನ್ನು ನಿಧಾನಿಸುವ ಕೆಲವು ನಿದರ್ಶನಗಳನ್ನು ತಿಳಿದುಕೊಂಡೆವು. 'ಕಾಲ'ದ ಗತಿಯನ್ನು ಶೀಘ್ರಗೊಳಿಸುವ ಪರಿಸ್ಥಿತಿಗಳಿವೆಯೇ? ನೋಡೋಣ.

ಜ್ವರವು ಉಂಟಾದಾಗ, ಕಾರಣವು ಯಾವುದೇ ಇರಲಿ, ಆಗ ನಾಡಿಯ ಬಡಿತವು ಹೆಚ್ಚಾಗುತ್ತದೆ. ಜ್ವರಕ್ಕೆ ಕಾರಣವು, ದಢಾರ, ಸೀತಾಳಿ ಸಿಡುಬು ಅಥವಾ ಸಿಡುಬು ಇತ್ಯಾದಿ ವೈರಸ್ಸುಗಳಿರಬಹುದು : ಸರ್ವವ್ಯಾಪಿಯಾದ ಬ್ಯಾಕ್ಟೀರಿಯಾಗಳಿರಬಹುದು ; ಅಥವಾ ಅಮೀಬಾ, ಮಲೇರಿಯಾ ಇಂತಹ

ಬೇನೆಗಳಿಗೆ ಕಾರಣವಾದ ಪ್ರೊಟೋಜೋಆಗಳಿರಬಹುದು : ಯಾವುದೇ ಆದರೂ ಜ್ವರವು ಬರುತ್ತದೆ. ಜ್ವರದ ಬಿಸಿಬಿಸಿಯಾದ ಪರಿಸ್ಥಿತಿಯಲ್ಲಿ ದೇಹದ ರಕ್ಷಣಾವ್ಯವಸ್ಥೆಯು ಶತ್ರುಗಳನ್ನು ಬೇಯಿಸಿ ಸಂಹರಿಸಲು ಸಂಲಭ. ಶತ್ರುಗಳ ಸಂಖ್ಯೆಗೆ ಅನುಗುಣವಾಗಿ ಜ್ವರದ ಏರುವಿಕೆಯೂ ಇಳಿಯುವಿಕೆಯೂ ಇರುತ್ತದೆ.

ಜ್ವರವು ಏರಿದಾಗ, ತತ್ಕಾರಣ ನಾಡಿಯು ಬಲುವೇಗವಾದಾಗ, 'ಕಾಲ'ದಗತಿಯೂ ಅವಸರಿಸಿದಂತೆ. ಎರಡು ಘಟನೆಗಳ ಅಂತರವೇ ಕಾಲ. ಎರಡು ನಾಡಿ ಬಡಿತಗಳ ಅಂತರವೇ ಕಾಲ. ನಾಡಿ ಬಡಿತವು ವೇಗವಾದಾಗ, ಕಾಲ'ವೂ ಬೇಗ ಬೇಗ ಹರಿದಂತೆಯೇ ಸರಿ.

* * *

ಥೈರಾಯ್ಡ್ ಗ್ರಂಥಿಗಳು ಕೆಲವು ಕಾರಣಗಳಿಂದ ಸಾಕಷ್ಟು ಥೈರಾಕ್ಸಿನ್ ಅನ್ನು ಉತ್ಪತ್ತಿಸುವುದಿಲ್ಲ ಅಂತಹ ಹೈಪೊ ಥೈರಾಯ್ಡ್ ಸ್ಥಿತಿಗಳಲ್ಲಿ, ನಾಡಿಯ ಬಡಿತವು ನಿಧಾನವಾಗುತ್ತದೆ, ಎಂದು ಹೇಳಿದೆವು. ಇನ್ನು ಕೆಲವು ಕಾರಣಗಳಿಂದ ಥೈರಾಕ್ಸಿನ್ ರಸವು ಅಧಿಕ ಪ್ರಮಾಣದಲ್ಲಿ ಉತ್ಪತ್ತಿಯಾಗುತ್ತದೆ. ಹೈಪರ್ ಥೈರಾಯ್ಡಿಸಂ ಎನ್ನುತ್ತಾರೆ ಇಂತಹ ಬೇನೆಗಳನ್ನು. ಆಗ ನಾಡಿಯು ಬಲು ವೇಗವಾಗಿ ಮಿಡಿಯುತ್ತದೆ. ನಾಡಿಯ ಕಾಲವು ಕಡಿಮೆಯಾದ ಹಾಗೆಲ್ಲ, 'ಕಾಲ'ದ ಗತಿಯು ಶೀಘ್ರವಾದಂತೆಯೇ, 'ಕಾಲ'ದ ಗತಿಯು ಅವಸರಿಸಿದಂತೆಯೇ ಹೌದು.

* * *

ಶೈಶವ ಮತ್ತು ಎಳೆಯ ಬಾಲ್ಯದಲ್ಲಿ ನಾಡಿಯು ವೇಗದಿಂದ ಮಿಡಿಯುತ್ತದೆ. ಆರೋಗ್ಯ ಸ್ಥಿತಿಯಲ್ಲೂ ಕೂಡ ಎಂಬುದನ್ನು ಆಗಲೇ ತಿಳಿದೆವು. ಶೈಶವ ಮತ್ತು ಎಳೆಯ ಬಾಲ್ಯದಲ್ಲಿಯೂ 'ಕಾಲ'ವು ಅತಿ ರಭಸದಿಂದ ಸಾಗುತ್ತದೆ ಎನ್ನಬಹುದು.

ದೇಹವು ಅಚ್ಚುಕಟ್ಟಾದ ಆರೋಗ್ಯ ಸ್ಥಿತಿಯಲ್ಲಿದ್ದರೂ ಮನಸ್ಸಿನಲ್ಲಿ ಆತಂಕವು ಹೆಚ್ಚಾದರೆ ಅಥವಾ ಭಯವು ಉಗ್ರವಾಗಿ ಮೂಡಿದರೆ, ಆಗಲೂ ಹೃದಯವು ಡಬ ಡಬ ಎಂದು ಹೊಡೆದುಕೊಳ್ಳುತ್ತದೆ. ಇಂತಹ ಸ್ಥಿತಿಗಳಲ್ಲಿಯೂ

'ಕಾಲ'ವು ತ್ವರಿತವಾಗಿ ಸಾಗಿದಂತೆಯೇ ಸರಿ. ಆದರೆ ವ್ಯಕ್ತಿಯ ಮನಸ್ಸಿನಲ್ಲಿ ಆ ಭಾವನೆಯು ಬರುವುದಿಲ್ಲ. ಇದರ ವಿವರಗಳನ್ನು 'ಮನಸ್ಸು ಮತ್ತು ಕಾಲ' ಎಂಬ ಮುಂದಿನ ಅಧ್ಯಾಯದಲ್ಲಿ ಪರಿಶೀಲಿಸೋಣ.

ದೇಹವು ಆರೋಗ್ಯವಾಗಿದ್ದರೂ, ಕೆಲವು ಮಾದಕ ಪದಾರ್ಥಗಳನ್ನು ಅತಿಯಾಗಿ ಸೇವಿಸಿದರೆ, ಮನಸ್ಸು ಅಡ್ಡಾದಿಡ್ಡಿಯಾಗುತ್ತದೆ. ಅಂತಹವನ ನಡಿಗೆಯೂ ಅಡ್ಡಾದಿಡ್ಡಿಯಾಗುತ್ತದೆ. ಅವನ ಹೃದಯದ ಬಡಿತವೂ ಹೆಚ್ಚಾಗುತ್ತದೆ. ಇಂತಹ ಪರಿಸ್ಥಿತಿಯಲ್ಲಿ 'ಕಾಲ'ವು ತ್ವರಿತವಾಗಿ ನಡೆಯುತ್ತದೆ. ಆದರೆ ಆ ವ್ಯಕ್ತಿಯ ಮನಸ್ಸಿನಲ್ಲಿ ಆ ಭಾವನೆಯು ಬರುವುದಿಲ್ಲ. ಇದರ ವಿವರಗಳನ್ನೂ ಮುಂದಿನ ಅಧ್ಯಾಯದಲ್ಲಿ ಪರಿಶೀಲಿಸುವ.

## ಆ. ಕಾಲವು ದೇಹದಲ್ಲಿ ಸ್ಥಬ್ಧವಾಗುವುದೇ !

ದೇಹದ ದೃಷ್ಟಿಯಿಂದ ನೋಡಿದಾಗ, 'ಕಾಲ' ವು ನಿಧಾನವಾಗುವ ಮತ್ತು ತ್ವರಿತಗೊಳ್ಳುವ ಪರಿಸ್ಥಿತಿಗಳನ್ನು ಪರಿಶೀಲಿಸಿದೆವು. ಕಾಲವು ನಿಂತು ಹೋಗಲು ಸಾಧ್ಯವೇ ? ಸ್ಥಬ್ಧವಾಗುತ್ತದೆಯೇ ? ಇಡೀ ದೇಹದಲ್ಲಿ ಯಾವ ಘಟನೆಗಳೂ ಆಗದೆ ಇದ್ದರೆ, ಅಂದರೆ ಸತ್ತಾಗ ಅಥವಾ ಕಾಲವಾದಾಗ, 'ಕಾಲ' ವು ನಿಂತುಹೋದಂತೆಯೇ ! ಇದರ ಗೊಡವೆಯು ಅಸಗತ್ಯ, ಸದ್ಯಕ್ಕೆ.

ಆದರೆ ದೇಹದಲ್ಲಿನ ಹಲವಾರು ಅಂಗಗಳು, ಭಿನ್ನ ಭಿನ್ನವಾಗಿ, ಸ್ವತಂತ್ರ ವಾಗಿ ನಡೆಯುತ್ತವೆ ಎಂಬುದನ್ನು ತಿಳಿದೆವು. ಇವುಗಳಲ್ಲಿ ಒಂದನ್ನು ಕುರಿತು ವಿಶ್ಲೇಷಿಸೋಣ.

ಮೀಸೆ, ಗಡ್ಡ ಇತ್ಯಾದಿಗಳು ಗಂಡಸರ ಲಕ್ಷಣ. ಪ್ರಾಯವು ಹದಿನಾರು ಹದಿನೆಂಟು ಆದಾಗ ಇವು ಪ್ರತ್ಯಕ್ಷವಾಗುತ್ತವೆ. ಬೆಳೆಯಲಾರಂಭಿಸುತ್ತವೆ ಮೀಸೆ ಮತ್ತು ಗಡ್ಡಗಳು ಚರ್ಮದ ಒಂದು ಪದರದಿಂದ ಮೂಡುತ್ತವೆ. ಗಂಡು ಮಗುವು ಹುಟ್ಟಿದಾಗಲೇ ಮೀಸೆ ಗಡ್ಡಗಳ ಬೀಜಗಳು ಅಥವಾ ಸಂಳಿ ಗಳು ಚರ್ಮದ ಪದರದಲ್ಲಿ ಅವ್ಯಕ್ತವಾಗಿರುತ್ತವೆ. ಪೌಗಂಡ ಪ್ರಾಯವು ಮೂಡಿದಾಗ, ಲೈಂಗಿಕ ಹಾರ್ಮೋನುಗಳು ಅಧಿಕವಾಗುತ್ತವೆ, ದೇಹದಲ್ಲಿ ಹರಡುತ್ತವೆ. ಈ ಹಾರ್ಮೋನುಗಳಿಂದ, ಮೀಸೆಯ ಬೀಜಗಳಿಗೆ ಗೊಬ್ಬರ

ಹಾಕಿದಂತಾಗಿ ಮೀಸೆಯು ಬೆಳೆಯುತ್ತದೆ. ಹೀಗಾದಾಗ ಮೀಸೆಯ ಬೀಜಗಳು ತಮಗೆ ವಿಧಿಸಲ್ಪಟ್ಟ ಬಾಳಗುರಿಯನ್ನು ಸಾಧಿಸಿದಂತೆ.

ಹುಟ್ಟಿದ ಗಂಡು ಮಗುವಿನ ಚರ್ಮದ ಪದರದಲ್ಲಿ ಮೀಸೆಯ ಬೀಜಗಳು ಇದ್ದೇ ಇರುತ್ತವೆ. ಹೆಣ್ಣು ಮಗುವಿನ ತುಟಿಯ ಚರ್ಮದ ಪದರದಲ್ಲಿ ಸಾಮಾನ್ಯವಾಗಿ ಇರುವುದಿಲ್ಲ. ಮೀಸೆಯ ಬೀಜಗಳು ಗಂಡು ಮಗುವಿನ ತುಟಿಯ ಚರ್ಮದ ಪದರವೊಂದರಲ್ಲಿ ಹದಿನಾರು, ಹದಿನೆಂಟು ವರ್ಷಗಳು, ಸಮಾಧಿ ಸ್ಥಿತಿಯಲ್ಲಿದ್ದುವು ಎಂದರೆ ತಪ್ಪಲ್ಲ. ಸರಿಯಾದ ಗೊಬ್ಬರ ಲೈಂಗಿಕ ಹಾರ್ಮೋನುಗಳ ರೂಪದಲ್ಲಿ ಬಿತ್ತು. ಅವು ಮೊಳಕೆ ಮೂಡಿ ಹೊರವಾಗಿ ಬೆಳೆದವು. ಆತನಕ, ಮೀಸೆಯ ಬೀಜಗಳ ದೃಷ್ಟಿಯಿಂದ 'ಕಾಲ' ನಿಂತು ಹೋಗಿತ್ತು ; ಸ್ಥಬ್ಧವಾಗಿತ್ತು. ಏಕೆಂದರೆ ಮೀಸೆಯ ಬಾಳಿನಲ್ಲಿ ಬೀಜವಾಗಿರುವುದು, ಮೊಳಕೆ ಮೂಡಿ ಬೆಳೆಯುವುದು ಇವೆರಡೂ ಆಗಬೇಕಾದ ಘಟನೆಗಳು. ಈ ಘಟನೆಗಳು ಒಂದಗ ನಂತರ ಇನ್ನೊಂದು ಆಗದೆ ಇದ್ದರೆ ಆ ಅವಧಿಯಲ್ಲಿ 'ಕಾಲ' ನಿಂತಂತೆಯೇ ! ಮೀಸೆ ಗಡ್ಡಗಳಂತೆ, ಹೆಣ್ಣು ಮಕ್ಕಳ ಸ್ತನಗಳನ್ನು ಉದಾಹರಿಸಬಹುದು, ಕಾಲವು ನಿಂತು ಹೋಗುವುದಕ್ಕೆ. ಹುಟ್ಟಿದ ಹೆಣ್ಣು ಮಗುವಿನಲ್ಲೂ ಸ್ತನದ ಮೂಲ ಸ್ನಾಯುಗಳು ಇದ್ದೇ ಇರುತ್ತವೆ. 14–15ರ ಪ್ರಾಯವು ಮೂಡಿದಾಗ ಅಗತ್ಯವಾದ ಲೈಂಗಿಕ ಹಾರ್ಮೋನ್ ಗೊಬ್ಬರವು ದೊರೆತಾಗ. ಸ್ತನಗಳೂ ದುಂಡು ದುಂಡಾಗಿ ಅಭಿವೃದ್ಧಿಸುತ್ತವೆ. ಈ ಅಂತರದಲ್ಲಿ ಸ್ತನಗಳ ದೃಷ್ಟಿಯಿಂದ, 14 ವರ್ಷಗಳಲ್ಲೂ, 'ಕಾಲ' ನಿಂತಂತೆ. ಒಂದಾದ ನಂತರ ಅಗತ್ಯವಾಗಿ ಆಗಬೇಕಾದ ಇನ್ನೊಂದು ಘಟನೆಯು, 14 ವರ್ಷಗಳ ಅವಧಿಯಲ್ಲಿ, ಆಗದೆ ಇರುವುದರಿಂದ 'ಕಾಲ' ವು ಸ್ಥಬ್ಧವಾದಂತೆಯೇ ಸರಿ !

ಹುಟ್ಟುವಾಗಲೇ, ಹೆಣ್ಣುಮಕ್ಕಳ ಅಂಡಾಶಯದಲ್ಲಿ (Ovaries) ಸುಮಾರು ನಾಲ್ಕುನೂರು Ova ಗಳ ಮೊಗ್ಗುಗಳಿರುತ್ತವೆ. ಸಾಮಾನ್ಯವಾಗಿ ಹದಿಮೂರು ಹದಿನಾಲ್ಕು ಪ್ರಾಯದ ವೇಳೆಗೆ, ಈ ಮೊಗ್ಗುಗಳು ಚಾಂದ್ರಮಾನದ ತಿಂಗಳ ಪ್ರಕಾರ ಒಂದೊಂದಾಗಿ ಬಿರಿಯುತ್ತವೆ ; ಅಂಡಾಶಯದಿಂದ ಅಂದರೆ ತೌರಿನಿಂದ ಹೊರಬೀಳುತ್ತವೆ. ಶೂನ್ಯಕ್ಕೆ : ಬಿರಿಯುತ್ತಿರುವ ಅಂಡ

ಗಳ ಬರುವಿಗೆ ಚಾತಕ ಪಕ್ಷಿಗಳಂತೆ ಕಾಯುತ್ತಿರುವ ಫೆಲೋಪಿಯನ್ ಟ್ಯೂಬುಗಳು (Fallopian Tubes) ಛತ್ರಿಯಂತೆ ಹರಡಿರುವ ತಮ್ಮ ಬಾಹುಗಳಿಂದ ಸೆಳೆದುಕೊಳ್ಳುತ್ತವೆ. ಫೆಲೋಪಿಯನ್ ಟ್ಯೂಬುಗಳಲ್ಲಿ ಬಿರಿಯುತ್ತಿರುವ ova ಅಥವಾ ಅಂಡವು ತನ್ನ ಭವಿಷ್ಯಕ್ಕಾಗಿ, ಬಾಳಿಬದುಕಲಿಕ್ಕೋ ಅಳಿದುಸಾಯಲಿಕ್ಕೋ ಕಾದಿರುತ್ತದೆ.

ನಾಲ್ಕು ನೂರು ಮೊಗ್ಗುಗಳಿರುವ (ovary) ಅಂಡಾಶಯವು ಸುಮಾರು 30 ವರ್ಷ ಬಾಳುತ್ತದೆ. ಅನಂತರ ಅದು ಖಾಲಿ. ಆಗ ಹಿಂದೂ ಸ್ತ್ರೀಯು 45–50ರ ಪ್ರಾಯವನ್ನು ಪಡೆದಿರುತ್ತಾಳೆ; ಋಷಿಪಂಚಮೀ ವ್ರತವನ್ನು ಕೈಗೊಳ್ಳುತ್ತಾಳೆ. ಇತರ ಸ್ತ್ರೀಯರು ತುರುಬು ನೆನೆಸಿಕೊಳ್ಳುತ್ತಾ, ಚೆಲ್ಲು ಚೆಲ್ಲಾಗಿ ಆಡಲಾರಂಭಿಸುತ್ತಾರೆ. 'ಮುಟ್ಟು ನಿಂತಿತು': 'Climacteric ಸಂದಿತು'; 'Men-O-Pause ಬಂದಿತು'; ಎಂದೆನ್ನುವುದೆಲ್ಲಾ ಅಂಡಾಶಯವು ಖಾಲಿಯಾಯಿತು, ಹೆಣ್ಣು ಪಾಪರ್ ನಾನು; ಎಂದನ್ನುವದರ ಅರ್ಥ. ಅಂದರೆ ಈ ಕಾಲದಲ್ಲಿ 'ಹೆಣ್ಣು' ಸತ್ತಳು. ಆದರೆ ಆ ಹೆಂಗಸು ಸತ್ತಳೇ? ಇಲ್ಲವೇ ಇಲ್ಲ. ಹೆಂಗಸು ದಿವನಾಗಿ, ಹೊರವಾಗಿ, ಧಡೂತಿಯಾಗಿ ಬೆಳೆದು ಉಳಿದಿರುತ್ತಾಳೆ.

'ಕಾಲ'ದ ದೃಷ್ಟಿಯಿಂದ ಇದನ್ನು ವಿಶ್ಲೇಷಿಸೋಣ. ಹೆಂಗಸು ಇದ್ದೇ ಇದ್ದಾಳೆ; ಆದರೆ 'ಹೆಣ್ಣುತನವು' ಸತ್ತು ಹೋಯಿತು. ಹೀಗಂದರೇನು? ದೇಹವು ಉಳಿದಿರುತ್ತದೆ. ಆದರೆ ಅದರ 'ಕಾಯಕವು', ಅದರ ವಿಧಿಲಿಖಿತ ಕೆಲಸವು ಮುಗಿಯಿತು. ಅಂದರೆ ದೇಹದಲ್ಲಿ ಅತಿ ಮುಖ್ಯವಾದ ಕಾರ್ಯವನ್ನು ನಿರ್ವಹಿಸುವ ಒಂದು ಪ್ರಮುಖ ಅಂಗವು (Ovary) ಕಾಲವಶವಾಯಿತು. ಕಾರ್ಯವನ್ನು ಮಾಡುವ ಯೋಗ್ಯತೆಯನ್ನು ಕಳೆದುಕೊಂಡಿತು. ಆದರೆ ದೇಹವು ಮುಂದುವರಿಯುತ್ತದೆ; ತುರುಬನ್ನು ನೆನೆಸಿಕೊಂಡು ಸುಖವನ್ನೂ ಪಡುತ್ತದೆ. ಗರ್ಭವತಿಯಾಗುವ ಭೀತಿ ಇಲ್ಲದುದರಿಂದ ಅಂಕೆ ಅಡ್ಡಿಗಳಿಲ್ಲದೆ ದೇಹವು ಆಟಾಟೋಪವನ್ನೂ ಮಾಡುತ್ತದೆ, ಅನುಚಿತವಾಗಿಯೂ ವರ್ತಿಸುತ್ತದೆ. ಹೆಂಗಸು ಬದುಕಿದ್ದರೂ ಆಕೆಯ ಅಂಡಾಶಯಗಳ ದೃಷ್ಟಿಯಿಂದ 'ಕಾಲ'ವು ಸ್ಥಬ್ಧವಾಯಿತು. ಶಾಶ್ವತವಾಗಿ ನಿಂತುಹೋಯಿತು.

## ೩. ಕಾಲವು ಹಿಂತಿರುಗಬಲ್ಲುದೇ ?

ಶೈಶವ, ಬಾಲ್ಯ, ಕೌಮಾರ, ನಡುಪ್ರಾಯ, ವಾರ್ಧಿಕ್ಯ; ಇವು, ಕಾಲ ಗತಿಯಲ್ಲಿ ಒಂದಾದನಂತರ ಒಂದು ದೇಹಕ್ಕೆ ಸಂಭವಿಸುತ್ತದೆ. 'ಕಾಲ'ವು ಮುಂದುವರಿಯುತ್ತದೆ. ಆದರೆ ವಾರ್ಧಿಕ್ಯ ಬಂದವನು ತಿರುಗಿ ಕೌಮಾರ ನಾದರೆ, ಕಾಲವು ಹಿಂತಿರುಗಿ ಪ್ರವಹಿಸಿದಂತೆ. ಕಾಯಕಲ್ಪವನ್ನು ಮಾಡು ವವರೆಲ್ಲರೂ ಕಾಲಗತಿಯನ್ನು ಹಿಂತಿರುಗಿಸುವವರು; ವೈಜ್ಞಾನಿಕ ದೃಷ್ಟಿ ಯಿಂದ ಇದು ಸಾಧ್ಯವೇ ? ಸಾಧ್ಯವಾದರೂ ಸಾಧುವೇ ? ಪರಿಶೀಲಿಸೋಣ.

ಸರ್ವಾಂಗ ಸುಂದರನಾಗಿ, ಸರ್ವ ಕಾಲದಲ್ಲೂ ಯುವಕನಾಗಿ ಬಾಳ ಬೇಕೆಂಬುದು ಮಾನವನ ಆಸೆಗಳಲ್ಲಿ ಹಿರಿಯದಾದುದು. ಬದುಕಿನಲ್ಲಿ ಬೇಸರ ಮತ್ತು ಜುಗುಪ್ಸೆಯನ್ನು ತರುವ ಸಂದರ್ಭಗಳು ಬಹಳವಿರದಿದ್ದರೆ, ಇಂತಹ ಬಹು ಬಹುಕಾಲ ಯುವಕನಾಗಿರಬೇಕು ಎನ್ನುವ ಆಸೆಯೂ ಇದ್ದೇ ಇರುತ್ತದೆ. ಇಂತಹ ಆಸೆಯನ್ನು ಪೂರೈಸಿದರೆ ಸಾಕಷ್ಟು ಪ್ರತಿಫಲವು ದೊರೆಯುತ್ತದೆ ಎನ್ನುವ ಆಸೆಯಿಂದ ಪಲವಾರು ವೈದ್ಯರುಗಳು ಕಾಯಕಲ್ಪ ಮಾಡುವ ವಿಧಾನ ಗಳನ್ನು ಪರೀಕ್ಷಿಸತೊಡಗಿದರು.

ಪ್ರಾಯ ತುಂಬಿದ ಗಡವಾ ಕೋತಿಗಳ ವೀರ್ಯ ಗ್ರಂಥಿಗಳನ್ನು ಶಸ್ತ್ರ ಚಿಕಿತ್ಸೆ ಮಾಡಿ ತೆಗೆದು, ಅವನ್ನು ಮುದುಕನ ಶರೀರದಲ್ಲಿ ನಾಟಿ ಹಾಕುವುದು ಕಾಯಕಲ್ಪದ ಒಂದು ಪ್ರಯತ್ನ. ವೀರ್ಯಗ್ರಂಥಿಗಳು ಮುದುಕರಲ್ಲಿ ಬಾಡಿರು ತ್ತವೆ. ಯುವಕಗ್ರಂಥಿಗಳನ್ನು ಒದಗಿಸಿದರೆ ಮುದುಕನು ವೀರ್ಯವಂತ ನಾಗುತ್ತಾನೆ, ಯುವಕನಾಗುತ್ತಾನೆ ಎಂಬ ನಂಬಿಕೆಯೇ ಇಂತಹ ಪ್ರಯೋ ಗಕ್ಕೆ ಆಧಾರ. Voronoff ಎಂಬೊಬ್ಬ ವೈದ್ಯ ಈ ಪ್ರಯೋಗಗಳನ್ನು ನಡಸಿದ. ಸಾಕಷ್ಟು ಪ್ರಚಾರವೂ ದೊರಕಿತು. ಅವನೇನೋ ಶ್ರೀಮಂತನಾದ. ಆದರೆ ಈ ಪ್ರಯೋಗದಿಂದ ನೈಜವಾದ ಯಾವ ಪ್ರತಿಫಲವೂ ಮುದುಕರಿಗೆ ದೊರೆಯಲಿಲ್ಲ. ಲೈಂಗಿಕ ಹಾರ್ಮೋನುಗಳನ್ನು ಅಧಿಕ ಪ್ರಮಾಣದಲ್ಲಿ ಬಳಸಿದರೆ ಕಾಯ ಕಲ್ಪವಾಗುತ್ತದೆ ಎಂದು ಆ ಪ್ರಯೋಗವನ್ನೂ ನಡಸಿದರು. ಸಾರ್ಥಕ ವಾಗಲಿಲ್ಲ.

ನೋವೋಕೇನ್ ತೆರನ ಔಷಧಿಗಳನ್ನು ಚುಚ್ಚುಮದ್ದಾಗಿ ಪ್ರಯೋಗಿಸಿ ಕಾಯಕಲ್ಪವನ್ನು ಆಸ್ಟ್ರಿಯಾದಲ್ಲಿ ಸಾಧಿಸಿದ್ದಾರೆ ಎಂಬ ಪ್ರಚಾರವೂ

ಕೆಲ ಕಾಲನಡೆಯಿತು. ಇದೂ ಕೂಡಾ ಕೇವಲ ಪ್ರಚಾರವೇ ಹೊರತು, ಶಾಸ್ತ್ರಿಯ ವಾಗಿ ಸಿದ್ಧಾಂತವಾಗಲಿಲ್ಲ.

ಅಂದ ಮೇಲೆ ದೇಹದ ದೃಷ್ಟಿಯಿಂದ ಕಾಲವನ್ನು ಹಿಂತಿರುಗಿಸುವುದು ಸಾಧ್ಯವಿಲ್ಲ, ಈಗಿನ ವೈಜ್ಞಾನಿಕ ಹಂತದಲ್ಲಿ.

ಆದರೆ ವೈಜ್ಞಾನಿಕ ಸಂಶೋಧನೆಗಳು ಈ ದಿಸೆಯಲ್ಲಿ ಅಪಾರವಾಗಿ ನಡೆಯುತ್ತಿವೆ. (Ageing) ಮುಪ್ಪು ಏಕೆ ಆಗುತ್ತದೆ? ಏಕೆ ಆಗಬೇಕು? ಹೀಗಾಗುವುದಕ್ಕೆ ಕಾರಣಗಳೇನು? ಎನ್ನುವ ಬಗ್ಗೆ ಆಳವಾದ ಅಭ್ಯಾಸಗಳು ನಡೆಯುತ್ತಿವೆ. ಮುಪ್ಪಾಗುವುದಕ್ಕೆ ಸ್ಪಷ್ಟವಾದ ಕಾರಣಗಳು ತಿಳಿದಾಗ ಅವುಗಳನ್ನು ನಿವಾರಿಸುವ ಮಾರ್ಗಗಳೂ ತಿಳಿಯಬರುತ್ತವೆ. ಆಗ ಕಾಯ ಕಲ್ಪವನ್ನು ಸಾಧಿಸಬಹುದು.

ಹೀಗೆ ಮಾಡುವುದು ಜನಜೀವನದ, ಸಮಾಜದ ದೃಷ್ಟಿಯಿಂದ ಸಾಧುವೇ? ಇದನ್ನೂ ಸಮಾಜವು ಯೋಚಿಸಬೇಕು. ಮುದುಕರೆಲ್ಲರೂ ಯುವಕರಾಗ ಹತ್ತಿದರೆ ನೈಜ ಯುವಕರಿಗೆ ಬಾಳಿ ಬದುಕಲು ಅವಕಾಶವು ಕಡಿಮೆಯಾಗು ತ್ತದೆ. ಸಮಾಜದಲ್ಲಿ ನೈಜ ಯುವಕರ ಮತ್ತು ಕೃತಕ ಯುವಕರ ನಡುವೆ ತೀವ್ರ ಘರ್ಷಣೆಯು ಅನಿವಾರ್ಯವಾಗುತ್ತದೆ. ಇವೆಲ್ಲವೂ ಇನ್ನು ಪ್ರಯೋಗ ಗಳ ಮೊದಮೊದಲು ಹಂತದಲ್ಲಿರುವುದರಿಂದ, ಇನ್ನು ಕೆಲವು ಕಾಲವಾದರೂ ಮಾನವ ಸಮಾಜವು ಸ್ವಲ್ಪ ಮಟ್ಟಿಗೆ ನಿಶ್ಚಿಂತವಾಗಿರಬಹುದು.

ಆರೋಗ್ಯವಾದ ದೇಹದಲ್ಲಿ ಕಾಲಗತಿಯನ್ನು ಹಿಂತಿರುಗಿಸುವುದು ಸಾಧ್ಯ ವಾಗಿಲ್ಲ. ಆದರೆ ಕೆಲವು ಬೇನೆಗಳಲ್ಲಿ ಹೀಗಾಗುವುದನ್ನು ದೇಹದಲ್ಲಿ ಕಾಣು ತ್ತೇವೆ.

ಅರ್ಬುದ ರೋಗವು ಇದಕ್ಕೊಂದು ಉದಾಹರಣೆ. ಅರ್ಬುದ ರೋಗದ ಮುಖ್ಯ ಗುಣವೇನು? ಅದೇಕೆ ಹಾಗೆ ದೇಹಕ್ಕೇ ಊನ ಮಾಡುತ್ತದೆ? ಇವನ್ನು ಸ್ಥೂಲವಾಗಿ ಪರಿಶೀಲಿಸುವ.

ಅಣಿಯಾಗಿ ಸಿದ್ಧವಾದ ಅಂಡ (Ova) ವು ಅದಕ್ಕಾಗಿ ಹಾತೊರೆಯು ತ್ತಿರುವ ವೀರ್ಯಾಣುವನ್ನು ಸ್ವಾಗತಿಸಿ. ತನ್ನಲ್ಲಿ ಅದನ್ನು ಅವಿಚ್ಛಿನ್ನವನ್ನಾಗಿ ಮಾಡಿಕೊಳ್ಳುತ್ತದೆ. ತಾಯಿ ತಂದೆಯರ ಗುಣಗಳನ್ನು ಈ ರೀತಿ ಬಳುವಳಿ ಯಾಗಿ ಪಡೆದ ಮಗುವಿನ ಜೀವನವು ಒಂದು Fertilised ovum ಇನಿಂದ

ಪ್ರಾರಂಭವಾಗುತ್ತದೆ. ಆ ಸೆಲ್ಲಿನ ಕಣ ಕಣಗಳೂ ಅಭಿವೃದ್ಧಿಯಾಗ ತೊಡಗುತ್ತವೆ. ನಂತರ ಒಂದು ಹಂತದಲ್ಲಿ ವಿಧ ವಿಧ ಅಂಗಗಳು, ಅವಕ್ಕೆ ವಿಾಸಲಾದ ಕಣಗಳಿಂದ ಉದ್ಭವಿಸುತ್ತವೆ. ಸೂಕ್ತ ಕಾಲದಲ್ಲಿ ಅಂಗಗಳೆಲ್ಲವೂ ಪ್ರೌಢಸ್ಥಿತಿಗೆ ವೃದ್ಧಿಯಾಗುತ್ತವೆ. ತಾಯ ಗರ್ಭದಿಂದ ಮಗುವು ಹೊರ ಪ್ರಪಂಚಕ್ಕೆ ಬರುವ ವೇಳೆಗೆ. ಅಂಗಾಂಗಗಳು ಸ್ಫುಟವಾಗಿ ತಮ್ಮದೇ ಆದ ಸ್ವರೂಪವನ್ನು ಪಡೆದಿರುತ್ತವೆ. ಒಂದು ಅಂಗವನ್ನು ಉದಾಹರಣೆಗೆ ಈಗ ತೆಗೆದುಕೊಳ್ಳೋಣ.

ತುಟಿ. ತುಟಿಯಲ್ಲಿ ಅರ್ಧಭಾಗ ಚರ್ಮ, ಇನ್ನರ್ಧ ಭಾಗ ಮ್ಯೂಕಸ್ ಮೆಂಬ್ರೇನ್. ಅಂದರೆ ಎರಡು ತರಹ ಟಿಷ್ಯೂಗಳು ಸಂಧಿಸುತ್ತವೆ. ಪೈಪ್ ಸೇದುವುದು, ಸಿಗಾರ್ ಎಳೆಯುವುದು ಅಥವಾ ಎಲಡಿಕೆ ಹೊಗೆಸೊಪ್ಪನ್ನು ಅತಿಯಾಗಿ ಸೇವಿಸುವುದು, ಇತ್ಯಾದಿ ಯಾವುದಾದರೂ ಕಾರಣದಿಂದ, ನಲವತ್ತು ಐವತ್ತರ ವಯಸ್ಸಿನಲ್ಲಿ, ತುಟಿಯಂಚಿನಲ್ಲಿ, ಕಾನ್ಸರ್ ಅಥವಾ ಅರ್ಬುದ ರೋಗವು ಪ್ರಾರಂಭವಾಗುತ್ತದೆ, ಕೆಲವು ನತದೃಷ್ಟರಲ್ಲಿ. ಮ್ಯೂಕಸ್ ಮೆಂಬ್ರೇನ್ ಆಗಲೀ, ಅದರ ಅಂಚಿನಲ್ಲಿರುವ ಚರ್ಮವೇ ಆಗಲಿ, ಆಘಾತವಾಗಿ ಹರಿದಾಗ, ತಿರುಗಿ, ಮ್ಯೂಕಸ್ ಮೆಂಬ್ರೇನ್ ಅಥವಾ ಚರ್ಮವು ಬೆಳೆದುಕೊಳ್ಳುತ್ತದೆ. ಹಾಗಾಗಲು ಸಾಧ್ಯವಾಗದೇ ಇದ್ದರೆ, Fibroblasts ಎನ್ನುವ ರಿಪೇರಿ ವಸ್ತುವು ಅತ್ಯಧಿಕವಾಗಿ ಸೇರಿಕೊಂಡು ಹರಿದುದನ್ನು ತುಂಬಿ ಸರಿಪಡಿಸುತ್ತದೆ. ಇದೇ ಮುಂದಕ್ಕೆ Scar ಆಗುವುದು. ಇವೆರಡೂ ಕ್ರಮಗಳು ಸಾಮಾನ್ಯವಾದ ಆರೋಗ್ಯ ಸ್ಥಿತಿಯಲ್ಲಿ ನಡೆಯುತ್ತವೆ. ಆದರೆ ಅರ್ಬುದ ರೋಗವು ಪ್ರಾರಂಭವಾದಾಗ, ರಿಪೇರಿ ಮಾಡಬರುವ ಸೆಲ್ಲುಗಳು, ತಮ್ಮ ಕಾರ್ಯದ ಗುರಿಯನ್ನು ಮರೆಯುತ್ತವೆ. ಜೀವದ ಆರಂಭದಲ್ಲಿ ಪರಿಪೂರ್ಣವಾದ ಓವಂ ಇನಿಂದ ಹಲವಾರು ಏಕ ರೀತಿಯ ಸೆಲ್ಲುಗಳು ಉದ್ಭವಿಸುವಾಗ, ಹೇಗೆ ಅಭಿವೃದ್ಧಿಸುತ್ತವೋ, ಆ ರೀತಿಯಲ್ಲಿ ಅರ್ಬುದ ರೋಗದ ಸೆಲ್ಲುಗಳು ಬೆಳೆಯತೊಡಗುತ್ತವೆ. ಮುಂದೆ ಮ್ಯೂಕಸ್ ಮೆಂಬ್ರೇನ್ ಆಗಬೇಕು, ಅಥವಾ ಚರ್ಮವಾಗಿರಬೇಕು ಎನ್ನುವ ಗುರಿಯನ್ನು ಮರೆಯುತ್ತವೆ. ಬಾಳಿನ ಮೊದಲ ಹಂತದ ಎಳೆಯ ಸೆಲ್ಲುಗಳಂತೆ ಅತ್ಯಧಿಕವಾಗಿ, ಅತಿ ಹೊರವಾಗಿ ಬೆಳೆಯಲಾರಂಭಿಸುತ್ತವೆ.

ಅಂದರೆ ಕಾಲದ ದೃಷ್ಟಿಯಿಂದ ಕ್ಯಾನ್ಸರ್ ಅಥವಾ ಅರ್ಬುದ ರೋಗದ ಸೆಲ್ಲುಗಳು ಮುಂದುವರಿಯುವುದನ್ನು ಮರೆತು ಒಲು ಹಿಂದೆ ಹಿಂದೆ ಇದ್ದ ಲಕ್ಷಣಗಳನ್ನು ಪುನಃ ಪಡೆಯುತ್ತವೆ. ಅಂದರೆ ಅರ್ಬುದ ರೋಗದಲ್ಲಿ ಕಾಲವು ಹಿಂತಿರುಗಿ ಪ್ರವಹಿಸಿದಂತಾಯಿತು.

## ಈ. ದೇಹದ ಕಾಲ ಮತ್ತು ಬೇನೆಗಳು ವಾಸಿಯಾಗುವ ಕ್ರಮಗಳು

ಮುಖ ಕ್ಷೌರವನ್ನು ಮಾಡಿಕೊಳ್ಳುವಾಗ ಕೆನ್ನೆಯನ್ನು ಹೆರೆದುಕೊಳ್ಳುತ್ತೇವೆ. ಅಥವಾ ಪೆನ್ಸಿಲ್ಲನ್ನು ಜೇವುವಾಗ ಬೆರಳನ್ನು ಕತ್ತರಿಸಿಕೊಳ್ಳುತ್ತೇವೆ. ಆಗ ಒಂದೆರಡು ನಿಮಿಷಗಳು ರಕ್ತವು ಸುರಿಯುತ್ತದೆ. ಅನಂತರ ಹೆಪ್ಪುಗಟ್ಟಿಕೊಳ್ಳುತ್ತದೆ. ದಿನ ದಿನಕ್ಕೂ ಹೆಪ್ಪು ಗಟ್ಟಿಯಾಗಿ ಹೆಕ್ಕು ಆಗುತ್ತದೆ. ಏಳೆಂಟು ದಿನಗಳಾದ ಮೇಲೆ ಹೆಕ್ಕಿಯು ಬಿದ್ದುಹೋಗುತ್ತದೆ. ಆ ವೇಳೆಗೆ ಅವರ ತಳದಲ್ಲಿ ಸರಿಯಾದ ಚರ್ಮವೋ ಅಥವಾ Scar ಓ ಅಣಿಯಾಗಿರುತ್ತದೆ.

ಹದಿನೆಂಟರ ಪ್ರಾಯದವನಿಗೆ ಇದೆಲ್ಲಾ ಕ್ರಮಕ್ಕೂ ಏಳೆಂಟು ದಿನಗಳಾಗುತ್ತವೆ. ಮೂವತ್ತೆಂಟರ ನಡುಪ್ರಾಯದವನಿಗೆ ಎಂಟು ಹತ್ತು ದಿನಗಳಾಗುತ್ತವೆ. ಮುದುಕರಿಗೆ ಇನ್ನೆರಡು ಮೂರು ದಿನ ಹೆಚ್ಚು ಕಾಲ ಹಿಡಿಯುತ್ತದೆ. ಈ ವಿಷಯವನ್ನು ಅಭ್ಯಾಸ ಮಾಡಿದ Lecomte du Nouy. ಲಕಾಂಟಿ ಡು ನಾಯ್ ಎಂಬ ವಿಜ್ಞಾನಿಯು "The rate of healing of a Superficial Wound varies in Function of the age of the Patient." ಎಂಬ ಸೂತ್ರವನ್ನು ಪ್ರಚುರಪಡಿಸಿದ. ಎರಡು ಫಾರ್ಮುಲಾಗಳನ್ನೂ ಸಿದ್ಧಪಡಿಸಿದ. ಮೊದಲ ಫಾರ್ಮುಲಾವು Index of Cicatrisation. ಎಂದರೆ ಹೆಕ್ಕು ಕಟ್ಟುವುದರ ಸಂಖ್ಯಾ ಸಂಕೇತವನ್ನು ನಮೂದಿಸುತ್ತದೆ. ಎರಡನೆಯ ಫಾರ್ಮುಲಾವು ವಯಸ್ಸಿಗನ್ವಯಿಸುವಂತಹ ಮತ್ತು ರಿಪೇರಿಯೂ ಆಗುವುದರ ನಿಗದಿಯಾದ ಅಂಕಿಯಾದ ಅಂಕಿಯನ್ನು ನೀಡುತ್ತದೆ.

ಈ ಫಾರ್ಮುಲಾಗಳ ಅಭ್ಯಾಸದಿಂದ (Study) ಮನುಷ್ಯನ ನೈಜ ವಯಸ್ಸನ್ನು, ನಿರ್ಧರಿಸಬಹುದು. ಮಾನವ ಜೀವಶಾಸ್ತ್ರದ ಪ್ರಕಾರ ಒಬ್ಬನ ವಯಸ್ಸು ಮೂವತ್ತಿರಬಹುದು. ಆದರೆ ಪಂಚಾಂಗದ ಪ್ರಕಾರ ಅವನ

ವಯಸ್ಸು ಇಪ್ಪತ್ತಿರಬಹುದು, ನಲವತ್ತೂ ಇರಬಹುದು. ಮನುಷ್ಯನ ನೈಜ ವಯಸ್ಸಿಗೂ ಪಂಚಾಂಗದ ವಯಸ್ಸಿಗೂ ಬಹಳಷ್ಟು ವ್ಯತ್ಯಾಸವಿರಬಹುದು.

ಕಾಲದ ದೃಷ್ಟಿಯಿಂದ ದೇಹದ ರಿಪೇರಿ ಕ್ರಮಗಳನ್ನು ನೋಡಿದರೆ, ಪಂಚಾಂಗದ ಕಾಲವು ಸರಿಯುತ್ತಿರುವ ವೇಗದಂತೆ ರಿಪೇರಿ ಕ್ರಮಗಳು ಸರಿಯುವುದಿಲ್ಲ. ಅದಕ್ಕಿಂತಲೂ ನಿಧಾನವಾಗಿರಬಹುದು, ಹಾಗೂ ಅದರಂತೆಯೇ ಇರಲೂಬಹುದು; ಮತ್ತು ಅದಕ್ಕಿಂತ ತೀವ್ರಗತಿಯಲ್ಲಿ ಸರಿಯಲೂ ಬಹುದು ಎನ್ನುವುದು ಸ್ಪಷ್ಟವಾಗುತ್ತದೆ.

ಪಂಚಾಂಗದ ಕಾಲವನ್ನೂ ದೇಹದ ವೈಯಕ್ತಿಕ ಕಾಲವನ್ನೂ ಹೋಲಿಸಿದರೆ, ವೈಯಕ್ತಿಕ ಕಾಲವು ಅವಸರದಿಂದ ಸರಿಯಬಹುದು; ಸಮಾನವಾಗಿ ಸರಿಯಬಹುದು; ಮತ್ತು ನಿಧಾನವಾಗಿಯೂ ಹರಿಯಬಹುದು ಎನ್ನುವುದು ಸ್ಪಷ್ಟವಾಗುತ್ತದೆ.

ಪ್ರಮುಖವಾದ ಒಂದು ಬಾಳ ಮರ್ಮವನ್ನು ಇದರಿಂದ ಅರಿಯಬಹುದು. ಜಾತಕದ ಪ್ರಕಾರ ಅಥವಾ ಪಂಚಾಂಗದ ಪ್ರಕಾರ 50 ವಯಸ್ಸು ಆದವನು, ದೇಹದ ನೈಜ ಸ್ಥಿತಿಯ ಪ್ರಕಾರ 40 ರ ಪ್ರಾಯಸ್ಥನಾಗಿರಬಹುದು. ಸಮಾಜದಲ್ಲಿ ಅವನ ನಡವಳಿಕೆಯು, ದೇಹದಿಂದ ಉದ್ರೇಕಗೊಂಡಾಗ ಅವ ನಲವತ್ತರವನಂತೆ ನಡೆದುಕೊಳ್ಳಬಹುದು. "ಐವತ್ತರ ಮುದುಕ, ಪ್ರೌಢ ವಯಸ್ಕರಂತೆ ಚೆಲ್ಲು ಚೆಲ್ಲಾಗಿ ಆಡುತ್ತಿದ್ದಾನೆ" ಎಂದು ಸಮಾಜವು ಅವನನ್ನು ಆಕ್ಷೇಪಿಸಬಹುದು, ಮೂದಲಿಸಲೂ ಬಹುದು. ಇಂತಹ ಆಕ್ಷೇಪಣೆಯು ಸಾಧುವಾದುದಲ್ಲ ವಿಜ್ಞಾನದ ದೃಷ್ಟಿಯಿಂದ; ಕಾಲದ ಅರಿವಿನಿಂದ; ಎಂಬುದನ್ನು ಸಮಾಜವು ಅರಿತರೆ, ವ್ಯಕ್ತಿಗೂ ಕ್ಷೇಮ, ಸಮಾಜಕ್ಕೂ ಹಿತ. ಅರಿವು ಸಾಲದ ಸಮಾಜದ ದೋಷಾರೋಪಣೆಯ ಸಲ್ಲ.

## 3. ಕ್ರಿಮಿ ಕೀಟಗಳು ಮತ್ತು ಕಾಲ

ಮಾನವನ ದೇಹದ ದೃಷ್ಟಿಯಿಂದ ವೈಯಕ್ತಿಕ ಕಾಲದ ಆಗು ಹೋಗುಗಳನ್ನು ತಿಳಿದೆವು. ಮನುಷ್ಯನ ದೇಹವು ಮನಸ್ಸಿನಿಂದ ಬಹಳಷ್ಟು ಪ್ರಭಾವಿತವಾಗಿದೆ. ಆದುದರಿಂದ ಹೀಗಾಗಿರಬಹುದು ಎನ್ನುವ ಅಭಿಪ್ರಾಯವು

ಮೂಡುವುದು ಸಹಜ ಮತ್ತು ಸ್ವಾಭಾವಿಕ. ಆದಕಾರಣ ಮಂನಸ್ಸು ಎನ್ನುವುದು ಇನ್ನು ಪ್ರತಿಷ್ಠಿತವಾಗದೇ ಇರುವ ಕ್ರಿಮಿಕೀಟಗಳಲ್ಲಿ ವೈಯಕ್ತಿಕ ಕಾಲವು ಯಾವ ರೀತಿಯಲ್ಲಿ ಪ್ರಭಾವವನ್ನು ಬೀರುತ್ತದೆ ; ಅಥವಾ ಪರಿಣಾಮ ವನ್ನು ಮೂಡಿಸುತ್ತದೆ, ಹಾಗೂ ಚಲಿಸುತ್ತದೆ ಎನ್ನುವುದನ್ನು ತಿಳಿಯುವ.

ಹಾರ್ವರ್ಡ್ ವಿಶ್ವವಿದ್ಯಾನಿಲಯದಲ್ಲಿ ಪ್ರೊಫೆಸರ್ ಕೆರೋಲ್ ವಿಲಿಯಂಸ್ ಎಂಬ ವಿಜ್ಞಾನಿಯಿದ್ದ. ಚಿಟ್ಟೆ ಹುಳುಗಳನ್ನು ಕಂಡರೆ ಅವನಿಗೆ ಬಲು ಮೋಜು, ಬಹಳ ಆಸಕ್ತಿ. ಮಕ್ಕಳಿಗೆಲ್ಲರಿಗೂ ಇದು ಸ್ವಾಭಾವಿಕ ವಾದದ್ದೇ. 'Butter-flies are pretty things ; Prettier than you or I' ಎನ್ನುವ ಇಂಗ್ಲೀಷ್ ಬಾಲಗೀತೆಯು, ನಮ್ಮನ್ನು ಸಂತಸ ಗೊಳಿಸಿದಂತೆ, ಅವನನ್ನೂ ಆಹ್ಲಾದಿಸಿದ್ದಿರಬೇಕು. ಪ್ರೌಢನಾದ ಮೇಲೆ ಚಿಟ್ಟೆ ಹುಳುಗಳ ಜೀವನ ಚರಿತ್ರೆಯನ್ನು ಅವ ಅಧ್ಯಯನ ಮಾಡತೊಡಗಿದ.

ಲೆಪಿಡಾಪ್ಟರ (Lepidoptera) ಎಂಬ ಕೀಟದ ಒಂದು ಶಾಖೆಯು ಪ್ರಸಿದ್ಧವಾದುದು. ಚಿಟ್ಟೆ ಹುಳುಗಳು ಈ ವರ್ಗಕ್ಕೆ ಸೇರಿದವು. ಇವುಗಳ ಜೀವನದ ಗತಿಯೇ ವಿಚಿತ್ರ. ಒಂದು ಹಂತದಲ್ಲಿ ಅವುಗಳ ದೇಹವು ಸಂಪೂರ್ಣವಾಗಿ, ಪರಿವರ್ತನೆಯನ್ನು ಹೊಂದಿ, ಹೊಸದೊಂದು ರೂಪದ ದೇಹವು ಉದ್ಭವವಾಗುತ್ತದೆ. ಇಂತಹ ಪರಿವರ್ತನೆಯನ್ನು Holo-metabole ಎನ್ನುತ್ತಾರೆ. Holos ಎಂದರೆ ಸಂಪೂರ್ಣವಾಗಿ ಅಂತ, metabolic ಎಂದರೆ ಪರಿವರ್ತನೆ.

ಕೀಟವು ಮೊಟ್ಟೆಯನ್ನು ಇಡುತ್ತದೆ. ವಂಶಪಾರಂಪರ್ಯವನ್ನು ಮುಂದುವರಿಸಲು ಅಗತ್ಯವಾದ ಅಣಿಯನ್ನು ಅಥವಾ ಸಿದ್ಧತೆಯನ್ನು, ತಾಯ್ತಂದೆಯರಿಂದ ಕೀಟವು ಪಡೆದಿರುತ್ತದೆ. ಸಾಕಷ್ಟು ಬೆಳೆದ ಮೇಲೆ, ಥಡೂತಿಯಾಗುತ್ತದೆ, ಮೊಟ್ಟೆ. ಆ ಗಾತ್ರಕ್ಕಿಂತ ಹೆಚ್ಚಾಗಿ ಬೆಳೆಯಲು ಅದಕ್ಕೆ ಅನುಕೂಲಗಳಿರುವುದಿಲ್ಲ. ಆಗ ಮೊಟ್ಟೆಯು ಲಾರ್ವಾ (Larva) ಅಥವಾ ಕಂಬಳಿ ಹುಳುವಿನಂತೆ ಪರಿವರ್ತನೆ ಹೊಂದುತ್ತದೆ. ಕಂಬಳಿ ಹುಳುವಿಗೋ ಅಸಾಧ್ಯ ಹಸಿವು. ಸಿಕ್ಕಿದ ಎಲೆ ಮೊಗ್ಗು ಇತ್ಯಾದಿಗಳನ್ನು ಬಕಾಸುರನಂತೆ ಮುಕ್ಕಲಾರಂಭಿಸುತ್ತದೆ. ಆದ ಕಾರಣ ಹೊರವಾಗಿ ಬೆಳೆಯ ತೊಡಗುತ್ತದೆ. ಒಂದು ಹಂತವನ್ನು ಅಥವಾ ಗಾತ್ರವನ್ನು ಪಡೆದಾಗ,

ತಿನ್ನುವುದೂ ಬೇಸರವಾಗುತ್ತದೆಯೋ, ಏನೋ?, ಸುಸ್ವಾದಂತಾಗಿ ವಿಶ್ರಾಂತಿಯನ್ನು ಪಡೆಯುತ್ತದೆ. ಒಂದು ಸ್ಥಳದಲ್ಲಿ ಬಿದ್ದುಕೊಳ್ಳುತ್ತದೆ. ಹೊರ ಪ್ರಪಂಚದಲ್ಲಿ ಯಾವ ಚಟುವಟಿಕೆಯನ್ನು ನಡೆಸುವುದಿಲ್ಲ. ವಿಶ್ರಾಂತಿಯನ್ನು ಪಡೆಯುವ ಈ ಹಂತವನ್ನು ಮುಟ್ಟಿದಾಗ ತನ್ನ ಸುತ್ತಲೂ ತಾನು, ತನ್ನಿಂದಲೇ ಸ್ರವಿಸಲ್ಪಟ್ಟ ದ್ರವಗಳಿಂದ ಕೋಟೆಯೊಂದನ್ನು ಕಟ್ಟಿಕೊಳ್ಳುತ್ತದೆ. ಇಂತಹ ದ್ರವಗಳು ಬಲು ಬೇಗ ಹೆಪ್ಪು ಗಟ್ಟಿಕೊಂಡು ಘನೀಭೂತವಾಗುವುದರಿಂದ, ಕೋಟೆಯೂ ಸ್ಥಿರವಾಗುತ್ತದೆ. ರೇಷ್ಮೆಯ ಗೂಡೂ ಇಂತಹದೊಂದು ಕೋಟೆ. ಕಂಬಳಿ ಹುಳುವಿನ ಈ ಸ್ಥಿತಿಯನ್ನು ಪ್ಯೂಪಾ ಅಥವಾ ಕ್ರೈಸಾಲಿಸ್ ಎನ್ನುತ್ತಾರೆ. ಸುರಕ್ಷಿತವಾದ ಈ ಕೋಟೆಯಲ್ಲಿ, ಬಾಹ್ಯ ಪ್ರಪಂಚದ ಅರಿವನ್ನು ಪೂರ್ಣವಾಗಿ ತಡೆದು, ತನ್ನ ಒಡಲನ್ನು ಸಂಪೂರ್ಣವಾಗಿ ಪರಿವರ್ತಿಸಿಕೊಳ್ಳುತ್ತದೆ. ಕಂಬಳಿ ಹುಳುವು ಹರಿದಾಡುವ ಮುಳ್ಳು ಮುಳ್ಳಾದ ಹುಳು. ಅಸಹ್ಯವೆಂದು ಕಾಣಿಸುವ ಅದನ್ನು ಯಾರು ಮುಟ್ಟ ಹೋಗುವುದಿಲ್ಲ. ಆದರೆ ಕ್ರೈಸಾಲಿಸ್ ಸ್ಥಿತಿಯಿಂದ, ಚಿಟ್ಟೆಯ ರೂಪಕ್ಕೆ ಪರಿವರ್ತನೆಯನ್ನು ಹೊಂದಿದ ಮೇಲೆ, ಮಾನವನ ಕಣ್ಣಿಗೆ ಎಷ್ಟು ಸುಂದರವಾಗಿ ಕಾಣುತ್ತದೆ! ಚಿಟ್ಟೆ ಹುಳು ಅಥವಾ ಪತಂಗವನ್ನು ಅಟ್ಟಿಸಿಕೊಂಡು ಹೋಗಿ ಹಿಡಿಯಲು ಬಾಲಕ ಬಾಲಕಿಯರಿಗೆ ಎಂತಹ ಸಹಜ ಉತ್ಸಾಹ! ಕಂಬಳಿ ಹುಳುವಿನ ಮುಳ್ಳು ಮುಳ್ಳು ಕೂದಲುಗಳು, ಚಿಟ್ಟೆ ಹುಳುವಿನ ರೆಕ್ಕೆಗಳ ಬಣ್ಣ ಬಣ್ಣದ ಥೃಢವಾದ ಪದರಗಳು ಆಗುತ್ತವೆ, ಆಗಿವೆ ಎಂದರೆ ನಂಬುವುದಕ್ಕೆ ಆಗುವುದಿಲ್ಲ. ಅನಂತರ ಚಿಟ್ಟೆ ಹುಳುಗಳು ಹೂವಿಂದ ಹೂವಿಗೆ ಹಾರಾಡಲಾರಂಭಿಸುತ್ತವೆ, ಅವುಗಳೂ ಹಾರಾಡುವ ಹೂವುಗಳೇ ಎನ್ನುವಷ್ಟು ಚೆಂದವಾಗಿರುತ್ತವೆ.

ಅಂದರೆ ಮೊಟ್ಟೆ ಇಟ್ಟ ಮೇಲೆ ಒಂದಾದ ಮೇಲೊಂದು ನಡೆಯುವ ಘಟನೆಗಳು ಹೀಗಿವೆ. 1) ಮೊಟ್ಟೆ. 2) ಲಾರ್ವಾ ಅಥವಾ ಕಂಬಳಿ ಹುಳು. 3) ಪ್ಯೂಪ. 4) ಚಿಟ್ಟೆ ಹುಳು. ಕ್ರಮವಾಗಿ ನಡೆಯುವ ನಾಲ್ಕೂ ಹಂತಗಳನ್ನು ಕೆರೋಲ್ ವಿಲಿಯಂಸ್ ಅಭ್ಯಾಸ ಮಾಡತೊಡಗಿದ.

ಕಂಬಳಿ ಹುಳುವಿನ ಮೆದುಳನ್ನು ಅವ ಸೂಕ್ಷ್ಮವಾಗಿ ವಿಶ್ಲೇಷಿಸಿದ. ಮೆದುಳಿನ ಎರಡೂ ಪಕ್ಕಗಳಲ್ಲಿ ಎರಡು ಗ್ರಂಥಿಗಳಿರುವುದನ್ನು ಗುರುತಿಸಿದ.

Corpora Allata ಎಂಬ ಹೆಸರು ಈ ಗ್ರಂಥಿಗಳಿಗೆ. ಒಂದು ಗಾತ್ರಕ್ಕೆ ಬೆಳೆದಾಗ, ಈ ಗ್ರಂಥಿಗಳು, ಕಂಬಳಿ ಹುಳುವಿನಲ್ಲಿ ಒಣಗಿ ಹೋಗುತ್ತವೆ ಎಂಬುದನ್ನು ಗಮನಿಸಿದ.

ಆಗ ಅವನಿಗೊಂದು ಯೋಚನೆಯು ಹೊಳೆಯಿತು. ಈ ಗ್ರಂಥಿಗಳು ಶುಷ್ಕವಾಗುವುದರಿಂದ ಕಂಬಳಿ ಹುಳುವು ಮುಂದಿನ ಹಂತವಾದ ಪ್ಯೂಪಾ ಸ್ಥಿತಿಗೆ ಮುಟ್ಟುತ್ತದೆ. ಮುಸಲಾ ಈ ಗ್ರಂಥಿಗಳ ಸಾರವನ್ನು ಕಂಬಳಿ ಹುಳುವಿಗೆ ಒದಗಿಸಿದರೆ, ಕಂಬಳಿ ಹುಳುವಾಗಿಯೇ ಬೆಳೆಯುತ್ತದೆಯೋ ? ಎನ್ನುವ ಕುತೂಹಲವು ಅವನನ್ನು ಕಾಡತೊಡಗಿತು.

ಎಳೆಯ ಕಂಬಳಿ ಹುಳಗಳಿಂದ Corpora Allata ಗ್ರಂಥಿಗಳನ್ನು ಬಿಡಿಸಿ, ಹೊರವಾಗಿ ಬೆಳೆದಿದ್ದ ಕಂಬಳಿ ಹುಳುಗಳಿಗೆ ಕಸಿ ಮಾಡಿದ. ಏನಾಶ್ಚರ್ಯ ! ಅಂತಹ ಕಂಬಳಿ ಹುಳುಗಳು ರಾಕ್ಷಸ ಕಂಬಳಿ ಹುಳುಗಳಂತೆ ಬೆಳೆಯ ತೊಡಗಿದುವೇ ಹೊರತು, ಪ್ಯೂಪಾ ಹಂತಕ್ಕೆ ಮುಂದುವರಿಯಲೇ ಇಲ್ಲ. ಆಹಾ! ಎಂದುಕೊಂಡಿರಬೇಕು ಅವ, ಏಕೆಂದರೆ ಇನ್ನೊಂದು ಪ್ರಯೋಗ ವನ್ನು ನಂತರ ನಡೆಸಿದ. ಎಳೆಯ ಕಂಬಳಿ ಹುಳುಗಳವೆ ಂದುಳಿನಿಂದ, ಆ ಗ್ರಂಥಿಗಳನ್ನು ಹೊರ ತೆಗೆದ. ಆ ಮೇಲೆ ಅಂತಹ ಪುಟ್ಟ ಕಂಬಳಿ ಹುಳುಗಳು, ಅರ್ಧಂಬರ್ಧ ಬೆಳೆದ, ಕುಬ್ಜ ಚಿಟ್ಟೆ ಹುಳುಗಳಾಗಿ ಪರಿವರ್ತನೆಯನ್ನು ಹೊಂದಿದುವು.

ಇದೇ ರೀತಿಯ ಪರೀಕ್ಷಾ ಪ್ರಯೋಗವನ್ನು ಬ್ರಿಟನ್ನಿನಲ್ಲಿ ಪ್ರೊಫೆಸರ್ ವಿಗಲ್ಸ್‌ವರ್ತ್ (Prof. Wigglesworth) ಎಂಬ ಸುಪ್ರಸಿದ್ಧ ವಿಜ್ಞಾನಿಯು ರೇಷ್ಮೆ ಹುಳುಗಳ ಮೇಲೆ ನಡೆಸುತ್ತಿದ್ದ. 1936ರಲ್ಲಿ ಅವ ತನ್ನ ಪರೀಕ್ಷಾ ಪ್ರಯೋಗಗಳ ಫಲಿತಾಂಶವನ್ನು ಪ್ರಕಟಿಸಿದ.

ರೇಷ್ಮೆ ಹುಳುಗಳ ಒಂದು ಗೋತ್ರದವನ್ನು ಅವನು ಪರೀಕ್ಷಿಸ ತೊಡಗಿದ್ದ. ಸೆಕ್ರೊಪಿಯಾ (Cecropia) ಎಂಬುದೇ ಆ ರೇಷ್ಮೆ ಹುಳುಗಳ ಪಂಗಡದ ಹೆಸರು. ಗಂಡು ರೇಷ್ಮೆ ಹುಳುಗಳ ಹೊಟ್ಟೆಯಲ್ಲಿ ಶೇಖರವಾಗಿರುವ ಒಂದು ಹಾರ್ಮೋನು, ಕಂಬಳಿ ಹುಳುವಿನ ಹಂತದಿಂದ ಪ್ಯೂಪಾ ಹಂತಕ್ಕೆ ಮುನ್ನಡೆಯುವ ಸಮಯದಲ್ಲಿ, ಇಲ್ಲವಾಗುತ್ತದೆ ಎಂಬುದನ್ನು ಗಮನಿಸಿದ. ಈ ಹಾರ್ಮೋನನ್ನು ಗಂಡು ರೇಷ್ಮೆ ಹುಳುಗಳ ಹೊಟ್ಟೆಯಿಂದ ಪ್ರತ್ಯೇಕಿಸಿ

ಶೇಖರಿಸಿದ. ಬಲಿತ ಕಂಬಳಿ ಹುಳುಗಳಿಗೆ ಈ ಹಾರ್ಮೋನನ್ನು ಲೇಪಿಸಿದ. ಅಂತಹ ರೇಷ್ಮೆ ಕಂಬಳಿ ಹುಳುಗಳು, ರಾಕ್ಷಸ ಕಂಬಳಿ ಹುಳುಗಳಾದುವು. ಪ್ಯೂಪಾ ಹಂತಕ್ಕೆ ಮುಂದುವರಿಯಲೂ ಇಲ್ಲ. ರೇಷ್ಮೆ ಪತಂಗವೂ ಆಗಲಿಲ್ಲ.

ಈ ಹಾರ್ಮೋನನ್ನು "Peter Pan Hormone" ಎಂದವ ಹೆಸರಿಸಿದ. ಇದನ್ನು ನಾವು "ಚಿರಂಜೀವಿ ಹಾರ್ಮೋನು" ಎಂದು ಕರೆಯಲು ಅಡ್ಡಿಯಿಲ್ಲ. Peter Pan ಎಂದೂ ಮುಪ್ಪಾಗದ, ಗ್ರೀಕ್ ಕಲ್ಪನೆಯ, ಚಿರಂಜೀವಿ. ಚಿರಂಜೀವಿಯು ಎಂದೆಂದೂ ಚಿರಂಜೀವಿಯಾಗಿಯೇ ಎಳೆ ಪ್ರಾಯದಿಂದಿರುವುದರಿಂದ, ಈ ಹೆಸರೂ ಸೂಕ್ತ.

ಕಾರ್ಪೊರೀರ ಅಲ್ಲಾಟದ ರಸವೂ, ರೇಷ್ಮೆ ಗಂಡು ಹುಳುವಿನ ಹೊಟ್ಟೆಯಲ್ಲಿರುವ ಚಿರಂಜೀವಿ ಹಾರ್ಮೋನು : ಇವೆರಡೂ ಒಂದೇ ಗೋತ್ರದ ಅವಳಿ ಜವಳಿಗಳು, ಎನ್ನಬಹುದು !!

ಕಾಲದ ದೃಷ್ಟಿಯಿಂದ ಚಿರಂಜೀವಿ ಅಥವಾ Peter Pan ಹಾರ್ಮೋನಿನ ಪರಿಣಾಮವನ್ನು ತಿಳಿಯೋಣ.

ಮೊಟ್ಟೆ, ನಂತರ ಕಂಬಳಿ ಹುಳು. ಈ ಎರಡು ಒಂದರ ನಂತರ ಇನ್ನೊಂದು ಸ್ವಾಭಾವಿಕವಾಗಿ, ಕ್ರಮವಾಗಿ ಆಗುವ ಘಟನೆಗಳು. ಕಂಬಳಿ ಹುಳು ಮತ್ತು ಪ್ಯೂಪಾ ಕೂಡ ಇನ್ನೆರಡು ಒಂದಾದಮೇಲೊಂದು ಆಗುವ ಕ್ರಮ ಘಟನೆಗಳು. ಪ್ಯೂಪಾ ಮತ್ತು ಪತಂಗ ಅಥವಾ ಚಿಟ್ಟೆ ಹುಳು ಇವೆರಡೂ ಕೂಡ ಒಂದಾದ ಮೇಲೊಂದು ಆಗುವ ಘಟನೆಗಳು. ಈ ಘಟನೆಗಳ ಅಂತರವೇ ಕಾಲ. ಈ ಎಲ್ಲ ಘಟನೆಗಳೂ ಒಂದಾದ ಮೇಲೊಂದು, ಸಕ್ರಮವಾಗಿ, ಎಂದಿನಂತೆ, ನಡೆಯುತ್ತಿದ್ದರೆ, ಆಗ ಕಾಲವು ಒಂದೇ ಗತಿಯಲ್ಲಿ ಅಥವಾ ವೇಗದಲ್ಲಿ ಹರಿಯುತ್ತಿದೆ ಎನ್ನಬಹುದು.

ಆದರೆ ಚಿರಂಜೀವಿ ಹಾರ್ಮೋನನ್ನು ಒದಗಿಸಿದಾಗ, ಕಂಬಳಿ ಹುಳುವು, ರಾಕ್ಷಸ ಕಂಬಳಿ ಹುಳುವಾಗುತ್ತದೆಯೇ ವಿನಹಾ, ಪ್ಯೂಪಾ ಆಗುವುದೇ ಇಲ್ಲ. ಅಂದರೆ ಕಂಬಳಿ ಹುಳುವಿನ ದೃಷ್ಟಿಯಿಂದ, ಅದು ಚಿರಂಜೀವಿಯಾಯಿತು. ಅದರ "ಕಾಲ"ವು ನಿಂತೇ ಹೋಯಿತು. ಏಕೆಂದರೆ ಮುಂದಿನ ಸಕ್ರಮವಾದ, ಸ್ವಾಭಾವಿಕ, ಹಂತವನ್ನು ಅದು ಸಾಧಿಸಲಾಗಲಿಲ್ಲ.

ಅಂದರೆ ಮಾನವ ದೇಹದಲ್ಲಿ ನಡೆಯುವ, ವಿಕಾಸೆಯ ನಿದರ್ಶನದ ಪ್ರತಿಬಿಂಬವನ್ನು ಮೆದುಳು ಅಭಿವೃದ್ಧಿ ಹೊಂದದೇ ಇರುವ, ಕೀಟಗಳಲ್ಲಿಯೂ ಸಾಕ್ಷಾತ್ ಕಾಣಬಹುದು.

ಇದೇ ನಿದರ್ಶನವನ್ನು ಕಂಬಳಿ ಹುಳುವಿನ ದೃಷ್ಟಿಯಿಂದ ಕಾಲವನ್ನು ಮತ್ತೊಂದು ಕೋನದಿಂದ ಪರಿಶೀಲಿಸೋಣ.

ಚಿರಂಜೀವಿ ಹಾರ್ಮೋನು ಸಾಕಷ್ಟು ದೊರೆತರೆ ಕಂಬಳಿ ಹುಳುವು ರಾಕ್ಷಸನಂತೆ ಬೆಳೆಯುತ್ತದೆ. ಶೈಶವಾವಸ್ಥೆಯಲ್ಲಿ ಮಾನವ ಮಗುವು ಅತಿ ಶೀಘ್ರವಾಗಿ ಬೆಳೆಯುವಂತೆ ಅಂದರೆ ಅದರ Spatial Growth ಬಹಳಷ್ಟು ಶೀಘ್ರ. ಕಾಲವೂ ಅವಸರ ಅವಸರವಾಗಿ ಹರಿಯುತ್ತದೆ. ಚಿರಂಜೀವಿ ಹಾರ್ಮೋನು ಇರದಂತೆ. ಕಾರ್ಪೊರಾ ಅಲ್ಲಾಟವನ್ನು ತೆಗೆದು ಹಾಕಿದರೆ, ಕಂಬಳಿ ಹುಳುವು ಅತಿ ಸಣ್ಣ, ಮತ್ತು ಅವಲಕ್ಷಣ ಚಿಟ್ಟೆಯಾಗುತ್ತದೆ. ಕಾಲದ ದೃಷ್ಟಿಯಿಂದ Spatial Growth ಮಾನವ ಹಣ್ಣು ಹಣ್ಣು ಮುದುಕರಲ್ಲಿರುವಂತೆ, ಬಹಳ ನಿಧಾನ, ಕಾಲದ ಗತಿಯೂ ನಿಧಾನ !

## 1. ಕೀಟಗಳಲ್ಲಿ ಕಾಲವನ್ನು ಹಿಂತಿರುಗಿಸಬಹುದೇ ?

ಕೀಟಗಳು ಕಾಯಕಲ್ಪವನ್ನು ಮಾಡಿಕೊಳ್ಳಲು, ಮಾನವನಂತೆ ಪ್ರಯತ್ನಿಸುತ್ತವೆಯೋ ? ಈಗಿನ ವೈಜ್ಞಾನಿಕ ತಿಳಿವಳಿಕೆಯ ಪ್ರಕಾರ ಇಲ್ಲ. ಏಕೆಂದರೆ ಮಾನವರಲ್ಲಿ ಕಾಯಕಲ್ಪವನ್ನು ಮಾಡಿಕೊಳ್ಳಲು ಇಚ್ಛಿಸುವರಾರು ? ರಾಜ ಮಹಾರಾಜರುಗಳು, ಸಮಾಜದ ಶ್ರೀಮಂತ ಗಣ್ಯವ್ಯಕ್ತಿಗಳು, ಸಮಾಜದ ಬಡವರು ಚಿರಕಾಲ ಬಾಳಲು ಅಷ್ಟಾಗಿ ಹಂಬಲಿಸುವುದಿಲ್ಲ. ತಾವೇ ಬಹುಕಾಲ ಬದುಕಿ ಏನನ್ನೋ ತಮ್ಮ ಜ್ಞಾನ, ಅಧಿಕಾರ ಮತ್ತು ಅನುಭವದಿಂದ, ಕಡಿದು ಕಟ್ಟಿ ಹಾಕಿ ಸಾಧಿಸುತ್ತೇವೆ ಎಂಬ ಭ್ರಮೆಯು ಶ್ರೀಮಂತರಿಗೆ, ಗಣ್ಯರಿಗೆ, ಮತ್ತು ಆಳರಸರು ಅಥವಾ ಆಳುವ ಸಚಿವರಿಗೆ ಇರುತ್ತದೆ. ಆ ಕಾರಣದಿಂದ ಅವರುಗಳು ಕಾಯ ಕಲ್ಪದ ಹೆಬ್ಬಯಕೆಯನ್ನು ಹೊಂದಿರುತ್ತಾರೆ. ಆದರೆ ಬಡವರು ತಮ್ಮ ಬದುಕಿನಲ್ಲೇ ಕಷ್ಟವಿರುವಾಗ, ನಮ್ಮ ಕಷ್ಟ ನಮ್ಮ ಮಕ್ಕಳಿಗೆ ಇರದಿರಲಿ ಎಂದು ಬಾಳನ್ನು ನಡೆಸುತ್ತಾರೆ. ತಮ್ಮ ಬಾಳ ಆಸೆಗಳನ್ನೆಲ್ಲಾ ಮಕ್ಕಳ ಮೂಲಕ ಈಡೇರಿಸಿಕೊಳ್ಳುವ ಮನಸ್ಸಿನ

ಆಳ ಬಯಕೆ ಅವರದು. ತೋರ ಮನಸ್ಸಿನಲ್ಲಿ ಇದೆಲ್ಲವೂ ಶ್ರೀಮಂತರಿಗಾಗಲೀ, ಬಡವರಿಗಾಗಲೀ, ಸ್ಪಷ್ಟವಾಗಿ ಕಾಣಿಸದೇ ಇರಬಹುದು. ಆದರೆ ಆಳ ಮನಸ್ಸಿನಲ್ಲಿ ಇದ್ದೇ ಇರುತ್ತದೆ. ಶ್ರೀಮಂತರಿಗೆ ಮಕ್ಕಳು ಪ್ರಕೃತಿ ಸ್ವಾಭಾವಿಕವಾಗಿ ವಿರಳ. ಬಡವರಿಗಾದರೋ ಹೇರಳ.

ವನ್ಯ ಜೀವಿಗಳಲ್ಲೂ ಇದರ ನೀತಿ ರೀತಿಯನ್ನು ಕಾಣಬಹುದು. ರಕ್ಷಣೆಯನ್ನು ತಮ್ಮ ಶಕ್ತಿಯಿಂದಲೇ ಸಾಧಿಸಿಕೊಳ್ಳುವ, "ಸ್ವಯಂಮೇವ ಮೃಗೇಂದ್ರ" ಗಳು, ಎರಡು ಮೂರು ಮಕ್ಕಳನ್ನು ಆಗೊಮ್ಮೆ ಈಗೊಮ್ಮೆ ಪಡೆಯುತ್ತವೆ. ಆದರೆ ಸ್ವಯಂ ರಕ್ಷಣೆಯನ್ನು ಸಾಧಿಸಲಾಗದ ಜಿಂಕೆ, ಮೊಲ, ಇತ್ಯಾದಿಗಳು ಬಹು ಸಂಖ್ಯೆಯಲ್ಲಿ ಮಕ್ಕಳನ್ನು ಪಡೆಯುತ್ತವೆ. ಹಾಗಾಗುವಾಗ ಹತ್ತು ಮಕ್ಕಳಲ್ಲಿ ಒಂದು ನಾಲ್ಕೋ ಆರೋ ಹೋದರೂ ಪರವಾಗಿಲ್ಲ; ವಂಶ ವೃಕ್ಷವು ಬೆಳೆಯುತ್ತದೆ; ಎನ್ನುವ ಅಗೋಚರ ಅರಿವಿರುತ್ತಿರುತ್ತದೆ. ಮಾನವ ಸಮಾಜದಲ್ಲಿನ ಬಡವರು, ಕಾಡು ಜೀವಿಗಳ ಹೊಲ ಜಿಂಕೆಗಳಂತೆ, ಮನೆ ತುಂಬಾ ಮಕ್ಕಳಿದ್ದರೆ ಮತ್ತೂ ಒಳ್ಳೇದು ಎಂಬ ಪುರಾತನ ನೀತಿಯಂತೆ.

ಕೀಟಗಳಲ್ಲಿ ಈ ಪುರಾತನ ನಿಯಮವು ಅವಿಶ್ರಾಂತವಾಗಿ ಆಚರಿಸಲ್ಪಡುತ್ತಿದೆ. ಆದ ಕಾರಣ ಕೀಟಗಳಲ್ಲಿ ಕಾಯ ಕಲ್ಪದ ಯೋಚನೆಯೇ ಇಲ್ಲ. ಕಾಯ ಒಡೆದು ಬಹುಕಾಯಗಳಾಗುವ ಪುರಾತನ ನಿಯಮವೇ ಶಾಶ್ವತ-ಮನಸ್ಸನ್ನು ಮನಸ್ಸು ಮೆಟ್ಟಿ ಅತಿಕ್ರಮಿಸುವ ತನಕ.

ಇದೆಲ್ಲಾ ಒಂದು ದೃಷ್ಟಿಯಿಂದ, ಕಾಲವು ಮುಂದು ಹರಿಯುವ ದೃಷ್ಟಿಯಿಂದ.

ಆದರೆ ಪರಿವರ್ತನೆ ಅಥವಾ Meta-Morphosis ಆಗುವ ಕೀಟಗಳನ್ನು ಮತ್ತೆ ಕಾಲದ ದೃಷ್ಟಿಯಿಂದ ಪರಿಶೀಲಿಸೋಣ.

"Imago" ಎಂಬ ಹೆಸರನ್ನು ಸಂಪೂರ್ಣ ಅಭಿವೃದ್ಧಿ ಹೊಂದಿದ ಪತಂಗದ ಹುಳುವಿಗೂ ಅನ್ವಯಿಸುತ್ತಾರೆ. Imaginal Disks ಎಂಬುವು ಕಂಬಳಿ ಹುಳುವು ಪ್ಯೂಪಾ ಆಗುವ, ಮತ್ತು ಪ್ಯೂಪಾ ಆದಮೇಲೂ ಕಾಣಿಸಿಕೊಳ್ಳುವ ಸೆಲ್ಲುಗಳ ಸಮೂಹ ಇವೆಲ್ಲವೂ ಕಂಬಳಿ ಹುಳುವಿನ ದೇಹದ ಬೆಳೆದ ಭಾಗಗಳು. ಆದರೆ ಪ್ಯೂಪಾ ಆಗುವ ಸ್ಥಿತಿಯಲ್ಲಿ ಈ ಸೆಲ್ಲುಗಳು

ಅಭಿವೃದ್ಧಿ ಹೊಂದಿದ ತಮ್ಮ ಸ್ಥಿತಿಯಿಂದ, ಪ್ರಾರಂಭದ ದೆಸೆಯಲ್ಲಿದ್ದ ಸ್ಥಿತಿಗೆ ಹಿಂತಿರುಗುತ್ತವೆ. ಅನಂತರ ಬೆಳೆಯುವಾಗ ಪತಂಗದ ಅಥವಾ ಚಿಟ್ಟೆ ಹುಳುವಿನ ದೇಹಕ್ಕೆ ಅನುಗುಣವಾಗಿ ಬೆಳೆಯತೊಡಗುತ್ತವೆ. ದ್ವಿಜ ರಾಗುತ್ತವೆ. ಅಂದರೆ ಎರಡು ಬಾರಿ ಹುಟ್ಟಿದಂತೆ.

ಗೂಡು ಕಟ್ಟಿಕೊಂಡಿರುವ ಪ್ಯೂಪಾದಲ್ಲಿ ಈ ಪರಿವರ್ತನೆಗಳು ನಡೆ ಯುತ್ತಿರುತ್ತವೆ. ಗೂಡನ್ನು ಹರಿದು ನೋಡಿದರೆ ಗಟ್ಟಿ ಪಾಯಸ ಇದ್ದಂತಿರುವ ವಸ್ತುವಿರುತ್ತದೆ. ಕಂಬಳಿ ಹುಳುವಿನ ಅಂಗಾಂಗಗಳೆಲ್ಲವೂ ಆರಂಭದ ಮೂಲ ಸ್ಥಿತಿಗೆ ಹಿಂತಿರುಗಿರುತ್ತದೆ. ಹಾಗೂ ಚಿಟ್ಟೆ ಹುಳುವಿನ ಅಂಗಗಳ ಪ್ರಾರಂಭವೂ ಆಗಿರುತ್ತದೆ.

ಕಂಬಳಿಹುಳುವಿನ ಅಂಗಗಳು ಕರಗಿ ಮೂಲಸ್ಥಿತಿಗೆ ಪರಿವರ್ತನೆ ಹೊಂದುವುದು; ಮಾನವರಲ್ಲಿ ಕ್ಯಾನ್ಸರ್ ಸೆಲ್ಲುಗಳಾಗುವುದು, ಇವೆರಡೂ "ಕಾಲ"ವು ಹಿಂತಿರುಗಿ ಹರಿದಂತೆಯೇ, ಅಂದರೆ ಕೀಟಗಳ ಅಂಗಗಳಲ್ಲಿ ಕಾಲವು ಹಿಂತಿರುಗಿ ಹರಿಯುವುದನ್ನು ಕಾಣಬಹುದು. ಕೀಟವೇ, ಕಾಯಕಲ್ಪದ ಯೋಚನೆಯನ್ನು ಮಾಡದಿದ್ದರೂ, ಅದರ ಅಂಗಗಳು ಕೆಲವೊಮ್ಮೆ ಪರಿವರ್ತ ನೆಯ ಧ್ಯೇಯದಿಂದ ಮೊದಲ ಸ್ಥಿತಿಗೆ ಹಿಂತಿರುಗಿ, ಅಲ್ಲಿಂದ ಹೊಸ ಸ್ಥಿತಿಗೆ ಬೆಳೆ ಯಲಾರಂಭಿಸುತ್ತದೆ. ಅವುಗಳ ವೈಯಕ್ತಿಕ ಕಾಲವು ಹಿಂದಕ್ಕೂ ಹರಿಯ ಬಲ್ಲುದು ಎಂಬುದಕ್ಕೆ ಸಾಕ್ಷಿಯಾಗಿವೆ.

## 2. ಏಕಾಣು ಜೀವಿಗಳು ಮತ್ತು ಕಾಲ

ಮಾನವ ದೇಹ ಮತ್ತು ಕೀಟಗಳು, ಇವುಗಳಲ್ಲಿ ಸಹಸ್ರಾರು ಸೆಲ್ಲುಗಳಿ ರುತ್ತವೆ, ಕಾಲದ ದೃಷ್ಟಿಯಿಂದ ಇವುಗಳ ಬೆಳವಣಿಗೆ, ಪರಿವರ್ತನೆ, ಇತ್ಯಾದಿ ಗಳನ್ನು ಪರಿಶೀಲಿಸಿದೆವು. ಕೆಲವು ಏಕಾಣು ಜೀವಿಗಳ, ಒಂದೇ ಸೆಲ್ ಇರುವ ಜೀವಿಗಳ ಬೆಳವಣಿಗೆ ಮತ್ತು ನಡತೆಯನ್ನು "ಕಾಲ"ದ ದೃಷ್ಟಿಯಿಂದ ಪರಿಶೀಲಿಸುವ.

ಮಾನವರಲ್ಲಿ ಆಮಶಂಕೆ (Dysentery) ಎನ್ನುವ ಬೇನೆಯು ಸಾಕಷ್ಟು ಕಾಡುತ್ತದೆ. Entamoebae Histolytica ಎಂಬ ಅಮೀಬಾ ಗೋತ್ರದ ಒಂದು ಏಕಾಣು ಜೀವಿಯು ಆಮಶಂಕೆ ಬೇನೆಗೆ ಕಾರಣ ಈ ಅಮೀಬಾವು,

ಒಂದೂ ಒಡೆದು ಎರಡು, ಎರಡು ಒಡೆದು ನಾಲ್ಕು. ಹೀಗೆ ವಂಶವೃದ್ಧಿಯನ್ನು ಇತರ ಏಕಾಣುಜೀವಿಗಳಂತೆ ಮಾಡಿಕೊಳ್ಳುತ್ತದೆ. ಅದು ಬದುಕಿ ಬಾಳುವ ಪರಿಸರದಲ್ಲಿ, ಅಂದರೆ ಮನುಷ್ಯನ ದೊಡ್ಡ ಕರುಳೇ ಆಯಿತು. ಇತರ ಸ್ಥಳಗಳೂ ಆಗಬಹುದು, - ಅಲ್ಲಿ ಅದಕ್ಕೆ ವಿರೋಧವಾದ ಪರಿಸ್ಥಿತಿಯುಂಟಾದರೆ, ಆಗ ಅದು ಮೈಯ ಹೊರಪೊರೆಯನ್ನು ಗಟ್ಟಿಗಡತವಾಗಿ ಮಾಡಿಕೊಂಡು, ಸಾಮಾನ್ಯ ಚಟುವಟಿಕೆಗಳನ್ನು ಸಂಪೂರ್ಣ ನಿಲ್ಲಿಸಿ, cyst ಆಗಿ ಪರಿವರ್ತನೆಯನ್ನು ಹೊಂದುತ್ತದೆ. cystsಗಳು ಒಣಗಿದ ಬೀಜವಿದ್ದಂತೆ. ಎಷ್ಟುಕಾಲ ಬೇಕಾದರೂ ಆ ಸ್ಥಿತಿಯಲ್ಲಿ ಉಳಿಯಲು ಸಾಧ್ಯ. ಅನುಕೂಲವಾದ ಪರಿಸರವು ದೊರಕಿದಾಗ ಅದು ಪುನಃ ತನ್ನ ಸ್ವಾಭಾವಿಕ ಬಾಳನ್ನು ನಡಸಲಾರಂಭಿಸುತ್ತದೆ. ಸಿಸ್ಟ್ ಪರಿಸ್ಥಿತಿಯಲ್ಲಿ ಅಮೀಬಾದ ವೈಯಕ್ತಿಕ ಕಾಲವು ಸ್ತಬ್ಧವಾಯಿತು ಎನ್ನಬೇಕು. ಇಂತಹ ಸಿಸ್ಟ್ ರೂಪದ ಅಮೀಬಾವು ಮಾನವನ ಲಿವರ್ ಮತ್ತು ಕರುಳಿನ ಪದರಗಳಲ್ಲಿ ಬಹುಕಾಲ ಸ್ತಬ್ಧವಾಗಿರುತ್ತದೆ. ಕಾರಣಾಂತರದಿಂದ ಕೆರಳಿ ತಿರುಗಿ ಸ್ವಾಭಾವಿಕ ಸ್ಥಿತಿಗೆ ಬಂದು ಬೇನೆಯನ್ನು ಮರುಕಳಿಸುತ್ತದೆ.

ಮಾನವನನ್ನು ನಮ್ಮ ದೇಶದಲ್ಲಿ ಕಾಡುವ ಇನ್ನೊಂದು ಬೇನೆ, ಮಲೇರಿಯಾ. ಇದಕ್ಕೆ ಕಾರಣವಾದುದೂ ಏಕಾಣು ಜೀವಿಯೇ. ಮೂರರ ಛಳಿ, ನಾಲ್ಕರ ಛಳಿ ಇತ್ಯಾದಿಗಳು ಮಲೇರಿಯಾ ಏಕಾಣುಜೀವಿಯ ಸೋದರ ರೂಪಗಳು. ಮಲೇರಿಯಾ ಪ್ಯಾರಸೈಟ್ ಕೂಡ ಕೆಲವೊಮ್ಮೆ ಲಿವರ್ ಇನಲ್ಲಿ ಹುದುಗಿಕೊಂಡು, ಹತ್ತಿಪ್ಪತ್ತು ವರ್ಷಗಳ ಕಾಲ ಕೂಡ ತೆಪ್ಪಗಿರುತ್ತದೆ. ಸಮಾಧಿ ಸ್ಥಿತಿಯಲ್ಲಿರುತ್ತದೆ ಎನ್ನಲೂ ಬಹುದು. ಕಾರಣಾಂತರದಿಂದ, ಪರಿಸರವು ಅನುಕೂಲವಾದಾಗ ತಿರುಗಿ ಯಥಾಸ್ಥಿತಿಗೆ ಬಂದು, ಛಳಿ ಜ್ವರವನ್ನು ಉಂಟುಮಾಡುತ್ತದೆ. Short ಎಂಬ ವೈದ್ಯ ವಿಜ್ಞಾನಿಯು ಮಲೇರಿಯಾದ ಈ ವರ್ತನೆಯನ್ನು ವಿಸ್ತಾರವಾಗಿ ಸಾಕ್ಷ್ಯಪೂರ್ಣವಾಗಿ ವಿವರಿಸಿದ.

ಏಕಾಣು ಜೀವಿಗಳಲ್ಲಿ, ಅಮೀಬಾದ ನಂತರ ಪ್ಯಾರಮೀಸಿಯಂ ಎಂಬುದನ್ನು ವಿದ್ಯಾರ್ಥಿಗಳು ಅಭ್ಯಾಸ ಮಾಡುತ್ತಾರೆ. ಪಾಪಾಸಿನಂತಿರುವ ಈ ಏಕಾಣು ಜೀವಿಗೆ ಬಾಯಿ ಎನ್ನಬಹುದಾದ ಆಹಾರ ಸೇವಿಸುವ ದ್ವಾರವಿದೆ. Slipper Animalcule ಎಂದೂ ಇದನ್ನು ಕರೆಯುತ್ತಾರೆ. ಒಂದು ಒಡೆದು

ಎರಡಾಗಿ ಎರಡು ನಾಲ್ಕಾಗಿ, ಈ ರೀತಿ ಇದೂ ವಂಶವನ್ನು ಬೆಳೆಸುತ್ತದೆ. ಆದರೆ ನೂರಾರುಬಾರಿ ಹೀಗೆ ದೇಹವನ್ನೇ ಎರಡನ್ನಾಗಿ ಮಾಡಿ ಮಾಡಿ, ಇದಕ್ಕೂ ಬೇಸರ ಬರುತ್ತದೆಯೇನೋ ? ನಿರುತ್ಸಾಹಿಯಾಗಿ ಚಟುವಟಿಕೆಗಳನ್ನೆಲ್ಲಾ ಬಹಳಷ್ಟು ನಿಲ್ಲಿಸಿ; ಮೂಲೆ ಹಿಡಿಯುತ್ತದೆ, ಮಾನವ ಮುದುಕರಂತೆ ಇವನ್ನು Clone ಎನ್ನುತ್ತಾರೆ. ಇಂತಹವೆರಡು ಮುದಿಯಾದ ಪ್ಯಾರಮಿಾಸಿಯಮ್ಮಗಳು ಒಂದರ ಬಳಿಗೊಂದು ನಿಧಾನವಾಗಿ ಬಂದು, ಜತೆಗೂಡುತ್ತವೆ. ಒಂದು ಒಂದು ಒಡಲು ಒಡಲು ಕೂಡಿಕೊಂಡು ಒಂದಾಗುತ್ತದೆ. ಪರಿಣಮಿಸುವ ಪ್ಯಾರ್‌ಮಿಾಸಿಯಂ ಅತ್ಯುತ್ಸಾಹದಿಂದ ಮೊದಲಿನಂತೆ ಪ್ಯಾರಮಿಾಸಿಯಂ ಒಡಲೊಡೆದು ಎರಡಾಗಿ, ಎರಡು ನಾಲ್ಕಾಗಿ, ಸ್ವಾಭಾವಿಕವಾದ ಜೀವನವನ್ನು ನಡಸಲಾರಂಭಿಸುತ್ತದೆ.

ಮುಪ್ಪು ಬಂದಂತೆ ಮೂಲೆ ಪಾಡಾದ ಪ್ಯಾರಿಮಿಾಸಿಯಂ, ಇನ್ನೊಂದರೊಡನೆ ಕೂಡಿಕೊಂಡ ಮೇಲೆ ಕಾಯಕಲ್ಪವಾದಂತಾಗಿ, ಅತ್ಯುತ್ಸಾಹದಿಂದ ಬಾಳನ್ನು ಪುನಃ ಹಿಂದಿನಂತೆ ನಡಸುವುದು; ಕಾಲವನ್ನು ಹಿಂತಿರುಗಿಸಿದಂತೆಯೇ. ಮಾನವನು ತನ್ನ ದೇಹದಲ್ಲಿ ಇನ್ನೂ ಯಶಸ್ವಿಯಾಗಿ ಸಾಧಿಸದೆ ಇರುವ ಕಾಯಕಲ್ಪವನ್ನು ಪ್ಯಾರಮಿಾಸಿಯಂ ಸಹಜವಾಗಿ ನಡಸುತ್ತದೆ.

ಈ ಕಾರಣದಿಂದಲೇ, ಮುಪ್ಪು ಎಂದರೆ ಏನು ? ಅದನ್ನು ಪ್ಯಾರಮಿಾಸಿಯಂ ಇನಂತೆ ಕಾಯಕಲ್ಪ ಚಿಕಿತ್ಸೆಯಿಂದ ನಿವಾರಿರುವುದು ಹೇಗೆ ? ಇತ್ಯಾದಿ ಸಮಸ್ಯೆಗಳ ಪರಿಹಾರವನ್ನು ಕಂಡುಹಿಡಿಯುವ ವೈಜ್ಞಾನಿಕರು ಪ್ಯಾರಮಿಾಸಿಯಂ ಅನ್ನು ಆಳವಾಗಿ ಅಭ್ಯಾಸಮಾಡಲು ತೊಡಗಿದ್ದಾರೆ. ಮುಪ್ಪು, ಅದರ ಕಾರಣಗಳು, ನಿವಾರಣಾ ಕ್ರಮಗಳು, ಇವನ್ನು ವ್ಯಾಸಂಗ ಮಾಡುವ ವಿಜ್ಞಾನಿಗಳಿಗೆ ಪ್ಯಾರಮಿಾಸಿಯಂ ಆರಾಧ್ಯ ದೇವರು ! ಏಕೆಂದರೆ ಪ್ಯಾರಮಿಾಸಿಯಂ ವೈಯಕ್ತಿಕ ಕಾಲವನ್ನು ಯಶಸ್ವಿಯಾಗಿ ಹಿಂತಿರುಗಿಸುತ್ತದೆ.

## 3. ಸಸ್ಯಗಳು ಮತ್ತು ಕಾಲ

ಸಸ್ಯ ಜೀವನದಲ್ಲಿ "ಕಾಲ" ಅವಸರ ಪಡುವುದು; ನಿಧಾನಿಸುವುದು, ಸ್ತಬ್ಧವಾಗುವುದು ಮತ್ತು ಹಿಂತಿರುಗುವುದು. ಇವು ಸಾಧ್ಯವೇ ಇಲ್ಲವೇ ಎಂಬುದನ್ನು ಪರಿಶೀಲಿಸೋಣ. ಸಸ್ಯಗಳು ಸ್ಥಾವರ, ಇದ್ದಲ್ಲೇ ಇದ್ದು. ಅಗತ್ಯ

ವಾದುದನ್ನು ಪಾದಗಳಿಂದಲೂ ಅಂದರೆ ಬೇರುಗಳಿಂದಲೂ ಹಾಗೂ ಬಾಹು ಬೆರಳುಗಳಂತಿರುವ ಕೊಂಬೆ ಎಲೆಗಳಿಂದಲೂ ಪಡೆದು ಬಹುಕಾಲ ಬಾಳುತ್ತದೆ. ಇದಕ್ಕೆ ಪ್ರಾಣಿಗಳನ್ನು ಹೋಲಿಸಿದರೆ, ಪ್ರಾಣಿಗಳು ಜಂಗಮ. ನಿಂತೆಡೆಯಲ್ಲಿ ನಿಲ್ಲದೆ, ಊಟ ಮತ್ತು ಕೂಟಕ್ಕಾಗಿ ಅಲೆದಾಡುವ ಅಲೆಮಾರು ಜೀವಿಗಳು.

ಮೂಲಭೂತವಾದ ಈ ವ್ಯತ್ಯಾಸವಿರುವ, ಸಸ್ಯ ಜೀವಕ್ಕೂ, ಪ್ರಾಣಿ ಜೀವಕ್ಕೂ, "ಕಾಲ"ದ ದೃಷ್ಟಿಯಿಂದ ಹೋಲಿಕೆಯಿದೆಯೋ ? ಅಥವಾ ಘೋರ ವ್ಯತ್ಯಾಸವಿದೆಯೇ ? ನೋಡೋಣ.

ಒಂದು ಹಂತದ, ನಾವು ಸಾಮಾನ್ಯವಾಗಿ ಕಾಣುವ, ಗಿಡಮರಗಳ ಬಾಳನ್ನು ಪರಿಶೀಲಿಸುವ. "ಬೀಜ ವೃಕ್ಷ ನ್ಯಾಯ" ಎಂಬ ಪರಿಹರಿಸಲಾಗದ ಸಮಸ್ಯೆಯನ್ನು ಕೇಳಿದ್ದೇವೆ, ಈ ಪುರಾತನ ಸಮಸ್ಯೆಯ ವಿವರಗಳನ್ನು ಅರಿಯಲೆತ್ನಿಸುವ.

ಹೊರವಾದ ಮಾವಿನ ಮರವೊಂದು ವಿಜೃಂಭಿಸುತ್ತಿದೆ. ಅದರಲ್ಲಿ ಹೂವು ಗಳು ಕಾಣತೊಡಗಿವೆ, ಮುಂಗಾರಿಗೆ ಮುನ್ನ, ಸಂಕ್ರಾಂತಿ ಆದ ಮೇಲೆ. "ತಳಿತ ಮಾಮರನೇರಿ ಮೊರೆಯುವಂತೆ, ಗಂದರ್ವ ಗಾನದಂತೆ, ವೀಣೆಯನ್ನು ಸರಸ್ವತಿಯು ಮೀಟಿದಂತೆ" ದುಂಬಿಗಳು ಹೂ ಒಡೆದ ಮಾವಿನ ಮರವನ್ನು ಮುತ್ತುತ್ತವೆ; ಮುತ್ತಿಡುತ್ತವೆ.

ಇದರ ಅರ್ಥವೇನು ? ಇದರ ಧ್ಯೇಯವೇನು ? ಸ್ಥಾವರವಾದ ಹೂವಿನ ಕಣ್ಸೆಳೆವ ಪರಾಗಗಳ ಆಳದಲ್ಲಿ ಹುದುಗಿರುವ ಮಧುವು ದುಂಬಿಗಳನ್ನು ಆಕರ್ಷಿಸುತ್ತದೆ ; ಒತ್ತಾಯ ಪೂರ್ವಕವಾಗಿ Obsessional ಆಗಿ ಆಮಂತ್ರಿಸುತ್ತದೆ. ಜಂಗಮ ದುಂಬಿ, ಸಮಾಜ ಕಲ್ಯಾಣಕ್ಕಾಗಿ ತನ್ನ ಬಾಳನ್ನು ಮೀಸಲಿಟ್ಟ ಜೇನು ತುಂಬುವ ದುಂಬಿ. ಇದೂ ಹೂವುಗಳ ಪರಿಚಯವನ್ನು ದ್ರೌಪದಿಯಂತೆ ಪಡೆದು, ನಲಿಯುತ್ತ ಅಷ್ಟಾವಕ್ರದ ನೃತ್ಯದಂತೆ, ("Figure of Eight") ಕುಣಿಯುತ್ತ ಮಾಮರದ ಹೊಸ ಹೂವಿನ ಬಳಿಗೆ ಸೆಳೆಯಲ್ಪಡುತ್ತದೆ. ಇಂತಹಾ ಜೇನು ದುಂಬಿಯ ಕಾಲು, ಪಾದ ಮತ್ತು ಭವಿಷ್ಯದ ಬೆರಳುಗಳು, ಹಿಂದಿನ ಸಂಪರ್ಕದ ಕೆಸರಿನಿಂದ ತೋಯ್ದಿರುತ್ತದೆ. ಕಾಲಿಗೆ ಅಂಟಿದ ಈ ಕೆಸರುಗಳಲ್ಲಿ. ಬಾಳಭವಿಷ್ಯದ ಅಮೃತವು ಸೋಂಕಾಗಿರುತ್ತದೆ. ತಳಿತ ಮಾಮರದ ನವ್ಯ ಪುಷ್ಪಗಳ ಮೇಲೆ, ಮಧು ಮಧುರದ ಆಸೆಯಿಂದ, ಕೆಸರಿ

ಸೋಂಕಿನ ಕಾಲುಗಳನ್ನು ದುಂಬಿಯು ಇಟ್ಟು, ನೆಟ್ಟು ನಿಲ್ಲುತ್ತದೆ. ಮಧು ವನ್ನು ಹೀರುತ್ತದೆ. ಮಾಮರದ ಪುಷ್ಪಕ್ಕೆ ದುಂಬಿಯು ಕಾಲಕೆಸರೇ ಬಾಳಿನ ಅಮೃತ. ದುಂಬಿಯು ಕಾಲ ಕೆಸರಿನಿಂದ ತನ್ನ ವಂಶೋಭಿವೃದ್ಧಿಗೆ ಅತ್ಯಗತ್ಯ ವಾದ, ತನ್ನವರ, ವೀರ್ಯವನ್ನು ಕಣಕಣವಾಗಿ ಧೂಳು ಧೂಳಾಗಿ, ಪಡೆಯು ತ್ತದೆ. ಆ ರೀತಿಯಲ್ಲಿ ಪುಷ್ಪಗಳ ಅಂತರಾಳದಲ್ಲಿರುವ ಮಾಮರದ ಹೆಣ್ಣು ಅಂಶವು ಗರ್ಭವನ್ನು ಧರಿಸುತ್ತದೆ. ಕೆಲವು ಕಾಲದ ಮೇಲೆ ಮಾಮರದ ಕಾಯಿ ರೂಪು ಗೊಳ್ಳುತ್ತದೆ. ಕಾಯಿಯು ಸೂಕ್ತಕಾಲದಲ್ಲಿ ಹಣ್ಣಾಗುತ್ತದೆ. ಹಣ್ಣಿನ ಆಸೆ ಯಿಂದ ಪಕ್ಷಿಗಳು, ಕೋತಿಗಳು ಮತ್ತು ಮಾನವರು ಹಣ್ಣನ್ನು ಕಿತ್ತು ತಿಂದು ಓಟೆಯನ್ನು ಎಸೆಯುತ್ತವೆ. ಅಲ್ಲಿ ಪರಿಸರವು ಅನುಕೂಲವಾಗಿದ್ದರೆ, ಮಾವಿನ ಓಟೆಯ ಮೊಳಕೆ ಮೂಡಿ, ನಂತರ ಮರವಾಗಿ ಬೆಳೆಯುತ್ತದೆ

ಅಂದರೆ ಮಾವಿನ ಓಟೆ ಅಥವಾ ಬೀಜ, ನಂತರ ಗಿಡ ಮರ, ನಂತರ ಪುಷ್ಪಭರಿತವಾಗುವುದು, ಕಾಯಿ ಬಿಡುವುದು, ಹಣ್ಣಾಗುವುದು, ನಂತರ ಓಟೆ ಅಥವಾ ಬೀಜವು ಬಾಳಚಕ್ರವನ್ನು ಪುನಃ ಪ್ರಾರಂಭಿಸುವುದು : ಇವು ಒಂದರ ನಂತರ ಒಂದರಂತೆ ಕ್ರಮವಾಗಿ ನಡೆಯುವ ಘಟನೆಗಳು. ಇವೆಲ್ಲವೂ ಸ್ವಾಭಾ ವಿಕವಾಗಿ ನಡೆದರೆ ಕಾಲವು ಮುಂದುವರಿಯುತ್ತಿದೆ ಎನ್ನಬೇಕು,

ಆದರೆ ಮಾವಿನಕಾಯಿ ಓಟೆಯನ್ನು ಮರಳಿನ ಮೇಲೆ ಹಾಕಿದ್ದಿದ್ದರೆ ? ಅದು ಓಟೆಯಾಗಿಯೇ ಉಳಿಯುತ್ತದೆ. ಕೆಲವು ವರ್ಷಗಳಾನಂತರ, ಅದನ್ನು ಅನುಕೂಲವಾದ ಭೂಮಿಯಲ್ಲಿ ನೆಟ್ಟರೆ, ಪುನಃ ತನ್ನ ಜೀವನ ಚಕ್ರವನ್ನು ಶುರುಮಾಡುತ್ತದೆ. ಅಂದರೆ ಅಷ್ಟು ಕಾಲವು ಅದು ಓಟೆಯಾಗಿಯೇ ಇದ್ದು ಯಾವ ಚಟುವಟಿಕೆಯನ್ನು ತೋರಿಸದೇ .ಇದ್ದರೂ, ಮೊಳಕೆ ಒಡೆದು ಬಾಳನ್ನು ಪ್ರಾರಂಭಿಸಿರುವ ಚೈತನ್ಯವನ್ನು ಕಳೆದುಕೊಂಡಿರುವುದಿಲ್ಲ.

ಈಜಿಪ್ಟಿನ ಫರೋವಾ ಆಗಿದ್ದ ಟ್ಯೂಟನ್‌ಕಾಮನ್ ಇನ ಗೋರಿಯನ್ನು ತೆಗೆದಾಗ ಅದರಲ್ಲಿ ಗೋಧಿಯ ಕಾಳುಗಳಿದ್ದವು- ಮೂರು ನಾಲ್ಕು ಸಾವಿರ ವರ್ಷಗಳ ಕಾಲ ಅವು ಅಲ್ಲಿಯೇ ಇದ್ದಿರಬೇಕು. ಅವನ್ನು ಪಾತಿಯಲ್ಲಿ ನೆಟ್ಟು ಶುಶ್ರೂಷೆ ಮಾಡಿದಾಗ, ಅವು ಗೋಧಿ ಗಿಡವಾಗಿ ಬೆಳೆಯಿತು.

ಅಂದರೆ "ಬೀಜ"ಗಳ ಅವಸ್ಥೆಯಲ್ಲಿ, ಸಸ್ಯಜೀವಿಗಳ "ಕಾಲ"ವು ಸ್ತಬ್ಧ ವಾಗಿದ್ದಂತೆಯೇ. ರಸಾಯನಿಕ ಗೊಬ್ಬರಗಳನ್ನು ಉಪಯೋಗಿಸಿ, ಮೂರು

ತಿಂಗಳ ಬೆಳೆಗಳನ್ನು ಎರಡು ತಿಂಗಳುಗಳಲ್ಲಿಯೇ ಬೆಳೆಯಲು ಸಾಧ್ಯವಾಗಿದೆ. ಇದರ ಅರ್ಥವೇನು ? ಕಾಲವು ಅತಿತ್ವರಿತಗತಿಯಲ್ಲಿ ಸಾಗುತ್ತಿದೆ ಎಂದು. ಅದೇ ರೀತಿಯಲ್ಲಿ ಬೆಳವಣಿಗೆಗೆ ಪರಿಸರವು ಪ್ರತಿಕೂಲವಾಗಿದ್ದರೆ, ಕಾಲವು ನಿಧಾನವಾಗಿ ಸಾಗುತ್ತದೆ.

ದ್ರಾಕ್ಷಿ ಬಳ್ಳಿಯನ್ನು ಚಪ್ಪರದ ಮೇಲೆ ಹಬ್ಬಿಸುತ್ತೇವೆ. ಸಾಕಷ್ಟು ನೀರು ಮತ್ತು ಗೊಬ್ಬರವನ್ನು ಕೊಡುತ್ತೇವೆ. ಹೊರವಾದ ಎಲೆಗಳನ್ನು ಮೆರೆಸುತ್ತಾ ಬಳ್ಳಿಯು ದೃಢವಾಗಿ ಬೆಳೆಯುತ್ತದೆ. ಈ ಎಲೆಗಳನ್ನು ಸೂಕ್ತ ಕಾಲದಲ್ಲಿ ಕತ್ತರಿಸದೇ ಇದ್ದರೆ, ದ್ರಾಕ್ಷಿ ಗೊಂಚಲು ಬೆಳೆಯುವುದೇ ಇಲ್ಲ. ಇನ್ನೂ ಹೊರವಾಗಿ ಎಲೆಗಳೇ ಬೆಳೆಯುತ್ತವೆ. ಚಿರಂಜೀವಿ ಹಾರ್ಮೋನು ದೊರಕಿದ ಕಂಬಳಿ ಹುಳುವಿನಂತೆ. ಎಲೆಗಳನ್ನು ಅದರಲ್ಲೂ ಸುಳಿ ಒಡೆಯು ವಲ್ಲಿ, ಕತ್ತರಿಸಿ ಹಾಕಿದರೆ ದ್ರಾಕ್ಷಿ ಗೊಂಚಲು ಉತ್ಪತ್ತಿಯಾಗುತ್ತದೆ. ಅಂದರೆ ಎಲೆಗಳ ದೃಷ್ಟಿಯಿಂದ ಕಾಲವು ಮುಂದುವರಿಯಿತು ; ದ್ರಾಕ್ಷಿ ಹಣ್ಣಿನ ದೃಷ್ಟಿ ಯಿಂದ ಕಾಲವು ಸ್ತಬ್ಧವಾಯಿತು. ಸುಳಿಗಳನ್ನು ಕತ್ತರಿಸುವುದರಿಂದ ದ್ರಾಕ್ಷಿ ಗೊಂಚಲಿಗೆ ಬಾಳಲು ಪ್ರೇರೇಪಿಸಿದಂತೆ.

ಅಂದರೆ ಸಸ್ಯ ಜೀವನದಲ್ಲಿಯೂ, ಪ್ರಾಣಿ ಜೀವಿಗಳಲ್ಲಿದ್ದಂತೆ, ಕಾಲವು ಅವಸರಿಸುವುದು ಸ್ತಬ್ಧವಾಗುವುದು, ನಿಧಾನಿಸುವುದು, ಮತ್ತು ಹಿಂತಿರುಗು ವುದು, ಇವೆಲ್ಲವನ್ನು ಕಾಣಬಹುದು.

# ಅಧ್ಯಾಯ-೩

## ೧. ಮನಸ್ಸು ಮತ್ತು ಕಾಲ

ಮನಸ್ಸಿನ ಅನುಭವಕ್ಕೆ ಬಂದ ಕಾಲವು "ನಾವು" ಎಂದುಕೊಳ್ಳುವ ವ್ಯವಸ್ಥೆಯ ಒಂದು ಅವಿಚ್ಛಿನ್ನ ಅಂಶ. ಸ್ಮರಣೆಯಂತೆ ಇದೂ ಸಮಸ್ಯೆಯಾಗಿಯೇ ಉಳಿದಿದೆ, ಈ ತನಕ.

ಹೊರಗಡೆ ಕಾಣಸುವ ರಾತ್ರಿ ಹಗಲು ಎಂದು ವಿಭಿನ್ನವಾಗಿರುವುದನ್ನು ಬಳಸಿಕೊಂಡು, ಗಡಿಯಾರದ ಅಥವಾ ಪಂಚಾಂಗದ ಕಾಲವನ್ನು ಕೃತಕವಾಗಿ ಏರ್ಪಡಿಸಿಕೊಂಡಿದ್ದೇವೆ : ಅದರಿಂದ ಅಮೋಘವಾದ ಪ್ರಯೋಜನವನ್ನು ಪಡೆದಿದ್ದೇವೆ.

ಆದರೆ ದೇಹದಲ್ಲಿರುವ ವಿಧ ವಿಧ ಅಂಗಗಳು ತಮ್ಮದೇ ಆದ ಕಾಲಗತಿಯನ್ನು ರಚಿಸಿಕೊಂಡಿವೆ. ಪಂಚಾಂಗದ ಕಾಲವು ನಮಗೆ ಪೋಲೀಸಿನವನಿದ್ದಂತೆ; ತೆರಿಗೆಯಧಿಕಾರಿ ಇದ್ದಂತೆ; ನಕ್ಷತ್ರೀಕನಿದ್ದಂತೆ ನಮ್ಮನ್ನು ಕಾಡಿ, ಕೆಡವಿ, ಹೀಗೆಯೇ ನಡೆದುಕೋ ಎಂದು ಶಿಕ್ಷಿಸುತ್ತದೆ.

ದೇಹದ ಕಾಲವು ಸುಹೃದಯ ಸ್ನೇಹಿತನಿದ್ದಂತೆ. ತನ್ನ ಪಾಡನ್ನು ತಾನು ನೋಡಿಕೊಂಡರೂ ಅಗತ್ಯ ಬಿದ್ದಾಗ ನಮ್ಮ ನೆರವಿಗೆ ಬಂದು ಸಹಾಯ ಮಾಡುತ್ತದೆ; ಕಷ್ಟದಲ್ಲಿ ಭಾಗಿಯಾಗುತ್ತದೆ, ಕಷ್ಟವನ್ನು ಕಡಿಮೆಮಾಡುತ್ತದೆ, ಸುಖದಲ್ಲಿ ಕೂಡ ಭಾಗಿಯಾಗಿ, ಸುಖವನ್ನು ಇಮ್ಮಡಿಗೊಳಿಸುತ್ತದೆ. ತನಗಾಗಿ ಏನನ್ನೂ ನಮ್ಮಿಂದ ಬಯಸುವುದಿಲ್ಲ; ಸ್ನೇಹವೊಂದನ್ನು ಬಿಟ್ಟು. ದೇಹದ ಕಾಲ ಮತ್ತು ನಮ್ಮದಿಯು ನಿಕಟ ಸ್ನೇಹವನ್ನು ಪಡೆದಿವೆ.

ಮನಸ್ಸಿನ ಕಾಲವಾದರೋ ಅಂತಃಪುರವಿದ್ದಂತೆ. ಅಲ್ಲಿ ಕಾಲವು ನಮ್ಮ ಭಾವರಾಗಗಳಿಗೆ ಅನ್ವಯವಾಗುತ್ತದೆ. ಸುಖದ ಅನುಭವವಾಗುತ್ತಿದ್ದರೆ ಕಾಲವು ಹಗುರಾಗಿ ತ್ವರಿತದಿಂದ ಹರಿದಂತೆ ಭಾಸವಾಗುತ್ತದೆ. ದುಃಖದ

ಅಥವಾ ಬೇಸರದ ಅನುಭವವಾಗುತ್ತಿದ್ದರೆ ಕಾಲವು ಭಾರವಾಗಿ ಅತಿನಿಧಾನ ವಾಗಿ ನಡೆದಂತೆ ತೋರುತ್ತದೆ. ಮನಸ್ಸಿನ ಕಾಲಕ್ಕೂ, ದೇಹ ಮತ್ತು ಪಂಚಾಂಗದ ಕಾಲಕ್ಕೂ, ನಿಕಟವಾದ ಸಂಬಂಧವೇ ಇದ್ದಂತಿಲ್ಲ. ಮನಸ್ಸಿನಲ್ಲಿ ಕಾಲಾತೀತವಾಗುವ Eternityಯ ಕಲ್ಪನೆಯು ಬರಲು ಸಾಧ್ಯ. ಆದರೆ ದೇಹ ಮತ್ತು ಪಂಚಾಂಗಗಳಲ್ಲಿ ಅಂತಹ ಕಲ್ಪನೆಗೆ ಅವಕಾಶವೇ ಇಲ್ಲ.

ಪಂಚಾಂಗಗಳಲ್ಲಿ, ಮತ್ತು ಅವುಗಳಿಗೆ ಆಧಾರವಾದ, ಗಣಿತ ಸಿದ್ಧಾಂತ ಗಳಲ್ಲಿ ಕಾಲದ ಪರಮಾವಧಿಯು, (Infinity) ಕಲ್ಪನೆಗೆ ಅವಕಾಶವಿದೆ. ಆದರೆ ಅದು ನಮ್ಮ ಮನಸ್ಸಿನಲ್ಲಿ. ದಿನ ನಿತ್ಯದ ಅನುಭವದಲ್ಲಿಲ್ಲ. ಹಾಗಾಗಿ ಅದೂ ಮನಸ್ಸಿನ ಕಾಲದ ಅರಿವಿಗೆ ಅಂಟಿಕೊಂಡಿದೆ.

ಮನೋಽತೀತವಾದ ಕಾಲವು ದೇವಮಂದಿರವಿದ್ದಂತೆ. ದೇವಮಂದಿರ ದಲ್ಲಿ ಮನೋಽತೀತವಾದ ಕಾಲವು ಚಲಿಸದೇ ಇರುತ್ತದೆ. ಏಕೆಂದರೆ ದೇಹ ಮತ್ತು ಮನಸ್ಸಿನಲ್ಲಿ ಘಟನೆಗಳು ನಡೆಯುತ್ತವೆ, ಕಾಲದ ಚಲನೆಯ ಅನು ಭವವು ಉಂಟಾಗುತ್ತದೆ. ದೇವಮಂದಿರದಲ್ಲಿ (ಹೀಗೆಂದಾಗ ದೇವಾಲಯ, ದೇವಸ್ಥಾನ, ಗುಡಿ, ಮಸೀದಿ, ಇಗರ್ಜಿ, ಸ್ತೂಪ ಇವುಗಳನ್ನು ಪ್ರಸ್ತಾಪಿ ಸುತ್ತಿಲ್ಲ) ಯಾವ ಘಟನೆಗಳೂ ಆಗುವುದಿಲ್ಲ. ಮನೋಽತೀತವಾದ ಅವಸ್ಥೆ ಯನ್ನು ಆಗೊಮ್ಮೆ ಈಗೊಮ್ಮೆ ನಮ್ಮಂತಹ ಸಾಮಾನ್ಯ ಮಾನವರೂ ಅನು ಭವಿಸುತ್ತೇವೆ. ಉಂಡು ತಿಂದು, ಮರೆದೂ ಮರೆಯುವ ಸಾಮಾನ್ಯರಿಗೂ ಮನೋಽತೀತವಾದ ಅವಸ್ಥೆಯು ಬರುತ್ತದೆ. ಅಂತಹ ಸ್ಥಿತಿಯಲ್ಲಿ, ದೇಹ ಮತ್ತು ಮನಸ್ಸು ಇವೆರಡನ್ನೂ ಮರೆಯಲಾಗುತ್ತದೆ. ಆದರೆ ಎಚ್ಚರವೂ ಇರುತ್ತದೆ. ಕಾಲದ ಹರಿಯುವಿಕೆಯು ಅರಿವಿಗೆ ಮೂಡುವುದಿಲ್ಲ. ಅಂದರೆ ಹಿಂದು, ಇಂದು, ಮುಂದು ಎನ್ನುವ ಮೂರು ಸಾಮಾನ್ಯವಾದ, ದೇಹ ಮತ್ತು ಮನಸ್ಸಿನ ಕಾಲದ, ಅನುಭವಕ್ಕೆ ಬರುವ ಭೇದಗಳು ಕಾಣುವುದೇ ಇಲ್ಲ. ಇಂದು, ಈಕ್ಷಣ, ಇದೇ Infinite ಎಂದೆನಿಸುತ್ತದೆ. ಈ ಸ್ಥಿತಿಯ ದೈನಂದಿನ ಸಾಮಾನ್ಯರ ಅನುಭವಗಳಿಗೆ, ಮುಂದಿನ ಅಧ್ಯಾಯದಲ್ಲಿ, ಸಾಕಷ್ಟು ನಿದರ್ಶನಗಳನ್ನು ಕೊಡಲಾಗುತ್ತದೆ. ಸದ್ಯಕ್ಕೆ "ಮನಸ್ಸು ಮತ್ತು ಕಾಲ" ಈ ವಿಷಯದ ವಿಶ್ಲೇಷಣೆಗೆ ಅಗತ್ಯವಾದ, "ಮನಸ್ಸು ಮತ್ತು ಕಾಲ" ಮತ್ತು, "ಮನೋಽತೀತ ಕಾಲ" ಇವುಗಳ ಸ್ಥೂಲ ಪರಿಚಯವನ್ನು ಮಾತ್ರ

ಇಲ್ಲಿ ಮಾಡಿಕೊಡಲಾಗಿದೆ. ಇದರಿಂದ "ಮನಸ್ಸು" ಯಾವ ರೀತಿಯಲ್ಲಿ "ಕಾಲ" ವನ್ನು ಗಮನಿಸುತ್ತದೆ ಎಂಬುದನ್ನು, ಸುಲಭವಾಗಿ ತಿಳಿಯಬಹುದು.

## 2. ಮನೋಕಾಲ ಮತ್ತು ಭಾವರಾಗಗಳು

ಮನಸ್ಸಿನಲ್ಲಿ 'ಕಾಲ'ದ ಅನುಭವವು, ಮನಸ್ಸಿನ ರಾಗಭಾವನೆಗಳಿಗೆ ಅನ್ವಯವಾಗಿರುತ್ತದೆ ಎಂಬುದನ್ನು ತಿಳಿದೆವು.

ಪ್ರೇಯಸಿಗಾಗಿ ಪಾರ್ಕಿನ ಬಳಿ ಕಾದಿರುವಾಗ, ಮನಸ್ಸಿಗೆ ಬೇಸರ ತುಂಬಿರುತ್ತದೆ. ಜತೆಗೆ ಎಲ್ಲಾದರೂ ಚಕ್ಕರ್ ಕೊಟ್ಟು ಬಿಡುತ್ತಾಳೇನೋ ? ಏನಾದರೂ ನೆಪಹೂಡಿಬಿಡುತ್ತಾಳೇನೋ ? ಎಂಬ ಸಂಶಯವೂ ಕಾಡ ಲಾರಂಭಿಸುತ್ತದೆ. ಬೇಸರದಿಂದ ಮತ್ತು ಸಂಶಯದಿಂದ ಕೂಡಿದ ಮನಸ್ಸಿಗೆ ಕಾಲವು ಬಲು ನಿಧಾನವಾಗಿ ಸರಿಯುತ್ತಿರುವಂತೆ ಅನಿಸುತ್ತದೆ. ಗಡಿಯಾರವನ್ನು ನೋಡಿದಾಗ ಕೇವಲ ಐದು ನಿಮಿಷಗಳಾಗಿರುವುದು ತಿಳಿಯುತ್ತದೆ. ಆದರೆ ಮನಸ್ಸಿನಲ್ಲಿ "ಎಷ್ಟೋ ಹೊತ್ತಿನಿಂದ ಕಾಯುತ್ತಿದ್ದೀನಿ" ಎನಿಸಿ ಛಡಪಡಿಸು ವಂತಾಗುತ್ತದೆ. ಕ್ಷಣವೊಂದು ಯುಗವಾಗಿ ಕಾಡುತ್ತದೆ.

ಪ್ರೇಯಸಿಯು ಬಂದಳು. ಪಾರ್ಕಿನಲ್ಲಿ ಕುಳಿತು ಸರಸ ಸಂಭಾಷಣೆ ಮತ್ತು ಚಕ್ಕಂದವನ್ನಾಡುವಾಗ, ಮನಸ್ಸಿನಲ್ಲಿ ಖುಷಿ ತುಂಬಿರುತ್ತದೆ. ಮುಂದೆ ಲಭಿಸಬಹುದಾದ ಆತ್ಮಾನಂದದ ಆಸೆಯೂ ಹಿರಿದಾಗುತ್ತದೆ. ಕಾಲವು ಬಲು ವೇಗದಿಂದ ಪ್ರವಹಿಸುತ್ತಿರುವಂತೆ ಭಾಸವಾಗುತ್ತದೆ. ಗಡಿಯಾರವನ್ನು ನೋಡಿದರೆ ಎರಡು ತಾಸು ಕಳೆದು ಹೋಗಿರುತ್ತದೆ. ಯುಗವೊಂದು ಕ್ಷಣ ವಾಗಿ ಕಾಣಿಸುತ್ತದೆ. Motion indicates Time: Emotions indicate movements ಹಾಗಾಗಿ Emotions, ರಾಗ ಭಾವಗಳು ಕಾಲದಮೇಲೆ ಪ್ರಭಾವವನ್ನು ಬೀರಬೇಕು.

ಕುತೂಹಲವನ್ನು ಕೆರಳಿಸಿ ಮನಸ್ಸನ್ನು ಸೆರೆಹಿಡಿಯುವಂತಹ, ಕತೆ ಯನ್ನೋ ಕಾದಂಬರಿಯನ್ನೋ ಓದುವಾಗ, ಎರಡು ತಾಸುಗಳು ಎರಡು ನಿಮಿಷಗಳಂತೆ ಕಳೆದು ಹೋಗುತ್ತದೆ. ಇಷ್ಟವಾದ ವಿಷಯದ ಪುಸ್ತಕವನ್ನು ಓದುವಾಗ, ಅಥವಾ ವ್ಯಾಸಂಗಮಾಡುವಾಗಲೂ ಕಾಲವು ಬಲು ತ್ವರಿತವಾಗಿ ಪ್ರವಹಿಸಿದಂತೆ ಅನಿಸುತ್ತದೆ. ಆದರೆ ಪರೀಕ್ಷೆ ಪಠ್ಯ ಪುಸ್ತಕವನ್ನು ಓದುವಾಗ

ಓದಲೇಬೇಕಾದಗ, ಮನಸ್ಸಿನಲ್ಲಿ ತುಸು ಬೇಸರವು ಮೂಡುತ್ತದೆ 'ಹಾಳು ಪುಸ್ತಕ ಎಷ್ಟು ಹೊತ್ತು ಓದಿದರೂ ಮುಗಿಯುವುದೇ ಇಲ್ಲ' ಎಂದನಿಸುತ್ತದೆ.

ಯಾರ ಮೇಲಾದರೂ ಸೇಡು ತೀರಿಸಿಕೊಳ್ಳಲು ಸನ್ನಾಹವನ್ನು ಮಾಡು ವಾಗ, ಮೂರು ದಿನಗಳು ಮೂರು ನಿಮಿಷಗಳಂತೆ ಕಳೆದುಹೋದಂತನಿಸುತ್ತದೆ. ಮನಸ್ಸಿನಲ್ಲಿ ಹೆಪ್ಪುಗಟ್ಟಿಕೊಂಡಿದ್ದ ಸೇಡು ನಿವಾರಿಸಲ್ಪಟ್ಟರೆ, ಮನಸ್ಸಿಗೆ ಎಷ್ಟೋ ಹಿತವೆನಿಸುತ್ತದೆ. ಯಾವುದೋ ಪರಾಕ್ರಮವನ್ನು ಸಾಧಿಸಿದಂತೆ ಹಿಗ್ಗಾಗುತ್ತದೆ. ಆ ಹಿಗ್ಗಿನ ಕಾರಣದಿಂದಲೇ ಕಾಲವು ತೀವ್ರಗತಿಯಲ್ಲಿ ಪ್ರವ ಹಿಸದಂತಾಗುತ್ತದೆ.

ನಮ್ಮ ಹಿತವನ್ನು ಬಯಸುವವರು ಎಂದೆನಿಸಿಕೊಂಡವರು, ಅನಿರೀಕ್ಷಿತ ವಾಗಿ ಅವಮಾನವನ್ನು ಮಾಡಿದರೆ, ಅನಂತರ ಕಾಲವು ಬಲು ನಿಧಾನವಾಗಿ ಹರಿದಂತೆ ಭಾಸವಾಗುತ್ತದೆ. ಎರಡು ಮೂರು ನಿಮಿಷಗಳಷ್ಟು ಹಿಂದೆತಾನೇ ಅವಮಾನವನ್ನು ಅನುಭವಿಸದಂತಿರುತ್ತದೆ; ಎರಡು ಮೂರು ದಿನ ಅಥವಾ ವಾರಗಳಾದ ಮೇಲೆ ಕೂಡ, ಅವಮಾನದ ಪ್ರಸಂಗವು ಅಷ್ಟು ಹಸಿರಾಗಿ ಉಳಿದು ಮನಸ್ಸನ್ನು ಮೇಲಿಂದ ಮೇಲೆ ಕುಕ್ಕುತ್ತಲೇ ಇರುತ್ತದೆ.

ಆದೇ ತರಹ, ಅನಿರೀಕ್ಷಿತವಾಗಿ ದೊಡ್ಡವರಾರಾದರೂ, ನಮ್ಮ ಬಗೆಗೆ ಒಂದು ಪ್ರಶಂಸೆಯ ಮಾತನ್ನಾಡಿದರೆ, ಮನಸ್ಸಿಗೆ ಹಿಗ್ಗಾಗುತ್ತದೆ. ಇಂತಹ ಪ್ರಸಂಗಗಳೂ ಹಸಿರಾಗಿ ನೆನಪಿನಲ್ಲುಳಿದು ಮೇಲಿಂದ ಮೇಲೆ ಹಾಯ್ ಎನಿಸು ವಂತೆ ಮಾಡುತ್ತದೆ. ಕಾಲವು ಇಂಥ ಸಂದರ್ಭಗಳಲ್ಲಿ ಕೂಡ ಬಲು ನಿಧಾನ ವಾಗಿ ಹರಿದಂತೆ ಭಾಸವಾಗುತ್ತದೆ.

ಹಾಸ್ಯದ ಚುಟುಕಾಗಳು ತುಂಬಿದ ಭಾಷಣವನ್ನಾಗಲೀ, ಸಂಭಾಷಣೆ ಯನ್ನಾಗಲೀ, ಕೇಳುತ್ತಿರುವಾಗ ಕಾಲವು ಬಲು ರಭಸದಿಂದ ಹರಿಯುವಂತಿರು ತ್ತದೆ. ಏಕೆಂದರೆ ಮನಸ್ಸಿಗೆ ಆಹ್ಲಾದವಾಗುತ್ತದೆ. ಆದರೆ ಘನವಾದ ವಿಷಯವನ್ನು ಬಲು ಗಂಭೀರವಾಗಿ ವಿಶ್ಲೇಷಿಸುತ್ತ, ಭಾಷಣವನ್ನು ಬಿಗಿದರೆ, ಕೇಳಲೇ ಬೇಕಾದವರಿಗೆ ಕಾಲವು ಬಲು ನಿಧಾನವಾಗಿ ಸುರಿಯುತ್ತಿರುವಂತಿರು ತ್ತದೆ. ಕಾರಣ ಮನಸ್ಸಿನಲ್ಲಿ ಬೇಸರ ಮತ್ತು ಜಿಗುಪ್ಸೆಗಳು ತುಂಬಿಕೊಳ್ಳು ವುದರಿಂದ.

ಶಾಂತ ಮತ್ತು ಕರುಣಾರಸಗಳೂ ಮನಸ್ಸಿಗೆ ಹಿತವನ್ನಿತ್ತು, ಕಾಲವು ಬಲು ವೇಗದಿಂದ ಹರಿದಂತೆ ಅನಿಸುತ್ತದೆ. ತದ್ವಿರುದ್ಧ ಭೀಭತ್ಸ ಮತ್ತು ಭಯಾನಕಗಳು ಮನಸ್ಸನ್ನು ಗೋಜಿಸಿ, ಬೆದರಿಸಿ, ಕಾಲವು ಮಂದಗತಿಯಲ್ಲಿ ಹರಿದಂತೆ ಅನಿಸುತ್ತದೆ.

ಈ ರೀತಿ ನವರಸಗಳೆಲ್ಲವೂ ಮನಸ್ಸಿನ ರಾಗಭಾವಗಳ ಮೇಲೆ ಪ್ರಭಾವ ವನ್ನು ಬೀರಿ, ಅವಮೂಲಕ ಮನೋಕಾಲದ ಮೇಲೆ ಭಿನ್ನ ಭಿನ್ನ ಗತಿಗಳನ್ನು ಮೂಡಿಸುತ್ತವೆ.

## 3. ಮನೋಕಾಲ ಮತ್ತು ದೇಹ

ದೇಹದಲ್ಲಿ ಉಂಟಾಗುವ ನೋವುಗಳೂ ಮನೋಕಾಲದ ಮೇಲೆ ಪ್ರಭಾವ ವನ್ನು ಬೀರುತ್ತವೆ. ಉಗ್ರ ಹಲ್ಲು ನೋವಿನಿಂದ ನರಳುತ್ತಿರುವವನಿಗೆ. ಒಂದು ತಾಸು ಒಂದು ದಿನದಂತನಿಸುತ್ತದೆ. ಒಂದು ದಿನ, ಒಂದು ವಾರ ಎಂದನಿಸುತ್ತದೆ. ಕಾಲವು ಅತಿ ನಿಧಾನವಾಗಿ ಹರಿದಂತೆ ಅವನಿಗೆ ಭಾಸವಾಗುತ್ತದೆ. ಅಂತೆಯೇ ಹೊಟ್ಟೆಯು ತುಂಬಾ ಹಸಿದಾಗ ಅಥವಾ ಬಾಯಾರಿಕೆಯು ಅತಿಯಾದಾಗ, ಮನೋಕಾಲವು ತುಂಬಾ ನಿಧಾನವಾದಂತೆ ಭಾಸವಾಗುತ್ತದೆ; ಆಹಾರ ಮತ್ತು ನೀರು ದೊರಕುವವರೆಗೆ ಈ ಅವಧಿಯ ಕಾಲವು ಬಹು ದೀರ್ಘ ಎಂದೆನಿಸುತ್ತದೆ. ಜ್ವರದ ತಾಪದಿಂದ ನರಳುತ್ತಿರು ವವನಿಗೆ ಒಂದರ್ಧ ಗಂಟೆಯಷ್ಟು ಹೊತ್ತು ಝೋಂಪು ಬಂದು, ಎಚ್ಚರ ವಾದಾಗ, ಎರಡು ಮೂರು ದಿನಗಳಾಗಿದೆಯೇನೋ? ಎನಿಸುತ್ತದೆ.

ಹಸಿವು ಬಾಯಾರಿಕೆ ಮುಂತಾದ ಸ್ವಾಭಾವಿಕವಾದ ದೇಹದ ಒತ್ತಡ ಗಳು, ಹಾಗೂ, ನೋವು ಇತ್ಯಾದಿ ಅನಾರೋಗ್ಯವನ್ನು ಸೂಚಿಸುವ ಬಾಧೆ ಗಳು, ಇವು ಮನೋಕಾಲದ ಮೇಲೆ ಪ್ರಭಾವವನ್ನು ಬೀರುತ್ತವೆ, ಮನೋ ಕಾಲವು ಬಲು ನಿಧಾನವಾಗಿ ಹರಿಯುತ್ತಿದೆ ಎನಿಸುತ್ತದೆ. ಆದರೆ ದೇಹದ ವಿವಿಧ ಅಂಗಗಳು ಆರೋಗ್ಯದಿಂದಿರುವಾಗ, ಅವುಗಳ ಇರುವಿಕೆಯೇ ಮನಸ್ಸಿನ ಗಮನಕ್ಕೆ ಬರುವುದಿಲ್ಲ. ಅಂದರೆ ದೇಹವು ತನ್ನ ಪಾಡಿಗೆ ತಾನು ನೆಮ್ಮದಿಯಿಂದ ಆರೋಗ್ಯವಾಗಿರುವಾಗ, ತೋರ (Conscious) ಮನಸ್ಸಿನ ಗಮನಕ್ಕೆ

ಬರುವುದೇ ಇಲ್ಲ. ಮನೋಕಾಲದ ಮೇಲೆ ಯಾವ ಪ್ರಭಾವವನ್ನು ಬೀರುವುದೂ ಇಲ್ಲ. ಇದು ದೇಹದ ಸಂಪೂರ್ಣ ಸ್ವಾಸ್ಥ್ಯದ ಲಕ್ಷಣ.

## 4. ಮನೋಕಾಲ ಮತ್ತು ಆತಂಕ ಭಯ

ಮನಸ್ಸಿನ ಕಾರ್ಯಕ್ರಮದಲ್ಲಿ ಡೊಂಕುಡೊಂಕುಗಳುಂಟಾದರೆ, ಆಗಲೂ ಮನೋಕಾಲದ ಗತಿಯು ವ್ಯತ್ಯಾಸವಾದಂತೆ ಭಾಸವಾಗುತ್ತದೆ. ಯಾವುದಾದರೂ ಒಂದು ಕೆಲಸವನ್ನು ಮಾಡಬೇಕಾದಾಗ, ಹಾಗೂ ನಿಖರವಾದ ವೇಳೆಯಲ್ಲಿ ಮುಗಿಸಬೇಕಾದಾಗ ತುಸು ಆತಂಕವು ಮನಸ್ಸನ್ನು ಮುತ್ತುವುದು ಸ್ವಾಭಾವಿಕ. ಸ್ವಲ್ಪ ಆತಂಕವಿದ್ದರೆ, ಮಾಡುವ ಕೆಲಸವನ್ನು ಸಕಾಲದಲ್ಲಿ ಸರಿಯಾಗಿ ಮಾಡುವುದು ಸುಲಭ. ಆದರೆ ಆತಂಕವು ಸ್ವಲ್ಪ ಹೆಚ್ಚಾದರೆ, ಮನಸ್ಸಿನಲ್ಲಿ ತಳಮಳವು ಹೆಚ್ಚಾಗುತ್ತದೆ. ಹೀಗ ಮಾಡಿದರೆ ಏನಾಗುತ್ತೋ ? ಹಾಗೆ ಮಾಡಿದರೆ ಗತಿಏನೋ? ಎಂಬ ಸಂಶಯವು ಹೆಡೆಯೆತ್ತುತ್ತದೆ. ಸಂಶಯ ಮತ್ತು ತಳಮಳವು ಕೂಡಿಕೊಂಡು ಉಲ್ಬಣಿಸಿದರೆ ಭಯವುಂಟಾಗುತ್ತದೆ. ಮಾಡುವ ಕೆಲಸಕ್ಕೆ ಭಯವು ಅಡ್ಡಿಯಾಗುತ್ತದೆ. ಭಯವು ಹೆಚ್ಚಾಗಿ ಭಯಾನಕ (Terror) ಆದರೆ, ಮಾಡಬಯಸಿದ ಕೆಲಸವು ಹಾಳಾಗುವುದಲ್ಲದೆ ಭಯಾನಕವಾದ ಆ ಅನುಭವವು ಮನಸ್ಸಿನ ಸ್ಮರಣಾ ವಿಭಾಗದಲ್ಲಿ ಅಳಿಯದಂತೆ ಅಚ್ಚಾಗುತ್ತದೆ. ಅದರ ನೆನಪಾದಾಗಲೆಲ್ಲ Phobia and Panic ಉಗ್ರಭಯ ಮತ್ತು ಪಲ್ಲಟವು ಮುಂದಿನ ಬಾಳಿನಲ್ಲಿ ಬಲು ಕಾಲ ಕಾಡುತ್ತದೆ. ಆತಂಕದ ಉಲ್ಬಣದ ಸೋಪಾನಗಳಿವು.

ಸ್ವಲ್ಪ ಆತಂಕವಾದಾಗ ಮನೋಕಾಲವು ನಿಧಾನವಾದಂತೆ ಆಗುತ್ತದೆ. ಹೆಣ್ಣನ್ನು ನೋಡಲು ಗಂಡಿನವರು ಸಂಜೆ ಐದಕ್ಕೆ ಬರುವ ನಿರೀಕ್ಷೆ ಇರುತ್ತದೆ; ಅನ್ನಿ. ಮಧ್ಯಾಹ್ನ ಹನ್ನೆರಡರಿಂದ ಭಾವಿ ವಧುವಿಗೂ, ವಧುವಿನ ತಾಯಿಗೂ ಆತಂಕಕ್ಕೆ ಶುರುವಾಗುತ್ತದೆ. ಈ ಏರ್ಪಾಡು ಸರಿಯೇ? ಆ ಸೀರೆಯನ್ನು ಉಟ್ಟರೆ ಚೆನ್ನೇ? ತಿಂಡಿ ಕಾಫಿಯ ಆತಿಥ್ಯವನ್ನು ನೀಡುವಾಗ ತುಸು ಗಾಬರಿಯಿಂದ ಕಾಫಿಯನ್ನು ಚೆಲ್ಲಿಬಿಟ್ಟರೆ? ಸಂಗೀತ ಬರುತ್ತದೆಯೇ? ಹಾಗಿದ್ದರೆ ಎರಡು ಹಾಡು ಹೇಳಿ ಅಂದರೆ ಯಾವ ಹಾಡನ್ನು ಹೇಳುವುದು; ಇತ್ಯಾದಿ ಇತ್ಯಾದಿ ಯಾವು ಯಾವುದೋ ಅಲ್ಪ ವಿಚಾರಗಳು ಬಹು ದೊಡ್ಡ ಕಾಟವಾಗಿ

ಪರಿಣಮಿಸುತ್ತವೆ. ಸರಿಯಾದ ವೇಳೆಗೆ ಬೀಗರು ಬರುತ್ತಾರೆ. ಆತನಕ ಸಂದ ಒಂದು ತಾಸುಗಳು ಒಂದು ಪುರಾಣ ಯುಗದಂತೆ ವಧುವಿಗೂ ಅವಳ ಮನೆಯವರಿಗೂ ಅನಿಸುತ್ತದೆ.

ಭಯವು ಉಂಟಾದಾಗ ಮನೋಕಾಲವು ಬಹಳ ನಿಧಾನವಾದಂತೆ ಅನಿಸುತ್ತದೆ. ವಿಮಾನದಲ್ಲಿ ದಿಳ್ಳಿಗೆ ಪ್ರಯಾಣ ಮಾಡುತ್ತಿದ್ದಾಗ ಒಮ್ಮೆ ಆದ ಅನುಭವವನ್ನು ನನ್ನ ಸ್ನೇಹಿತ ವಿವರಿಸಿದ. ಎಷ್ಟೋ ದಿನಗಳಾದ ಮೇಲೆ 'ಅರ್ಧದಾರಿಯಷ್ಟು ಪ್ರಯಾಣ ಮಾಡಿದ ಮೇಲೆ ವಿಮಾನವು ಸ್ವಲ್ಪ ಊಗಾಡ ತೊಡಗಿತು.' 'ಸೊಂಟದ ಪಟ್ಟಿ ಕಟ್ಟಿಕೊಳ್ಳಿ' ಎಂದು ಗಗನಸಖಿ ಅಣತಿ ಯನ್ನು ನೀಡಿದಳು. 'ವಿಮಾನದ ಇಂಜಿನ್ನಿನಲ್ಲಿ ಸ್ವಲ್ಪ ದೋಷವು ಕಂಡು ಬರುತ್ತಿದೆ. ಆದುದರಿಂದ ಹತ್ತಿರದ ನಿಲ್ದಾಣದಲ್ಲಿ ಇಳಿಯುತ್ತೇವೆ.' ಎಂದು ಸುದ್ದಿಯನ್ನು ಹೇಳಿದಳು. 'ಇರುವ ಸಂಗತಿಯನ್ನು ಈಕೆ ಹೇಳುತ್ತಿಲ್ಲ. ಇವತ್ತಿಗೆ ಈ ಲೋಕದ ಋಣವು ತೀರಿತು ಎಂದನಿಸಿತು. ಎದೆಯು ಡವಡವ ಮಾಡುತ್ತಿದ್ದುದು ನನಗೆ ಕೇಳಿಸುತ್ತಿತ್ತು. ಒಂದು ತರಹ ಅವ್ಯಕ್ತ ಭಯವು ಮುತ್ತಿಕೊಂಡಿತು. ಏನು ಮಾಡಲೂ ಮನಸ್ಸಿಲ್ಲ. ಅಕ್ಕಪಕ್ಕದವರ ಹತ್ತಿರ ಮಾತನಾಡಲೂ ಮನಸ್ಸಾಗಲಿಲ್ಲ. ಒಂದು ಕ್ಷಣ ನಮಃಶಿವಾಯ ಎನ್ನುತ್ತಿದ್ದೆ. ನಂತರ ದೇವರನ್ನು ಮರೆಯುತ್ತಿದ್ದೆ. ಗ್ವಾಲಿಯರ್ ವಿಮಾನ ನಿಲ್ದಾಣದಲ್ಲಿ 15 ನಿಮಿಷಗಳಾದ ನಂತರ ಇಳಿದೆವು. ಆದರೆ ಆ ಹದಿನೈದು ನಿಮಿಷಗಳು ಸುಮಾರು ಎರಡು ಮೂರು ವರ್ಷಗಳು ಕಳೆದಂತೆ ಅನಿಸಿತ್ತು. ಹದಿನೈದು ನಿಮಿಷಗಳಲ್ಲಿ ಮೂರು ವರ್ಷಗಳ ಮುಪ್ಪು ಬಂದಂತಾಗಿತ್ತು' ಎಂದು.

ವೈದ್ಯರುಗಳಿಗೆ ಭಯದ ಅನುಭವವು ಆಗುವುದುಂಟು. ಕೆಲವೊಂದು ಇಂಜೆಕ್ಷನ್‌ಗಳನ್ನು ಕೊಟ್ಟಾಗ ಕೆಲವೊಮ್ಮೆ ಅನಾಫಿಲಾಕ್ಟಿಕ್ ಪ್ರತಿಕ್ರಿಯೆಯು ಸಂಭವಿಸುತ್ತದೆ. ರೋಗಿಯ ಸ್ಥಿತಿಯು ಇತ್ತಲೋ ಅತ್ತಲೋ ಎನ್ನು ವಂತಾಗುತ್ತದೆ. ಹತ್ತು ಹದಿನೈದು ನಿಮಿಷಗಳಲ್ಲಿ ಸೂಕ್ತ ಚಿಕಿತ್ಸೆಯ ನಂತರ ಇನ್ನು ಮೇಲೆ ಪ್ರಾಣಾಪಾಯವಿಲ್ಲ ಎಂಬ ಧೈರ್ಯ ಬರುತ್ತದೆ. ಆದರೆ ಹದಿನೈದು ನಿಮಿಷಗಳಲ್ಲಿ, ಬೇನೆಯನ್ನು ವಾಸಿಮಾಡಿಕೊಳ್ಳಲು ಬಂದವನು ಚಿಕಿತ್ಸೆಯ ಕಾರಣದಿಂದ ಸಾಯುತ್ತಾನೇನೋ ಎನ್ನುವ ವ್ಯಥೆ ಮತ್ತು ಭಯ

ತೀವ್ರವಾಗಿರುತ್ತದೆ. ಆ ಅವಧಿಯಲ್ಲಿ ವೈದ್ಯನಿಗೆ ಐದು ವರ್ಷ ಆಯುಸ್ಸು ಕಡಿಮೆಯಾದಂತೆಯೇ.

ಭಯವು ಅತಿಯಾಗಿ ಭಯಾನಕ (Terror) ಸ್ಥಿತಿಗೆ ಉಲ್ಬಣಿಸಿದಾಗ, ಕಾಲವು ಸ್ಥಬ್ದವಾದಂತೆ ಅನಿಸುತ್ತದೆ. ಮಲೆನಾಡಿನಲ್ಲಿ ಒಮ್ಮೆ ಸ್ನೇಹಿತರೊಂದಿಗೆ ಜೀಪಿನಲ್ಲಿ ಬೆಳಗ್ಗೆ ಏಳರ ಸಮಯದಲ್ಲಿ ಕಾಡುಹಾದಿಯಲ್ಲಿ ಹೋಗುತ್ತಿದ್ದೆ. ರಸ್ತೆ ಎಂದು ಹೇಳುವಂತಿರಲಿಲ್ಲ, ನಾವು ಸಾಗುತ್ತಿದ್ದ ದಾರಿಯನ್ನು. ಕಾರಣ ಜೀಪು 10-15 ಮೈಲಿ ವೇಗದಲ್ಲಿ ಹೋಗುತ್ತಿತ್ತು. ಹಟಾತ್ತನೆ ಸುಮಾರು 20 ಗಜದೂರದಲ್ಲಿ, ಪಕ್ಕದಲ್ಲಿದ್ದ ದೊಡ್ಡ ಮರದಿಂದ ಒಬ್ಬ ಧುಮುಕಿದ, ರಸ್ತೆಗೆ. ನಮ್ಮ ಜೀಪಿನತ್ತ ಅವನು ಧಾವಿಸುತ್ತ ಎದುರಿಗೇ ಬಂದ. ಜೀಪನ್ನು ನಿಲ್ಲಿಸಲೇಬೇಕಾಯಿತು. 'ಏನಾಗಿದೆ? ಏನು ಬೇಕು' ಎಂದು ಕೇಳಿದೆವು ಆ ಹಳ್ಳಿಯವನನ್ನು. ಒಂದೆರಡು ನಿಮಿಷ ಮಾತೇ ಆಡಲಿಲ್ಲ ಅವ. ಯಾವುದೋ ದೆವ್ವವನ್ನು ಕಂಡಂತಿತ್ತು, ವಿಹ್ವಲವಾದ ಅವನ ಮುಖ. ನೀರು ಬೇಕು ಎನ್ನುವಂತೆ ಸಂಜ್ಞೆ ಮಾಡಿದ. ನಮ್ಮಲ್ಲಿದ್ದ ಚೊಂಬಿನಿಂದ ನೀರು ಕೊಟ್ಟೆವು. ಕುಡಿದ ಗಟಗಟ ಅತ. ನಂತರ ಸುಧಾರಿಸಿಕೊಂಡು ಹೇಳಿದ; 'ಬೆಳಗಿನ ಝಾಮು ಇತ್ತ ಬರ್‍ತಾ ಇದ್ದೆ, ದಾಸರಹಳ್ಳಿಗೆ ಹೋಗಲು. ಹತ್ತಿರದಲ್ಲೇ ಭಾರಿ ಹುಲಿಯೊಂದು ಕಾಣಿಸಿತು. ಅದು ಘರ್ಜಿಸಿತು. ತತ್ ಕ್ಷಣ ಆ ಮರವನ್ನು ಹತ್ತಿದೆ. ಕುಟುಕು ಜೀವ ಹಿಡಿದುಕೊಂಡು ಕೊಂಬೆಯನ್ನು ತಬ್ಬಿಕೊಂಡಿದ್ದೆ. ಈ ರಸ್ತೆಯಲ್ಲಿ ಸಾಮಾನ್ಯವಾಗಿ ಯಾರೂ ಬರುಲ್ಲ. ನನ್ನ ಗತಿ ಏನಪ್ಪಾ ಹುಲಿ ಇಲ್ಲೇ ಎಲ್ಲೋ ಇದೆ ಎಂದು ಬೆದರಿ ಬೆವರುತ್ತಿದ್ದೆ' ದೇವರು ಬಂದ ಹಾಗೆ ನೀವು ಬಂದಿರಿ. ಎಲ್ಲಿ ಹೊರಟುಹೋಗ್ತೀರೋ ಅಂತ' ಇದ್ದಲ್ಲಿಂದಲೇ ಧುಮುಕಿದೆ' ಎಂದ. ಕಾಲು ಮುರಿಯಬಹುದು, ಹಾಗೆ ಧುಮುಕಿದರೆ ಸೊಂಟ ಸಡಿಲವಾಗಬಹುದು, ಎನ್ನುವ ಯೋಚನೆಯೂ ಇರಲಿಲ್ಲ. 'ಬೆಳಗಿನಝಾಮು ಅಂದೆಯಲ್ಲಾ ಎಷ್ಟು ಹೊತ್ತಿಗೆ? ಹೀಗಾಗಿದ್ದು?' ಎಂದು ಕೇಳಿದೆ. 'ಯಾರಿಗ್ಗೊತ್ತು' ಎಂದು ತೊದಲಿದ. Terrorise ಆಗಿದ್ದ ಅವನಿಗೆ ಮನೋಕಾಲವು ಅತ್ಯಂತ ನಿಧಾನವಾಗಿ ಪ್ರಾಯಶಃ ನಿಂತೇ ಹೋದಂತೆ ಭಾಸವಾಗಿರಬೇಕು.

## 5. ಮನೋರೋಗಗಳು-ಕಾಲ

ಮನೋರೋಗಗಳು ಕಾಡುವಾಗ, ಅದೂ ಉಗ್ರವಾಗಿ ಕಾಡುವಾಗ, ಕಾಲದ ಅನುಭವವು Space ಅಥವಾ ದೇಶದ ಅನುಭವದಂತೆ, ಬಹಳಷ್ಟು ಪಲ್ಲಟವಾಗುತ್ತವೆ. ಅಂತಹ ರೋಗಿಗಳ ಮನೋಕಾಲಕ್ಕೂ, ಗಡಿಯಾರದ ಕಾಲಕ್ಕೂ ಯಾವುದೊಂದು ಸಂಬಂಧವೂ ಇರುವುದಿಲ್ಲ. ಅವರ ಮನಸ್ಸಿನ ಲೋಕವೇ ಬೇರೆ. ಕಾಲಗತಿಯೇ ಬೇರೆ. ಮನಸ್ಸು ಛಿದ್ರವಾಗಿ, ಒಂದು ಭಾಗವು ನಿಜ ಪ್ರಪಂಚದಲ್ಲೂ, ಮತ್ತೊಂದು ಮುಖ್ಯ ಭಾಗವು, ತಮ್ಮದೇ ಆದ ಕಲ್ಪಿತ ಲೋಕದಲ್ಲೂ, ವಿಹರಿಸುತ್ತವೆ. ಹೀಗಾಗುವಾಗ ಮನೋಕಾಲವೂ ವಿಪರೀತವಾಗಿ ವ್ಯತ್ಯಾಸವಾದ ಗತಿಯನ್ನು ಹೊಂದಿದಂತೆ ಅನುಭವವಾಗುತ್ತದೆ. ಮನೋಕಾಲವೂ ಹುಚ್ಚು ಹುಚ್ಚಾಗಿ, ಬೆಪ್ಪು ಬೆಪ್ಪಾಗಿ, ಶಿವಲೀಲೆಯನ್ನು ಆಡುತ್ತದೆ, ರೋಗಿಯ ಜತೆಗೂನೂ.

## 6. ಭ್ರಮಾಕಾರಕ ಔಷಧಿಗಳು-ಕಾಲ

ಮಾದಕ ಪದಾರ್ಥಗಳನ್ನು ಸೇವಿಸಿದಾಗ ಮನಸ್ಸಿನಲ್ಲಿ ಅಮಲು ಹತ್ತುತ್ತದೆ. ಅಮಲು ಹತ್ತಿದ ಮನಸ್ಸಿಗೆ ವಿವೇಚನಾ ಶಕ್ತಿಯು ಕಡಿಮೆಯಾಗುತ್ತದೆ. ಪಂಚೇಂದ್ರಿಯಗಳಿಂದ ಸಂಗ್ರಹಿಸಿದ ಸುದ್ದಿಗಳಿಗೆ ವಿಪರೀತಾರ್ಥವನ್ನು ಮಾಡುವಂತಾಗುತ್ತದೆ. ಈ ಕಾರಣದಿಂದ ಮನೋಕಾಲದ ಗತಿಯೂ ಪಲ್ಲಟವಾಗುತ್ತದೆ. ಹಿಂದು, ಇಂದು, ಮುಂದು, ಎನ್ನುವ ಸಾಮಾನ್ಯವಾಗಿ ಭೇದವಿರುವ ವ್ಯವಹಾರಿಕ ಅಥವಾ ಪಂಚಾಂಗದ ಕಾಲವು, ಮಸುಕು ಮಸುಕಾಗುತ್ತದೆ. ಹಿಂದಾದುದನ್ನು ಇಂದಾಯಿತು ಇಂದಾದುದನ್ನು ಮುಂದಾಗುತ್ತದೆ. ಮುಂದಾಗುವುದೆಲ್ಲ ಇಂದೇ, ಇತ್ಯಾದಿ ಕಲಸುಮೇಲೋಗರವು ಮನಸ್ಸಿನಲ್ಲಾಗಿ, ಮನೋಕಾಲವೂ ಹುಚ್ಚೆದ್ದು ಹರಿಯುತ್ತದೆ.

ಮಾದಕ ಪದಾರ್ಥಗಳಲ್ಲಿ ಹಲವಾರು ತೆರನಿವೆ. ಕೆಲವು ಮನಸ್ಸಿನಲ್ಲಿ ಭ್ರಮೆಯನ್ನು ಉಂಟುಮಾಡುತ್ತವೆ. Hallucinogens ಎಂದು ಇವನ್ನು ಹೆಸರಿಸುತ್ತಾರೆ. ಗಾಂಜಾ L.S.D. 25, ಮಿತಿಮೀರಿದ ಪ್ರಮಾಣದಲ್ಲಿ ಅಫೀಮು ಮತ್ತು ಕೆಲವು ರಾಸಾಯನಿಕ ನವ್ಯ ಔಷಧಿಗಳು; ಇವೆಲ್ಲವೂ ಮನಸ್ಸಿನಲ್ಲಿ ಭ್ರಮೆಯನ್ನು ಉಂಟುಮಾಡುತ್ತವೆ. ಮನಸ್ಸಿನಲ್ಲಿ ಭ್ರಮೆಯುಂಟಾದಾಗ

ಕುರ್ಚಿಯ ಕಾಲು ಅಪ್ಸರೆಯ ಕಾಲುಗಳಂತೆ ಕಾಣುತ್ತವೆ. ಗೋಡೆಯ ಮೇಲೆ ಆಡ್ಡಾಡುವ ಹಲ್ಲಿಗಳು ಕೆಂಜಾನೆಗಳಂತೆ Pink Elephants ಕಾಡುತ್ತವೆ. ಮರಳುಗಾಡಿನಲ್ಲಿ ಹೊಚ್ಚ ಹಸಿರು ತರುತಲ ನಿವಾಸಗಳನ್ನು ಪ್ರತ್ಯಕ್ಷಿಸುತ್ತವೆ. ಭ್ರಮೆಯು ಮುತ್ತುವರಿದಾಗ, ತಾರ್ಕಿಕ ಮನಸ್ಸು ಅದರೆದುರು, ಶೂನ್ಯವಾಗುತ್ತದೆ. ಇಂತಹ ಮನೋಸ್ಥಿತಿಯಲ್ಲಿ 'ಕಾಲ' ವು ಸ್ಥಿರಕಾಲಂಗಳನ್ನು ಕಳೆದುಕೊಂಡು, ಜಂಗಮ ರೆಕ್ಕೆಗಳನ್ನೇರಿ, ತನ್ನ, ಹಾಗೂ 'ಸತ್ಯ ಶಿವ ಸುಂದರನ' ಬಳಿಗೆ; ತೌರುಮನೆಗೆ. ಜೂಜೋಡಲು ತೊಡಗುತ್ತದೆ. ಆದರೆ ಸ್ಥಿರವಾದ ಕಾಲುಗಳನ್ನು ಕಳೆದುಕೊಂಡಾಗ ಕುಂಟನಾದೆ, ಮುನ್ನಡೆಯಲಾರೆ, ಎನ್ನುವ ವಾಸ್ತವಿಕ ಅರಿವು 'ಮಾಯ'ವಾಗುತ್ತದೆ. ಮಾಯೆಯು ಹರಿದಾಗ, ಶಾಶ್ವತವಾದ, ಅವಿನಾಶಿಯಾದ, ಆಧ್ಯಾತ್ಮಿಕ ಮೌಲ್ಯದ ಅಂಚನ್ನು ಮನಸ್ಸು ಭ್ರಮಿಸುತ್ತದೆ. ಇಂತಹ ಪರಿಸ್ಥಿತಿಯಲ್ಲಿಯೂ ಮನೋಕಾಲವು 'ಕಾಲೋಸ್ಮಿ' ನಾನೇ 'ಕಾಲ' ಎಂದು ಮೆರೆಯುತ್ತದೆ. ಮಾದಕದ ಅಮಲು ಇಳಿದಾಗ, ವಾಸ್ತವಿಕ ಪರಿಸ್ಥಿತಿಯ ಅರಿವು ಮತ್ತೆ ಬಂದಾಗ, ತಲೆಯ ನೋವು ದೇಹದ ಜಡತ್ವ ಇತ್ಯಾದಿ ಕಾರಣಗಳಿಂದ ಮನೋಕಾಲವು ನಿಧಾನವಾಗಿ ಪರಿದಂತೆ ಭಾಸವಾಗುತ್ತದೆ. ಆದರೂ 'ಭ್ರಮೆಯ ತುಸು ನೆನಪು ಉಳಿದಿರುತ್ತದೆ. ಸವಿಯಾಗಿದ್ದ ಆ ನೆನಪನ್ನು ಮರುಕಳಿಸಿಕೊಳ್ಳಲು, ತಿರುಗಿ ಮಾದಕ ಪದಾರ್ಥಗಳನ್ನು, ಅವೆಷ್ಟೇ ಕಹಿಯಾಗಿದ್ದರೂ, ಸೇವಿಸುವಂತೆ ಆಗುತ್ತದೆ. ತಿಂದ ನಂತರ ಹೊಟ್ಟೆಯ ಶೂಲೆಯು ಬರುತ್ತದೆ ಎಂದು ಗೊತ್ತಿದ್ದರೂ ನರಿ ಕೆಕ್ಕೆ ಕಾಯಿಗಳನ್ನು ಪುನಃ ಪುನಃ ತಿನ್ನುವಂತೆ.

## 7. ಕನಸಿನ ಕಾಲ

ಮನಸ್ಸಿನ ಹಲವಾರು ಅವಸ್ಥೆಗಳಲ್ಲಿ ಸ್ವಪ್ನದ ಆವಸ್ಥೆಯು ಮುಖ್ಯವಾದುದು. ಜಾಗ್ರತಾವಸ್ಥೆಯಲ್ಲಿ ಹೊರಪ್ರಪಂಚದ ಅರಿವು ಮತ್ತು ಸಮಸ್ಯೆಗಳನ್ನು ಮನಸ್ಸು ಪಡೆಯುತ್ತದೆ. ನಂತರ ಬರುವ ನಿದ್ರಾವಸ್ಥೆಯಲ್ಲಿ ಹೊರಪ್ರಪಂಚದ ಅರಿವು ಇಲ್ಲವಾಗುತ್ತದೆ, ಅಂದರೆ ಮನಸ್ಸು ಸ್ತಬ್ಧವಾಯಿತು ಅಂತೇನಲ್ಲ. ಮನಸ್ಸು ಕೆಲಸವನ್ನು ಮಾಡುತ್ತಲೇ ಇರುತ್ತದೆ. ಆದರೆ Consciousness ಮಾಡುತ್ತಿರುವ ಕೆಲಸದ ಅರಿವು ಇರುವುದಿಲ್ಲ. ಮನಸ್ಸಿನಲ್ಲಿ

ತೋರಮನಸ್ಸು ಮತ್ತು ಅದಕ್ಕಿಂತಲೂ ಆರೇಳು ಪಟ್ಟು ಹೆಚ್ಚಾಗಿರುವ ಆಳ ಮನಸ್ಸು ಎನ್ನುವ ಮುಖ್ಯವಾದ ಎರಡು ಭಾಗಗಳನ್ನು ಗಮನಿಸಬಹುದು. ತೋರ ಮನಸ್ಸು ಎಂದರೆ Conscious mind ಇದರಲ್ಲಿ ನಡೆಯುವುದೆಲ್ಲವೂ ನಮ್ಮ ಅರಿವಿಗೆ ಬರುತ್ತದೆ. ಆಳಮನಸ್ಸಿನಲ್ಲಿ ಆಗುವುದಾದರೂ ನೇರವಾಗಿ ನಮ್ಮ ಗಮನಕ್ಕೆ ಬರುವುದಿಲ್ಲ. ಆದರೂ ಅದರಲ್ಲಿ ಕಾರ್ಯ ಚಟುವಟಿಕೆಯು ಅವಿಶ್ರಾಂತವಾಗಿ ನಡೆಯುತ್ತಲೇ ಇರುತ್ತದೆ. ನಿದ್ರೆಯ ಮೊದಲ ಹಂತದಲ್ಲಿ ಆಳಮನಸ್ಸಿನ ಚಟುವಟಿಕೆಗಳು, ಜಾಗ್ರತಾವಸ್ಥೆಯಲ್ಲಿನಕ್ಕಿಂತ ಕಡಿಮೆಯಾಗು ತ್ತದೆ. ಎರಡನೆಯ ಮತ್ತು ಮೂರನೆಯ ಹಂತಗಳಲ್ಲಿ ಆಳ ಮನಸ್ಸಿನ ಚಟು ವಟಿಕೆಗಳು ಇನ್ನೂ ಕಡಿಮೆಯಾಗುತ್ತವೆ. ನಾಲ್ಕನೆಯ ಹಂತದಲ್ಲಿ, ಗಾಢ ನಿದ್ರೆಯಲ್ಲಿ, ಡೆಲ್ಟ ಸ್ಲೀಪ್ ಎನ್ನುವ ಹಂತದಲ್ಲಿ, ಬಹಳಷ್ಟು ಕಡಿಮೆಯಾಗು ತ್ತದೆ. ಆದರೆ ಸಂಪೂರ್ಣವಾಗಿ ಎಂದೂ ನಿಂತುಹೋಗುವುದಿಲ್ಲ.

ಗಾಢ ನಿದ್ರೆಯಿಂದ ಹಂತ ಹಂತವಾಗಿ ಎಚ್ಚೆತ್ತುಕೊಳ್ಳುವಾಗ, ಮೊದಲ ಹಂತದ ನಿದ್ರೆಗೆ ಬರುವುದಿಲ್ಲ. ಬದಲು, ಸ್ವಪ್ನಾವಸ್ಥೆಯ ನಿದ್ರೆಗೆ ಬರುತ್ತದೆ. ಸ್ವಪ್ನಾವಸ್ಥೆಯ ನಿದ್ರೆಯು ಒಂದು ತೆರನಾದ ಎಚ್ಚರದ ಅವಸ್ಥೆ ಎಂದು ಮನೋ ವಿಜ್ಞಾನಿಗಳು ಕೆಲವರ ಅಭಿಮತ. ಏಕೆಂದರೆ ಸ್ವಪ್ನಾವಸ್ಥೆಯಲ್ಲಿ ಮನಸು ಹೊರ ಪ್ರಪಂಚದ ವಿಷಯಗಳನ್ನೇ ಆಧಾರವಾಗಿ ಹೊಂದಿರುತ್ತದೆ. ಹಾಗೂ ಹೊರ ಪ್ರಪಂಚದಿಂದ ಪ್ರೇರಿತವಾದ ತನ್ನ ಮನಸ್ಸಿನ ಪ್ರತಿಕ್ರಿಯೆಗಳನ್ನೂ ಆಧಾರ ಮಾಡಿಕೊಂಡಿರುತ್ತದೆ. ಸ್ವಪ್ನಗಳಲ್ಲಿ ಕೆಲವು ಪೂರ್ಣ ಎಚ್ಚರವಾದ ಮೇಲೂ ಜ್ಞಾಪಕದಲ್ಲಿರುತ್ತದೆ. ಬಹುಪಾಲು ಕನಸುಗಳು ಮರೆತುಹೋಗ ತ್ತವೆ. ಆದರೆ ಕನಸುಗಳು ಎಲ್ಲರಿಗೂ ಲಭ್ಯವಾಗಿಯೇ ಆಗುತ್ತವೆ.

ಕನಸುಗಳಲ್ಲಿ ಮನೋಕಾಲದ ಗತಿಯೇನು ? ಗಡಿಯಾರದ ಕಾಲಕ್ಕೂ ಕನಸಿನ ಕಾಲಕ್ಕೂ ಅರ್ಥಾರ್ಥಿಕ ಸಂಬಧವೂ ಇರುವುದಿಲ್ಲ. ಹತ್ತು ವರ್ಷ ಗಳಲ್ಲಿ ನಡೆದ ಘಟನೆಗಳೆಲ್ಲವೂ, ಕನಸಿನ ಕೇವಲ ಒಂದೆರಡು ನಿಮಿಷಗಳಲ್ಲಿ ಯಥಾರ್ಥವಾಗಿ ನಡೆದಂತೆ ಭಾಸವಾಗುತ್ತದೆ. ಅಂದರೆ ಕನಸಿನ ಕಾಲದ ಗತಿಯು ಅತಿವೇಗವಾಗಿದೆ ಎನ್ನಲೂಬಹುದು.

ಕೆಲವು ಕನಸುಗಳಲ್ಲಿ, ನಮ್ಮ ಇಷ್ಟಮಿತ್ರರಾದವರು, ಯಾವುದೋ ದೇಶದಲ್ಲಿರುವವರು, ಇನ್ನೊಂದು ವಾರವೋ ಅಥವಾ ತಿಂಗಳಿನ ನಂತರ ಅಪ

ಘಾತಕ್ಕೀಡಾಗಿ ಸತ್ತಂತೆ ಕಾಣಬರಬಹುದು. ದಿಟವಾಗಿಯೂ ಹಾಗೆಯೇ ಆಗುತ್ತದೆ, ಆ ಅವಧಿಯ ನಂತರ. ಇಂತಹ ಭವಿಷ್ಯವನ್ನು ಕಾಣಿಸುವ ಕನಸುಗಳು ಅತಿ ವಿರಳ. ಆದರೂ ಸಾಧ್ಯ ಎನ್ನುವುದಕ್ಕೆ ಸಾಕಷ್ಟು ಸಾಕ್ಷ್ಯಗಳಿವೆ, ಅಂದರೆ ಇಂತಹ ಕನಸುಗಳಲ್ಲಿ ಕನಸಿನ ಕಾಲವು ಬೆಳಕಿನ ವೇಗಕ್ಕಿಂತ ಹೆಚ್ಚಾಗಿ ಹರಿದಿದೆ ಎನ್ನಬೇಕು. ಆ ಕಾರಣದಿಂದ ದೇಶ-ಕಾಲದ ಅವಿಚ್ಛಿನ್ನ ಪರಿಸ್ಥಿತಿಯಿಂದ, ಕಾಲವು ಜಿಗಿದು ಹಾರಿದೆ ಎನ್ನಬಹುದು. ಆಗ, ಕಾಲವು ಮುಂದೆ ಸಾಗಿ, ಮುಂದೆಂದೋ ದೇಶದಲ್ಲಿ, ಅಂದರೆ Space ನಲ್ಲಿ, ನಡೆಯುವುದನ್ನು ಪ್ರತ್ಯಕ್ಷಿಸುತ್ತದೆ. ಭವಿಷ್ಯವನ್ನು ಈ ರೀತಿ ಕನಸುಗಳಲ್ಲಿ ಕಾಣುವುದು ವೈಜ್ಞಾನಿಕವಾಗಿ ಅರ್ಥವಾಗುತ್ತದೆ; ಕನಸಿನ ಕಾಲದ ಗತಿಯನ್ನು ಅರಿತರೆ. ಇಂತಹ ಸಂದರ್ಭಗಳಲ್ಲಿ ಕನಸಿನ ಕಾಲವು ಬಲು ಮುಂದಕ್ಕೆ ಹರಿದಂತೆಯೇ-ಗಡಿಯಾರದ ಕಾಲದ ದೃಷ್ಟಿಯಿಂದ ನೋಡಿದಾಗ.

ಕಾಲವು (Time), ದೇಶದೊಂದಿಗೆ (ಎಂದರೆ Spaceನೊಂದಿಗೆ) ಅವಿಚ್ಛಿನ್ನವಾಗಿದೆ ಎಂಬುದನ್ನು ಭೌತಶಾಸ್ತ್ರದ ಪ್ರಕಾರ ತಿಳಿದೆವು. ಆದರೆ ಕನಸಿನ ಕಾಲವು ದೇಶದೊಂದಿಗೆ ಅವಿಚ್ಛಿನ್ನವಾಗಿದೆ ಎಂದು ಹೇಳುವಂತೆಯೇ ಇಲ್ಲ. ಕನಸುಗಳಲ್ಲಿ ದೇಶವೂ ಯದ್ವಾತದ್ವಾ ಅಲ್ಲೋಲಕಲ್ಲೋಲವಾದಂತೆ ಭಾಸವಾಗುತ್ತದೆ. ಕಾಲವೂ ಕೂಡ ದೇಶಕ್ಕೆ ಅನ್ವಯವಾಗದೆಯೇ, ತನ್ನಷ್ಟಕ್ಕೆ ತಾನು ಎಗರಾಡುತ್ತಿದೆಯೇನೋ ಎನಿಸುತ್ತದೆ. ಕನಸಿನ ಕಾಲದ ನಡಿಗೆಗೆ ಯಾವ ಸೂತ್ರ (Formulae) ವನ್ನೂ ಅಳವಡಿಸುವಂತಿಲ್ಲ. ಒಂದು ರೀತಿಯಲ್ಲಿ ಕನಸಿನ ಕಾಲವು ಸರ್ವತಂತ್ರ ಸ್ವತಂತ್ರ. ಯಾವುದೋ ಅವ್ಯಕ್ತವಾದ ಎಂದಿನದೋ ಪ್ರಾರಬ್ಧವು ಅಗೋಚರವಾದ ಕನಸಿನ ಕಾಲವನ್ನು ಕುಣಿದಾಡಿಸುತ್ತದೆ ಎನ್ನಬಹುದು.

ಕೆಲವು ಭಯಾನಕ ಕನಸುಗಳಲ್ಲಿ (Night-Mares) ಎಚ್ಚರವಾಗುವ ಮುನ್ನ ಗಡಿಯಾರದ ಪ್ರಕಾರ ಕೆಲವೇ ನಿಮಿಷಗಳಲ್ಲಿ, ಕನಸಿನ ಕಾಲವು ನಿಂತೇ ಹೋಯಿತು; ಎಲ್ಲವೂ ಮುಗಿದುಹೋಯಿತು ಎಂದು ತೀವ್ರ ಹೆದರಿಕೆಯುಂಟಾಗುತ್ತದೆ. ಕೊನೆಮೊದಲಿಲ್ಲದ, ಅನಾದಿ ಅನಂತವಾದ ಹಾಗೂ ಗಂಭೀರವಾದ ಭೈರವ ಸ್ವರೂಪದ ಕಾಲದ ಅನುಭವವು ಭಯಾನಕ ಕನಸುಗಳ ಒಂದೆರಡು ನಿಮಿಷಗಳಲ್ಲಿ ಆಗುತ್ತದೆ. ಎಚ್ಚರಗೊಂಡು ಜಾಗೃತಾವಸ್ಥೆಗೆ

ಬಂದ ಮೇಲೂ ಭಯಾನಕ ಅನುಭವವು ತುಸು ಕಾಲ ಮುಂದುವರೆಯುತ್ತದೆ. ಆದರೆ ಕಾಲದ ಅರಿವು ಜಾಗ್ರತಾವಸ್ಥೆಯ ಅರಿವಿನದಾಗಿರುತ್ತದೆ.

ಅಂದರೆ ಕನಸಿನ ಕಾಲವು ಅವ್ಯವಸ್ಥಿತವಾಗಿ ಹರಿದಂತೆ ಇದ್ದರೂ, ಅದೂ ನಿಧಾನವಾಗಬಹುದು, ಸ್ತಬ್ಧವಾಗಬಹುದು, ಅತಿ ವೇಗವಾಗಬಹುದು ಮತ್ತು ಹಿನ್ನಡೆಯಲೂ ಬಹುದು.

## 8 ವಶೀಕರಣ ಮತ್ತು ಕಾಲ

ವಶೀಕರಣ ಅಥವಾ Hypnosis, ಎಂಬುದು ಭಾರತದಲ್ಲಿ ಸಹಸ್ರಾರು ವರ್ಷಗಳಿಂದಲೂ ತಿಳಿದ ವಿಷಯ. ಪಾಶ್ಚಾತ್ಯರಲ್ಲಿ ಒಂದೆರಡು ಶತಮಾನಗಳಿಂದ ಈ ವಿಷಯದಲ್ಲಿ ಸಾಕಷ್ಟು ಅಧ್ಯಯನವನ್ನು ಮಾಡಲಾಗಿದೆ. ಮನೋವೈದ್ಯರುಗಳು ಚಿಕಿತ್ಸಾಕ್ರಮಗಳಲ್ಲಿ Hypnosis ಅನ್ನೂ ಬಳಸಿಕೊಳ್ಳಲಾರಂಭಿಸಿದ್ದಾರೆ. ವಶೀಕರಣಕ್ಕೆ ಒಳಗಾದವನ ಮನಸ್ಸು ವಶೀಕರಣ ಮಾಡುವವನು ಇತ್ತ ಸಲಹೆಗಳಿಗೆ ತಕ್ಕಂತೆ ನಡೆದುಕೊಳ್ಳುತ್ತದೆ. ಆದರೆ ಅವನ ತೋರ (Conscious) ಮನಸ್ಸು ಮಂಕು ಹಿಡಿದಂತಾಗುತ್ತದೆ. ಹೊರ ಪ್ರಪಂಚದ ಪರಿವೆಯೂ ಇರುವುದಿಲ್ಲ. ನಿದ್ರೆಯಲ್ಲಿದ್ದಂತೆ. ನಿದ್ರೆಯಲ್ಲಿ ದೇಹವು ಸಡಿಲವಾಗಿರುತ್ತದೆ. ವಶೀಕರಣವಾದಾಗ ದೇಹವು ಬಿಗಿದುಕೊಂಡಿರುತ್ತದೆ. ಮೂರ್ಛೆರೋಗವು ಬಡಿದವರ ದೇಹವು ಸೆಟೆದುಕೊಂಡಿರುತ್ತಲ್ಲಾ; ಹಾಗೇ ವಶೀಕರಣ ಮಾಡಲ್ಪಟ್ಟವನ ದೇಹವು ಸೆಟೆದುಕೊಂಡಿರುತ್ತದೆ. ದವಡೆಗಳು ಗದಿಹಾಕಿಕೊಂಡಿರುತ್ತವೆ.

ಇಂತಹ ಅನುಭವದಿಂದ ಎಚ್ಚೆತ್ತ ಮೇಲೆ, ಆ ಅವಧಿಯಲ್ಲಿ ಮನಸ್ಸಿನಲ್ಲಾದ ಯಾವ ಸ್ಮರಣೆಯೂ ಇರುವುದಿಲ್ಲ. ಆಳ ಮನಸ್ಸೇನೋ ವಶೀಕರಣಿಕನ ಸಲಹೆಗಳನ್ನು ಸ್ವೀಕರಿಸುತ್ತದೆ. ಅದಕ್ಕೆ ಅನುಗುಣವಾಗಿ ನಡೆದುಕೊಳ್ಳುತ್ತದೆ. ಆಳ ಮನಸ್ಸಿನ ಚಲನವಲನಗಳು ತೋರ ಮನಸ್ಸಿಗೆ ವಿರದಿರುವುದರಿಂದ, ಯಾವ ಸ್ಮರಣೆಯೂ ಉಳಿಯುವುದಿಲ್ಲ. ಈ ಕಾರಣದಿಂದಾಗಿ ವಶೀಕರಣವಾದವನ ಮನೋಕಾಲದ ಗತಿಯೇನು ಎಂಬುದು ಸ್ಪಷ್ಟವಾಗುವುದಿಲ್ಲ.

ವಶೀಕರಣಿಕನ ಮನೋಕಾಲದ ಗತಿಯೇ, ವಶೀಕರಣವಾದವನಲ್ಲೂ ಇರಬಹುದು ಎಂದು ಸ್ಥೂಲವಾಗಿ ಊಹಿಸಬಹುದು.

## 9. ಜಾನ್ ವಿಲಿಯಂ ಡನ್ನೆ ಮತ್ತು ಸೀರಿಯಲಿಸಂ

John William Dunne and Scrialisam

ಸೈನಿಕರ ಸಂಸಾರ ಒಂದರಲ್ಲಿ ಇಂಗ್ಲೆಂಡಿನ ಪ್ರಜೆಯಾಗಿ 1875ರಲ್ಲಿ ಹುಟ್ಟಿದ 'ಡನ್ನೆ' ವಿಮಾನಗಳ ಇಂಜಿನಿಯರ್ ಆಗಿ ಕೆಲಸಮಾಡುತ್ತಿದ್ದ. ಸಡಗರದ ಬಾಳನ್ನು ಮೋಜಿನಿಂದ ನಡಸಬೇಕೆಂಬ ಆಸೆಯು ಎಲ್ಲರಂತೆ ಅವನಿಗೂ ಇತ್ತು. ಪಟ್ಟಣದ ಪ್ರಸಿದ್ಧವಾದ ಮೂರು ಕ್ಲಬ್ಬುಗಳ ಸದಸ್ಯನಾಗಿದ್ದ. ಮೊದ ಮೊದಲು ಅಲ್ಲಿಗೆ ಹೋಗುತ್ತಲೂ ಇದ್ದ.

ಆದರೆ ನಮ್ಮ ನಿಮ್ಮಂತೆ ಇದ್ದ ಇವನ ತಲೆಯಲ್ಲಿ ಯೋಚನೆಯ ಹುಳುವೊಂದು ಕಾಡತೊಡಗಿತು. 'ಕಾಲ' ಎಂದರೇನು ? ಅದರ ವಿಶ್ಲೇಷಣೆ ಹೇಗೆ? ಎಂಬುದೇ ಆ ಯೋಚನೆಯ ಹುಳು. 'ಕಾಲ'ದ ಅರಿವಿಗಾಗಿ ಅವ ಬಿಡುವಾದಾಗಲೆಲ್ಲ ತಪಸ್ಸು ಮಾಡಿದ. 'ಕಾಲ'ದ ವಿಷಯವನ್ನು ತಿಳಿಯ ಬಯಸುವವರೆಲ್ಲರಿಗೂ 'ಡನ್ನೆ'ಯ ಸಂಶೋಧನೆಗಳು ಬಲು ಮುಖ್ಯ. ಅಂತಹವರಿಗೆಲ್ಲಾ ಜಾನ್ ವಿಲಿಯಂ ಡನ್ನೆ ಚಿರಂಜೀವಿಯಾಗಿರುತ್ತಾನೆ: ಅಂದರೆ ಕಾಲಾತೀತನಾಗಿರುತ್ತಾನೆ. ಕಾಲದ ಅಧ್ಯಯನ ಮಾಡುವವರಿಗೂ ಆಂತರಿಕ ಪ್ರೇರಣೆಯು ಇಂತದೇ ಏನೋ ?

ಎದುರುಬದುರು ಎರಡು ಕನ್ನಡಿಗಳನ್ನು ಇಟ್ಟರೆ ಒಂದರಲ್ಲಿ ಇನ್ನೊಂದರ ಪ್ರತಿ ಬಿಂಬವು ಕಾಣಿಸುತ್ತದೆ. ಆ ಪ್ರತಿಬಿಂಬದಲ್ಲಿ ಇನ್ನೊಂದು ಕನ್ನಡಿಯು ಪ್ರತಿ ಪ್ರತಿಬಿಂಬವಾಗಿ ಕಾಣಿಸುತ್ತದೆ. ಈ ಪ್ರತಿ ಪ್ರತಿಬಿಂಬಗಳ ಸರವು ಅನಂತವಾಗಿರುತ್ತದೆ. ಅದರ ಅಂತ್ಯವೇ ಕಾಣಿಸುವುದಿಲ್ಲ. ಕಾಣಿಸದ, ವ್ಯಕ್ತವಾಗದ ಆ ಅಂಚಿನಲ್ಲಿ ಇರಬಹುದಾದುದು ಮಾನವ ಮನಸ್ಸಿಗೆ ಸ್ಪಷ್ಟವಾಗದಿದ್ದರೂ, ಅದರ ನೆರಳಂಚು ಗಮನಕ್ಕೆ ಬಂದೇ ಬರುತ್ತದೆ.

ಈ ತರ್ಕವನ್ನು ಅವ ಕಾಲದ ಅರಿವಿಗೆ ಬಳಸಿಕೊಂಡ. ಅವನ ಸಿದ್ಧಾಂತಗಳು ಈ ರೀತಿ:—

(1) ಕನಸುಗಳಲ್ಲಿ 'ಕಾಲವು' ಏರುಪೇರಾಗುತ್ತದೆ.

(2) ಕಾಲದ ಲೀಲೆಯು, ಕಾಲದ 'ಅ-ಗಣಿತ' ಆಟಗಳು, ಮನೋತೀತ ರಾದ ಮಾನವರಿಗೆ ಮತ್ತು ಸರ್ವಸಂಗ ಪರಿತ್ಯಾಗವನ್ನು ಮನಃಪೂರ್ವಕ ಮಾಡಿದ ಸಿದ್ಧರಿಗೆ ಸರಳವಾಗಿ ಸ್ಪಷ್ಟವಾಗಿ ಅರಿವಾಗುತ್ತದೆ. ಅಷ್ಟೇ ಅಲ್ಲ, ಮಂತ್ರವಾದಿಗಳಿಗೂ ಐಂದ್ರಜಾಲಿಕರಿಗೂ ಪವಾಡಪುರುಷರಿಗೂ ಗೋಚರ ವಾಗುತ್ತದೆ. ಇಷ್ಟೇ ಅಲ್ಲ, ಸಾಮಾನ್ಯ ಮನುಷ್ಯರಿಗೂ ತಿಳಿದುಬರುತ್ತದೆ. ಕೆಲವೊಮ್ಮೆ.

ಆತನು ನುಡಿದ ವಾಕ್ಯಗಳ ಭಾವಾನುವಾದವಿದು. ಅವನು ಅಂದುದು–

Time displayed it's tricks not only for mystics and saints: and wizards and Sorcerers: but also for the common man.

ಅವನು ಮುಂದುವರಿದು—

(3) He rejects the idea, almost a dogma now: that our lives are completely contained by chronological, uni-dimensional time, without becoming other-worldly.

ನಮ್ಮ ಬಾಳು ಬದುಕು, ಗಡಿಯಾರದ, ಪಂಚಾಂಗದ, ಹಾಗು ಏಕ ದಿಕ್ಕಿನ ಕಾಲದಿಂದ ಆವೃತವಾಗಿದೆ ಎಂಬುದನ್ನು, ಡನ್ನೆ ತಳ್ಳಿಹಾಕುತ್ತಾನೆ. ಮತ್ತೊಂದು ಪ್ರಪಂಚದ ಸಂಪರ್ಕವಿಲ್ಲದೆ, ಕಾಲವು ಇರಲಾಗುವುದಿಲ್ಲ.

ಕಾಲದ ವೈಜ್ಞಾನಿಕ ಅರಿವಿಗೆ ತಳಹದಿಯಲ್ಲೊಂದು ಅಡಿಪಾಯವನ್ನು ಹಾಕಿದ ಜಾನ್ ವಿಲಿಯಂ ಡನ್ನೆ, ಈ ಪ್ರಪಂಚದ; ಈ ಲೋಕದ ಕಾಲ್ಪನಿಕ ಕಾಲಕ್ಕೂ, ಅದ್ಭುತವಾದ ಯಂತ್ರ ತಾಂತ್ರಿಕ ಸಾಧನೆಗಳನ್ನು ಪ್ರತ್ಯಕ್ಷಿಸಿದ, ಈ ಲೋಕದ ಕಾಲ್ಪನಿಕ ಕಾಲಕ್ಕೂ; ಮತ್ತು ಪರಲೋಕದ 'ಕಾಲ' ಕ್ಕೂ ಸೇತುವೆಯನ್ನು ಕಟ್ಟಿದ್ದಾನೆ.

ವೈಜ್ಞಾನಿಕವಾಗಿ ಇದನ್ನು ಹೇಳುವುದಾದರೆ: ಭೌತಕಾಲ, ದೈಹಿಕ ಕಾಲ; ಮನೋಕಾಲ; ಕನಸುಕಾಲ; ಇವೆಲ್ಲವೂ ಮನೋತೀತವಾದ ಕಾಲ ದೊಂದಿಗೆ ನೊಗವನ್ನು ಹೊತ್ತಿದೆ ಎನ್ನಬೇಕು. ಮನೋಕಾಲ; ಮತ್ತು ಮನೋತೀತ ಕಾಲಕ್ಕೂ ತಾಳಿಯನ್ನು ಕಟ್ಟಿಸಿದ ಪುರೋಹಿತ, ಡನ್ನೆ.

10. W. T. Space of Princeton. ಪ್ರಿನ್ಸ್‌ಟನ್ ವಿಶ್ವವಿದ್ಯಾಲಯದ, W. T. Space ಎಂಬ ಅನ್ವರ್ಥ ನಾಮಧೇಯನು ಮನೋಕಾಲ ಮತ್ತು ಮನೋತೀತ ಕಾಲ; ಇವೆರಡರ ನಿಕಟ ಸಂಬಂಧವನ್ನು ಈ ರೀತಿ ವಿವರಿಸುತ್ತಾನೆ:—

The mystic lives in both orders: that of eternity and that of time. He passes from one to the other. This is also true of other men in the degree in which the mystic consciousness is developed in them, but this dual existence gives rise to confusion of the one order with the other.

ಇದರ ಭಾವಾನುವಾದವು ಹೀಗಾಗಬಹುದು:— ಅನಾದಿ ಅನಂತವಾದುದರಲ್ಲೂ, ಮತ್ತು ಕಾಲದಲ್ಲೂ, ಈ ಎರಡೂ ಅರಿವಿನಲ್ಲಿ, ಮನೋತೀತ ಸ್ಥಿತಿಯಲ್ಲಿರುವವನು ಅನುಭವಿಸುತ್ತಿರುತ್ತಾನೆ. ಒಂದರಿಂದ ಇನ್ನೊಂದಕ್ಕೆ ಅವ ಸಾಗುತ್ತಿರುತ್ತಾನೆ. ಶ್ರೀಸಾಮಾನ್ಯನಿಗೂ ಇದು ವಾಸ್ತವ; ಆದರೆ ಅವನ ಮನೋತೀತದ ಹಂತಕ್ಕೆ ಅನುಗುಣವಾಗಿರುತ್ತದೆ. ಬಾಳಿನಲ್ಲಿ ಈ ಎರಡೂ ಅನುಭವಗಳು ಶ್ರೀಸಾಮಾನ್ಯನಲ್ಲಿ ಒಮ್ಮೊಮ್ಮೆ ಕಲಸುಮೇಲೋಗರವಾಗುತ್ತದೆ.

ಮನೋತೀತ ಕಾಲವನ್ನೇ ಅನಾದಿ ಅನಂತವಾದುದು ಎನ್ನಬೇಕು.

# ಅಧ್ಯಾಯ-೪

## 1. ಮನೋತೀತ ಕಾಲ:—

ಮನಸ್ಸಿನ ಎಲ್ಲ ಅವಸ್ಥೆಗಳಲ್ಲಿಯೂ ಕಾಲದ ಅನುಭವವು ಒಂದಲ್ಲ. ಒಂದು ರೀತಿಯಲ್ಲಿರುತ್ತದೆ. ಆದರೆ ಮನೋತೀತ ಸ್ಥಿತಿಯಲ್ಲಿ, ಮನಸ್ಸು ಶೂನ್ಯವಾಗಿದ್ದರೂ. ಅರಿವು ಅಥವಾ ಎಚ್ಚರವು ಇರುತ್ತದೆ, ಅತ್ಯಂತ ಸುಖ ವಾಗಲಿ, ಪರಿಮಿತ ದುಃಖವಾಗಲೀ ಸಂಭವಿಸಿದಾಗ, ತುಸು ಕಾಲ ಅಂತಹ ಮಾನವನ ಮನಸ್ಸು ಶೂನ್ಯವಾದಂತೆ ಇರುತ್ತದೆ. ಯೋಚನೆಗಳಾವುವೂ ಮನಸ್ಸಿನಲ್ಲಿ ಸುಳಿದಾಡುವುದೇ ಇಲ್ಲ. 'I was feeling completely dazed and was thoughtless' ಎಂದೊಬ್ಬರು ನುಡಿದಿದ್ದರು ದುರ್ಭರವಾದ ದುಃಖವು ಅವರಿಗೆ ಬಡಿದಾಗ, ಬೆಳೆದು ಬಂದಿದ್ದ ಹಿರಿಯ ಮಗನನ್ನು ಆಕಸ್ಮಿಕವಾಗಿ ಅತ್ಯಂತ ಘೋರ ರೀತಿಯಲ್ಲಿ ಕಳೆದುಕೊಂಡಾಗ. ಮನಸ್ಸನ್ನು ಮೀರಿದ ಕಾಲದ ಅನುಭವವಿದು. ದುಃಖದಂತೆಯೇ ಇದೂ ಅನಾದಿ ಅನಂತವಾಗಿ ತುಸುಕಾಲ ಅನಿಸುತ್ತದೆ. ಅತ್ಯಂತ ಸುಖವನ್ನು ತೀಕ್ಷ್ಣವಾಗಿ ಅನುಭವಿಸುವ ಹಲವು ಕ್ಷಣಗಳಲ್ಲೂ, ಮನಸ್ಸು ಇತರ ಯಾವ ಯೋಚನೆಗಳಿಗೆ ಎಡೆಕೊಡದೆ, ಶೂನ್ಯವಾದಂತಿರುತ್ತದೆ. ಆದರೆ ಎಚ್ಚರವೂ ಇರುತ್ತದೆ. ಸಾಮಾನ್ಯ ಮನುಷ್ಯರಲ್ಲಿ ಕೂಡ ಇಂತಹ ಮನೋತೀತ ಅನುಭವಗಳು ಆಗುತ್ತವೆ.

'ರೋಗಿಯನ್ನು ಪರೀಕ್ಷೆ ಮಾಡಿದಾಗ, ಇದು ಈ ಬೇನೆ ಇರಬಹುದು ಎಂಬ ನಿರ್ಧಾರಕ್ಕೆ ಬಂದೆ. ಸೂಕ್ತ ಚಿಕಿತ್ಸೆಯನ್ನು ಮಾಡಿದೆ. ಆದರೆ ಆರೇಳು ದಿನಗಳಲ್ಲಿ ಆ ಬೇನೆಯು ನಾನೆಣಿಸಿದುದಲ್ಲ ಎಂಬುದು ಸ್ಪಷ್ಟವಾಯಿತು ನಾನು ಮಾಡಿದ ಚಿಕಿತ್ಸೆಯು, ಅನಂತರ ಸ್ಪಷ್ಟವಾದ ಬೇನೆಗೆ ಸರಿಯಾಗಿರಲಿಲ್ಲ. ತದ್ವಿರುದ್ಧ ಬೇನೆಯನ್ನು ಉಗ್ರಗೊಳಿಸಿ ದುರಂತಕ್ಕೀಡುಮಾಡಬಹುದಾಗಿತ್ತು ಏನಾಗಿಬಿಡುತ್ತೊ ಅಂತ ಹೆದರಿ ಹೆದರಿನಡುಗುತ್ತಿದ್ದೆ. ಮೂರು ನಾಲ್ಕು ದಿನ ಗಳಾದ ಮೇಲೆ ರೋಗಿಯು ಗುಣ ಹೊಂದಿದ. ತುಂಬು ಮನಸ್ಸಿನಿಂದ

ಕೃತಜ್ಞತೆಯನ್ನು ಸಲ್ಲಿಸಿದೆ. ನನಗೆ ಕೆಲವು ಕ್ಷಣಗಳು ಮನಸ್ಸೇ ಮಾಯವಾಗಿತ್ತು. ನಾನು ಮಾಡಿದ ಘೋರ ತಪ್ಪನ್ನು ಯಾವ ಅವ್ಯಕ್ತ ಶಕ್ತಿ ಬಂದು ಸರಿಮಾಡಿ ಹೋಯಿತು ಎಂಬುದೊಂದೇ ಯೋಚನೆಯು, ಕರಗಿ ನೀರಾದಂತಿದ್ದ ಮನಸ್ಸಿನಲ್ಲಿ ಮೂಡಿತ್ತು. ಇತರ ಯಾವ ಯೋಚನೆಯು ಬರಲೇ ಇಲ್ಲ. ನೆರವಿಗೆ ಅಪ್ರತ್ಯಕ್ಷವಾಗಿ ಬಂದ ಆ ಅಗೋಚರ ಶಕ್ತಿಯೊಂದೇ ನನ್ನ ಅರಿವಿಗೆ ಬಂದಿತ್ತು. ಕೆಲವು ನಿಮಿಷಗಳಾದ ಮೇಲೆ ಪರಿಸರದ ಮತ್ತು ರೋಗಿಯು ಕಾಣಿಸಿತು. ಗುರುತೂ ಸಿಕ್ಕಿತು. ಎಂದೊಬ್ಬ ಹಿರಿಯ ವೈದ್ಯ ನನಗೆ ಹೇಳಿದ್ದ. ಆ ಕ್ಷಣಗಳಲ್ಲಿ ಬಾಹ್ಯ ಪ್ರಪಂಚದಿಂದ ಗಮನವು ಶೂನ್ಯವಾಗಿ, ಯಾವುದೋ ಅವ್ಯಕ್ತವಾದ ಶಕ್ತಿಯು ನೆರವಿಗೆ ಬಂದಿದ್ದುದೊಂದೆ ಅವನ ಅರಿವಿಗೆ ಬಂದಿದ್ದುದು. ಆ ಕ್ಷಣಗಳಲ್ಲಿ ಅವನಿಗೆ ಮನೋಽತೀತ ಕಾಲದ ಅನುಭವವು ಆಗಿತ್ತು. Eternity ಅನಾದಿ ಅನಂತದ ದರ್ಶನವು ಅವನಿಗೆ ಲಭಿಸಿತ್ತು. ಅಂತಹ ಕ್ಷಣಗಳು ಮುಗಿದಮೇಲೆ, ಭೌತಕಾಲದ ಪ್ರಪಂಚಕ್ಕೆ ಇಳಿದಾಗ, ಆ ದಿವ್ಯವಾದ ಮನೋಽತೀತ ಕಾಲದ, ಅನಾದಿ ಅನಂತದ, ಅನುಭವದ ಸ್ಮರಣೆಯು ಉಳಿದಿತ್ತು.

ಈ ನಿದರ್ಶನಗಳಿಂದ, ಸಾಮಾನ್ಯ ಮನುಷ್ಯನ ದೈನಂದಿನ ಬಾಳಿನಲ್ಲೂ, ಮನೋಽತೀತ ಕಾಲದ ಅನುಭವವು ಸಾಧ್ಯ ಎಂಬುದು ಸ್ಪಷ್ಟವಾಗುತ್ತದೆ.

Spiritual ಅಥವಾ ಆಧ್ಯಾತ್ಮಿಕ ಪ್ರವೃತ್ತಿಯನ್ನು ಕೆಲವು ಮಾನವರು ಹೇರಳವಾಗಿ ಪಡೆದಿರುತ್ತಾರೆ. ಬಾಳಿನಲ್ಲಿ ಅಂತಹವರು ಹಲವರು ತತ್ವಶಾಸ್ತ್ರವನ್ನು ಆಳವಾಗಿ ಸೂಕ್ಷ್ಮಬುದ್ಧಿಯಿಂದ ಅಭ್ಯಾಸ ಮಾಡಿ, ಬ್ರಹ್ಮಾಂಡದ ಆದಿ ಮೂಲವನ್ನು ಅರಿಯಲೆತ್ನಿಸುತ್ತಾರೆ. ಮತ್ತೆ ಕೆಲವರು ತಮ್ಮ ಸ್ವಂತ ಅನುಭವಗಳನ್ನು, ಮತ್ತು ತಾವು ಕಣ್ಣಾರೆ ಕಂಡ ಇತರರ ಅನುಭವಗಳನ್ನು, ಮನನ ಮಾಡಿ, ಅನುಭಾವಿಗಳಾಗಿ ಆದಿಮೂಲದ ಪರಿಚಯವನ್ನು ಮಾಡಿಕೊಳ್ಳಲು ಯತ್ನಿಸುತ್ತಾರೆ, ಎರಡೂ ಪಂಥದವರ ಗುರಿಯೊಂದೇ. ಆದಿಮೂಲದ; Primordeal Essence ಇನ ಪರಿಚಯವನ್ನು ಪಡೆಯುವುದು. ತಾತ್ವಿಕರು ಮತ್ತು ಅನುಭಾವಿಗಳು ಎಂದು ವಿಶ್ಲೇಷಣೆಗಾಗಿ ಎರಡು ಪಂಥಗಳನ್ನು ಬಿಡಿಸಿಕೊಂಡಿದ್ದೇವೆ. ಆದರೆ ತಾತ್ವಿಕರು ಅನುಭಾವಿಗಳಲ್ಲ ; ಅನುಭಾವಿಗಳು

ತಾತ್ವಿಕರಲ್ಲ; ಎಂದನ್ನಲು ಬಾರದು. ಒಂದು ಹಾಸುವುದಕ್ಕೆ, ಇನ್ನೊಂದು ಹೊದೆಯುವುದಕ್ಕೆ: ಎರಡೂ ಬಾಳಿನೆಮ್ಮದಿಗೆ ಅಗತ್ಯ.

ಇಂತಹವರಲ್ಲಿ ಮನೋsತೀತ ಕಾಲದ ಅನುಭವವು ಕೇವಲ ಕೆಲ ಕ್ಷಣಗಳಾಗಿರುವುದಿಲ್ಲ. ಅಥವಾ ಆಕಸ್ಮಿಕವಾಗಿ ಆಗುವುದಿಲ್ಲ. ಸ್ವಂತ ಸಾಧನೆಯಿಂದ, ಬಹುಕಾಲ ತಪಸ್ಸಿನಿಂದ, ಮನೋsತೀತವಾದ ಸ್ಥಿತಿಯನ್ನು ಪಡೆದುಕೊಳ್ಳುತ್ತಾರೆ. ಅಂತಹ ಸ್ಥಿತಿಯನ್ನು ಅವರುಗಳು "ಸಮಾಧಿ ಸ್ಥಿತಿ" ಎಂದು ಕರೆಯುತ್ತಾರೆ.

ಸ್ವಂತ ಸಾಧನೆ ಎಂದಾಗ, ಸಿದ್ಧಿಯೊಂದನ್ನು ಗುರಿಯಾಗಿಟ್ಟುಕೊಂಡು, ಅದನ್ನು ಸಾಧಿಸಿಯೇ ಸಾಧಿಸುತ್ತೇನೆ ಎಂದು ದೃಢವಾದ ಸಂಕಲ್ಪವನ್ನು ಮಾಡಿ. ನಂತರ ಸಂಯಮದಿಂದ ಬಾಳನ್ನು ನಡೆಸುವುದು.

ಬಹುಕಾಲ ತಪಸ್ಸಿನಿಂದ ಎಂದಾಗ ಧ್ಯೇಯ ಸಾಧನೆಗಾಗಿ ಎಚ್ಚರವಾಗಿರುವ ಪ್ರತಿಕ್ಷಣದಲ್ಲೂ ಪರಿತಪಿಸುವುದು ಅದೇ ತಪಸ್ಸು, ಎಚ್ಚರವಾಗಿರುವಾಗ, ಕೋರಮನಸ್ಸಿನ ತುಂಬಾ ಈ ಗೀಳೇ ಹತ್ತಿಕೊಂಡು ಅನವರತ ಕಾಡುವುದು. ಇದೊಂದು ರೀತಿಯ ಸಂಕಟವೇ ಹೌದು. ಆದಕಾರಣ ತಪಸ್ಸು ಬಲು ಕಠಿಣ ಎನ್ನುತ್ತಾರೆ.

ಈ ರೀತಿಗಳಲ್ಲಿ ಮನಸ್ಸನ್ನು ಹದಗೊಳಿಸಿದಾಗ. ಮನಸ್ಸು ಮನಸ್ಸನ್ನು ಮೆಟ್ಟಿ ನಿಂತು, ಮನೋsತೀತವಾದ ಅನುಭವಕ್ಕೆ ಅಣಿಮಾಡಿಕೊಡುತ್ತದೆ. ಆಗ ಮನೋsತೀಶಕಾಲದ, ಅನಾದಿ ಅನಂತ ಕಾಲದ ಅರಿವು ಉಂಟಾಗುತ್ತದೆ. ಹಿಂದು ಇಂದು ಮುಂದು ಇವೆಲ್ಲವೂ ಈ ಭವ್ಯ ಕ್ಷಣದಿಂದಲೇ ಎನ್ನುವಂತೆ ಭಾಸವಾಗುತ್ತದೆ. "The Eternal Now" ಎಂಬ ಸುಪ್ರಸಿದ್ಧ ವಾಕ್ಯವು, ಅನಾದಿ ಅನಂತ ಕಾಲದ ಅರಿವಿನಿಂದ ನುಡಿಯಲ್ಪಟ್ಟಿದ್ದು.

ಅಂದರೆ ಅನಾದಿ ಅನಂತದ ಕಾಲದ ಅರಿವು,ಆಧ್ಯಾತ್ಮಿಕ ಅಭ್ಯಾಸಗಳಲ್ಲಿ ತೊಡಗಿದ ಸಿದ್ಧಪುರುಷರಿಗೂ, ಹಾಗೂ ಕೆಲವೊಮ್ಮೆ ಸಾಮಾನ್ಯ ಜನರಿಗೂ, ಲಭಿಸುತ್ತದೆ. ಸ್ವಪ್ರಯತ್ನದಿಂದ ಸಿದ್ಧರಲ್ಲಿ ಈ ಅನುಭವವು ಉಂಟಾಗುತ್ತದೆ. ಸಾಮಾನ್ಯ ಮನುಷ್ಯರಲ್ಲಿ ಆಕಸ್ಮಿಕವಾಗಿ ಆಗುತ್ತದೆ.

ಇಂತಹ ಅನುಭವವನ್ನು ಪಡೆದಿರಬಹುದಾದ ತಾತ್ವಿಕರು, ಹಾಗೂ

ಅನುಭಾವಿಗಳು ಮನೋಽತೀತ ಕಾಲದ ಬಗ್ಗೆ ಏನನ್ನು ಹೇಳಿದ್ದಾರೆ ಎನ್ನುವುದನ್ನು ಪರಿಶೀಲಿಸೋಣ.

## 2. ಪಾಶ್ಚಾತ್ಯ ತಾತ್ವಿಕರು (1. Aristotle ಅರಿಸ್ಟಾಟಲ್.)

ಕ್ರಿಸ್ತ. ಪೂರ್ವ 384ರಲ್ಲಿ, ಅಥೆನ್ಸ್ ಪಟ್ಟಣದ ಉತ್ತರಕ್ಕೆ ಸುಮಾರು ಇನ್ನೂರು ಮೈಲಿಗಳ ದೂರದಲ್ಲಿರುವ ಸ್ಟೆಜೀರಾ ಎಂಬ ಊರಿನಲ್ಲಿ,ಅರಿಸ್ಟಾಟಲ್ ಜನ್ಮ ತಾಳಿದ. ಅಸ್ಕ್ಲಿಪಿಯಡ್ಸ್ ಎಂಬ ಹೆಸರಾಂತ ವೈದ್ಯಕೀಯ ಸಂಸ್ಥೆಗೆ ಅರಿಸ್ಟಾಟಲ್ ಸದಸ್ಯನಾಗಿದ್ದನೆಂದು ನಂಬಲಾಗಿದೆ. ವೈದ್ಯಕೀಯ ವಾತಾವರಣದಲ್ಲಿ ಅರಿಸ್ಟಾಟಲ್ ಬೆಳೆದಂತೆ, ಮತ ಧರ್ಮಗಳ ಪವಿತ್ರ ವಾತಾವರಣದಲ್ಲಿ, ಗ್ರೀಸಿನ ಮುಂದಿನ ತಲೆಮಾರಿನ ತಾತ್ವಿಕರು ಬೆಳೆದರು. ಅರಿಸ್ಟಾಟಲ್ ಹಾಗೂ ಇತರ ಗ್ರೀಕ್ ತಾತ್ವಿಕರಿಗೂ ಇರುವ ಭಿನ್ನಾಭಿಪ್ರಾಯಗಳು ಬಹುಶಃ, ಅವರುಗಳು ಬೆಳೆದ ವಾತಾವರಣದ ವ್ಯತ್ಯಾಸದಿಂದಲೇ ಇರಬೇಕು.

18ರ ಪ್ರಾಯವು ಮೂಡುವ ಕಾಲಕ್ಕೆ ಅರಿಸ್ಟಾಟಲ್ ಅಥೇನ್ಸ್ ಪಟ್ಟಣಕ್ಕೆ ಹೋಗಿ, ಆಚಾರ್ಯ ಪ್ಲೇಟೋವಿನ ಶಿಷ್ಯನಾದ. ಗುರು ಶಿಷ್ಯರಿಬ್ಬರೂ ಪ್ರಚಂಡರು. ಸುಮಾರು ಐವತ್ತು ವರ್ಷಗಳ ಅಂತರ ಇಬ್ಬರಿಗೂ. Generation gap ಇಷ್ಟು ದೊಡ್ಡದಾದರೆ, ಪ್ರಚಂಡರ ಪರಸ್ಪರ ಸಂಬಂಧವು ತಿಕ್ಕಾಟದಿಂದ ಕೂಡಿರಲೇಬೇಕು, ಇಂತಹ ತಿಕ್ಕಾಟದಿಂದಲೇ, ಜ್ಞಾನದ ಬೆಳಕು ಪ್ರಜ್ವಲಿಸುವುದು. ರಾಜಕುಮಾರನಾಗಿದ್ದ ಅಲೆಕ್ಸಾಂಡರ್‌ನ ವಿದ್ಯಾಗುರುವಾಗಲು ಅರಿಸ್ಟಾಟಲ್‌ನನ್ನು ಮಾಸಿಡನ್ ಅರಸು, ಫಿಲಿಪ್ ಆಹ್ವಾನಿಸಿದ. ಹೀಗೆ ಅರಿಸ್ಟಾಟಲ್, ಲೋಕಪ್ರಸಿದ್ಧನಾದ ಅಲೆಕ್ಸಾಂಡರಿನ, ಶಿಕ್ಷಕನಾದುದು.

ಗುರುಕುಲ(The Lyceum) ಅನ್ನು ಅರಿಸ್ಟಾಟಲ್ ಸ್ಥಾಪಿಸಿದ. ಈ ಪ್ರಚಂಡನ ಜ್ಞಾನದ ದಾಹವು. ಜೀವಶಾಸ್ತ್ರ, ಭೌತಶಾಸ್ತ್ರ; ಖಗೋಳಶಾಸ್ತ್ರ; ಬೆಳೆಯುವಿಕೆ ಮತ್ತು ಅಳಿಯುವಿಕೆ; ಪವಮಾನಶಾಸ್ತ್ರ; ಪ್ರಾಣಿಗಳ ಚಲನ ಶಾಸ್ತ್ರ; ಮತ್ತು ಕವನಗಳ ಶಾಸ್ತ್ರ; ಭಾಷಾ ಶಾಸ್ತ್ರ; ಹಾಗೂ ತತ್ವಶಾಸ್ತ್ರ; ರಾಜ್ಯಶಾಸ್ತ್ರ ಮತ್ತು ಭೌತಾತೀತವಿಜ್ಞಾನ ಇವುಗಳೆಲ್ಲವನ್ನೂ ಒಳಗೊಂಡಿತ್ತು.

Philo-sophy-ಜ್ಞಾನದ ಪ್ರೇಮ, ಎಂಬ ಮೊದಲ ಅರ್ಥದಲ್ಲಿ, ಅರಿಸ್ಟಾಟಲ್ ಅನ್ನು The Philosopher ಎಂದು ಕರೆಯಬೇಕು.

ಇಂತಹ 'ಕಾಲಾತೀತ'ವನ್ನ ಬೇಕಾದ ತಾತ್ವಿಕನು, 'ಕಾಲದ' ವಿಷಯ ದಲ್ಲಿ ಏನೆಂದಿದ್ದಾನೆ ? ವಸ್ತು ಮತ್ತು ಆಕಾರ, ಇವೆರಡೂ ಬೆಸೆದುಗೊಂಡಿರು ವುವುಗಳು ಮಾತ್ರ ವಾಸ್ತವಿಕವಾಗಿ ಇವೆ ಎನ್ನಬೇಕು. ಮಿಕ್ಕೆಲ್ಲವೂ ಈ ವಸ್ತುಗಳ ಗುಣಗಳು ಅಥವಾ ಉಪಾಧಿಗಳು.

ಚಲನವು (Motion) ವಸ್ತುವಿನ ಒಂದು ಗುಣ. ಕಾಲವು ಚಲನದ ಒಂದು ಗುಣ. ಕಾಲವು ಚಲನವಲ್ಲ; ಚಲನದ ಪ್ರಮಾಣವನ್ನು ಅಳೆಯುವ ಸಾಧನ.

ಚಲನವು ಅಂತರ್ಗತವಾಗಿದ್ದಾಗ (Potentially) ಕಾಲ. ಆದರೆ ವ್ಯಕ್ತ ವಾಗಬೇಕಾದರೆ ಕಾಲವು ಸರಿದಂತೆಲ್ಲಾ ಚಲನವೂ ಆಗುತ್ತಿರುವುದನ್ನು ಅಳೆಯುವ ಬುದ್ಧಿ ಇರುವ ಜೀವಿ ಇರಬೇಕು. ಆದುದರಿಂದ ಕಾಲವು, ವಸ್ತು ಗಳೊಂದಿಗೆ ಉಪಾಧಿಯಾಗಿರಬಲ್ಲುದೇ ಹೊರತು, ತನ್ನಷ್ಟಕ್ಕೆ ತಾನೇ ಇರಬಹುದಾದ ಗುಣವನ್ನು ಹೊಂದಿಲ್ಲ.

ಚಲನದ ಪ್ರಮಾಣವನ್ನು ಕಾಲವು ಅಳೆಯುವುದರಿಂದ, ಚಲನವಿಲ್ಲದೆ ಇರುವ ಅವಧಿಯನ್ನೂ ಅದು ಅಳೆಯುತ್ತದೆ, ಆದರೆ ನೇರವಾಗಿ ಅಲ್ಲ. ನಿಶ್ಚಲತೆಯು ಕಾಲದಲ್ಲಿ ಅಡಗಿದೆ.

ಚಲನದ ಪ್ರಮಾಣವನ್ನು ಅಳೆಯುವಾಗ ಸಂಖ್ಯೆಗಳನ್ನು (Numbers) ಬಳಸುತ್ತೇವೆ. ಚಲನಕ್ಕೆ ಕಾಲವು ಉಪಾಧಿಯಾಗಿರುವುದರಿಂದ, ಸಂಖ್ಯೆ ಗಳಿಗೂ ಕಾಲವು ಉಪಾಧಿಯಾಗುತ್ತದೆ. ಆದರೆ ಕಾಲವು ಅಳೆಯುವ ಸಂಖ್ಯೆ ಗಳಲ್ಲ; ಅದು ಅಳೆಯಲ್ಪಡುವ ವಸ್ತುಗಳ ಸಂಖ್ಯೆ.

ಸುಮಾರು ೨೦೦೦ ವರ್ಷಗಳ ಹಿಂದೆ, ವಿಜ್ಞಾನವು ಶೈಶವಾವಸ್ಥೆಯಲ್ಲಿ ದ್ದಾಗ, (ಇಂದಿನ ವಿಜ್ಞಾನದ ಪ್ರಚಂಡ ಪ್ರಗತಿಯನ್ನು ಹೋಲಿಸಿದರೆ ಆಗ ಶೈಶವವೇ) ಅರಿಸ್ಟಾಟಲ್ ಮನನ ಮಾಡಿ ಹೇಳಿದುದು, ಇಂದೂ ಅರ್ಥ ಪೂರ್ಣವಾಗಿದೆ. ನಾವೂ ಅವನೆಂದುದನ್ನು ಮನನಮಾಡಿ ತಿಳಿದುಕೊಳ್ಳ ಬೇಕು.

## 2. ಪ್ಲಾಟಿನಸ್ Plotinus

ಕ್ರಿ. ಶ. ೨೦೫ರಲ್ಲಿ ಪ್ಲಾಟಿನಸ್ ಜನ್ಮವನ್ನು ತಾಳಿದ, ಈಜಿಪ್ಟಿನಲ್ಲಿ, ಅಲೆಕ್ಸಾಂಡ್ರಿಯಾ ವಿಶ್ವವಿದ್ಯಾಲಯದಲ್ಲಿ ವ್ಯಾಸಂಗವನ್ನು ಮಾಡಿದ. ಜ್ಞಾನಾರ್ಜನೆಗಾಗಿ ಇಂಡಿಯಾಕ್ಕೆ ಬರಬೇಕೆಂದು ಯತ್ನಿಸಿದರೂ ಸಾಧ್ಯವಾಗಲಿಲ್ಲ. ಕಾಲ್ಯಾನಂತರ ಅವ ರೋಂ ಇಗೆ ಹೋಗಿ ವಿದ್ಯೆಯನ್ನು ಕಲಿಸುವ ಗುರುವಾದ. ೬೫ರ ಪ್ರಾಯದಲ್ಲಿ ಅವ ಕೈಲಾಸವಾಸಿಯಾದ.

ವಾಲ್ಟರ್ ಬಿ. ಸ್ಟೇಸಿ ಎನ್ನುವ ಬ್ರಿಟಿಷ್ ಪಂಡಿತನು ಹೀಗನ್ನುತ್ತಾನೆ:—

ಮನೋ ಽತೀತ ಜ್ಞಾನವನ್ನು ಅನುಭವಿಸಿ, ಹಾಗೂ ಪ್ರಚಂಡ ಬುದ್ಧಿ ಶಕ್ತಿಯನ್ನೂ ಪಡೆದಿದ್ದವರು ಅತಿ ವಿರಳ. ಬುದ್ಧ, ಎಕ್‌ಹಾರ್ಟ್ ಮತ್ತು ಪ್ಲಾಟಿನಸ್ ಇವರುಗಳನ್ನು ಸ್ಮರಿಸಬಹುದು. ಇತರರೂ ಇದ್ದಿರಬಹುದು ಆದರೆ ಅವರಾರು ? ಎಂಬುದು ನನಗಿನ್ನೂ ಖಚಿತವಾಗಿಲ್ಲ. ಭಕ್ತಿಯಿಂದ ಕುತೂಹಲದಿಂದ, ಅನುಕಂಪದಿಂದ, ಶ್ರದ್ಧೆಯಿಂದ, ಹಾಗೂ ನಿರಂತರವಾಗಿ ಅಭ್ಯಾಸವನ್ನು ಮಾಡಿದ ಮಹಾ ಪಂಡಿತನ ನುಡಿಗಳು ಇವು.

ಅಂದಮೇಲೆ ಪ್ಲಾಟಿನಸ್ ಕಾಲದ ವಿಷಯದಲ್ಲಿ ಏನಂದಿದ್ದಾನೆ ಎಂಬುದನ್ನು ತಿಳಿದುಕೊಳ್ಳುವುದು ಅಗತ್ಯ. ತಾತ್ವಿಕರಲ್ಲಿ ಶ್ರೇಷ್ಠ ; ಅನುಭಾವಿಗಳಲ್ಲಿ ಅಗ್ರಗಣ್ಯ, ಅಂದಮೇಲೆ ವಿಚಾರಪರ ಮನಸ್ಸಿಗೂ ಅಂತಃಕರಣಕ್ಕೂ ನೊಗವೇರಿಸಿದ ಮಹಾತ್ಮ. ಅಂತಹವನ ನುಡಿಗಳನ್ನು ಕಲಿಯೋಣ.

ಸುಪ್ರಸಿದ್ಧವಾದ ಆತನ ಗ್ರಂಥ IIIನೆ ಎನ್ನಿಯಡ್ (Ennead) ನಲ್ಲಿ ಅಂದಿದ್ದಾನೆ:—

(೧) ಅರಿಸ್ಟಾಟಲ್ ಹೇಳಿದುದರಲ್ಲಿ ಒಂದು ದೋಷವಿದೆ. ಕಾಲದ ವಿಶ್ಲೇಷಣೆಯನ್ನು ಅವ ಮಾಡುವಾಗ ಸುತ್ತುಸುತ್ತೂತ್ತ ಸುತ್ತಿ, ಮೊದಲಿದ್ದಲ್ಲಿಗೇ ಬರುತ್ತಾನೆ. ಚಕ್ರ ಬಂಧಿತನಾಗುತ್ತಾನೆ, ಆದಕಾರಣ ಕಾಲದ ನೈಜ ಸ್ವರೂಪವನ್ನು ಅರಿಯಲಿಲ್ಲ.

ಕಾಲವು ಸಂಖ್ಯೆಯಲ್ಲ ; ಅದು ಸಂಖ್ಯೆಯಿಂದ ಗುರುತಿಸಲ್ಪಡುವುದು. ಇದು ಸ್ವಯಂವೇದ್ಯ, ಹಿಂದೆ ಅಥವಾ ಮುಂದೆ, ಇವೆರಡೂ ಅನುಭವಗಳನ್ನು

ಕಾಲಮಾನದ ಪ್ರಕಾರ ತಿಳಿಯಲೆತ್ನಿಸಿದರೆ, ಅವೆರಡೂ ಕಾಲದಲ್ಲಿ ಹುದುಗಿಕೊಂಡಿವೆ. ದೇಶ (Space) ದಲ್ಲಲ್ಲ ಎಂಬುದು ಸ್ಪಷ್ಟವಾಗಿದೆ.

ಕಾಲವನ್ನು ಅರಿಸ್ಟಾಟಲ್ ಚಲನಕ್ಕೆ ಕಟ್ಟಿಹಾಕಿದ್ದಾನೆ. ಚಲನವನ್ನು ಕಾಲಕ್ಕೆ ಬಂಧಿಸಿದ್ದಾನೆ. ಇಂತಹ ಚಕ್ರ ಬಂಧನದಿಂದ ಕಾಲದ ಅಳತೆಯನ್ನು ಅರ್ಥ ಮಾಡಿಕೊಳ್ಳಬಹುದು ; ಆದರೆ 'ಕಾಲ' ವನ್ನಲ್ಲ.

ಹೀಗೆಂದು ಟೀಕಿಸಿದ ಮೇಲೆ ತನ್ನ ಕಲ್ಪನೆಯನ್ನು ವಿವರಿಸುತ್ತಾನೆ.

'ಕಾಲವು ಪ್ರತ್ಯೇಕವಾದುದು. ಸ್ವಯಂ ಪರಿಪೂರ್ಣವಾದುದು (a kind to itself) ; ಅದರಲ್ಲೇ ಅದು ಹದುಗಿಕೊಂಡಿದೆ. (a thing within itself) ಚಲನ. ನಿಶ್ಚಲನ, ಇವೆಲ್ಲವೂ 'ಕಾಲ' ದಲ್ಲಿ ಸಂಭವಿಸುವುವು. ಆದರೆ ಕಾಲವು ಇನ್ನಾವುದರಲ್ಲಿಯೂ ಇರುವುದಿಲ್ಲ.

'ಅನಾದಿ ಅನಂತ ಕಾಲದ (Eternity) ಚಲಿಸುತ್ತಿರುವ ಬಿಂಬವೇ ಕಾಲ' ಎಂದು ಪ್ಲೇಟೋ ಹೇಳಿದುದನ್ನು ಪ್ಲಾಟಿನಸ್ ಅನುಮೋದಿಸುತ್ತಾನೆ. ಹಾಗೂ ಮುಂದುವರಿದು ಆತ್ಮದ (Soul) ಸೃಷ್ಟಿಸುವ ಕಾರ್ಯವೂ, ಕಾಲವೂ ಒಂದೇ ಎನ್ನುತ್ತಾನೆ. Time is indentified with thc creative activity of the Soul.

ಆತ್ಮದ ಬಾಳು ಚಲನದಲ್ಲಿ, ಕಾಯಿಕ ಅಥವಾ ಅನುಭವ ಇವುಗಳ ಪರಂಪರೆಯಲ್ಲಿ ಕಾಲವನ್ನು ಗ್ರಹಿಸುತ್ತೇವೆ [The life of Soul in movement, as it passes from one stage of Act or Experience to another] ಎಂದು ವಿವರಿಸುತ್ತಾನೆ.

ಬ್ರಹ್ಮಾಂಡದ ಪರಮ ಆತ್ಮ [Authentic Existem] ತನ್ನ ಅನಾದಿ ಅನಂತತೆಯನ್ನು [Eternity] ಬಿಟ್ಟು ಕೊಟ್ಟು, ಕಾಲ ಎನ್ನುವ ಕವಚವನ್ನು ಧರಿಸಿ, 'ಕಾಲ' ನಿಗೆ ಅಧೀನವಾಯಿತು. ಪರಮ ಆತ್ಮನ ಲೀಲಾಪ್ರೇರಣೆಯಿಂದ ಹೀಗಾಯಿತು.

ಬ್ರಹ್ಮಾಂಡವು [Universe] ಸೃಷ್ಟಿಯಾದಾಗ ಕಾಲವೂ ಸೃಷ್ಟಿಯಾಯಿತು. ಸೃಷ್ಟಿಯೇ ಕಾಲ, ಅದರಲ್ಲಿ ಬ್ರಹ್ಮಾಂಡವು ಅಡಗಿದೆ. [The soul begot at once the Univrse and Time; in that activity of

the SOUL this universe sprang into being. The activity is TIME. The universe is a content of time]

ಕಾಲದ ವಿಷಯದಲ್ಲಿ ಪ್ಲಾಟಿನಸ್ ತಳೆದ ಅಭಿಪ್ರಾಯಗಳು ಇವು.

## 3. ಸಂತ ಅಗಸ್ಟಿನ್ (St. Augustine)

Confessions ಎಂಬ ಪುಸ್ತಕದಲ್ಲಿ ಸಂತ ಅಗಸ್ಟಿನ್ ಕಾಲದ ವಿಶ್ಲೇಷಣೆಯನ್ನು ಮಾಡಿದ್ದಾನೆ. ಭಗವಂತನೆದುರು ತಪ್ಪೊಪ್ಪಿಕೊಳ್ಳುವಿಕೆಯ ಮಾದರಿಯಲ್ಲಿದೆ, ಈ ವಿಶ್ಲೇಷಣೆ. ಅವನ ಕೊರಗಿನ ಕೂಗು ; (What then, is Time) ಅಂದ ಮೇಲೆ ಕಾಲ ಎಂದರೇನು ? ಎಂಬ ವಾಕ್ಯವು ಪ್ರಸಿದ್ಧವಾಗಿದೆ. ಅದರ ಉತ್ತರವೂ ಅಷ್ಟೇ ಸುಪ್ರಸಿದ್ಧವಾದುದು. ಯಾರೂ ನನ್ನನ್ನು ಕೇಳದೆ ಇದ್ದರೆ ನನಗೆ ಗೊತ್ತು ; ಯಾರಾದರೂ ಕೇಳಿದರೆ, ಅವರಿಗೆ ನಾ ಕೊಡುವ ಉತ್ತರ : ನನಗೆ ಗೊತ್ತಿಲ್ಲ !

ಅವನ ತಾಪತ್ರಯವನ್ನು ಊಹಿಸಬಹುದು. ಕಾಲದ ವಿವರಣೆಯನ್ನು ಕೊಡ ಹೋದರೆ, ಸುತ್ತಿಕೊಂಡು ತಿರುಗಿ ಮೊದಲಿದ್ದ ಸಮಸ್ಯೆಯೇ ಎದುರಾಗುತ್ತದೆ. ಅರಿಸ್ಟಾಟಲ್ ಮತ್ತು ಪ್ಲಾಟಿನಸ್‌ಗಳಿಗಾದಂತೆ. 'ಈಗ' ಎನ್ನುವುದನ್ನು ಕ್ಷಣ ; ಕ್ಷಣಾರ್ಧ, ಕ್ಷಣದ ನೂರನೇ ಒಂದು ಭಾಗ, ಅಥವಾ ಲಕ್ಷದ ಒಂದು ಭಾಗ : ಈ ರೀತಿಯಲ್ಲಿ ವಿಂಗಡಿಸುವುದು ಸಾಧ್ಯ. ಅಂದರೆ ಈಗ ಎನ್ನುವುದು ಇಲ್ಲವೇ ಇಲ್ಲ. ಹಿಂದೆ, ಮುಂದೆ ಇವುಗಳೆರಡರ ನಡುವಿನ ಅಂತರ ಎಂದಷ್ಟೇ ಅನ್ನಬೇಕು.

ಆದರೆ ಐದು ನಿಮಿಷ ಹಾಡನ್ನು ಕೇಳಿ ಸುಖ ಪಟ್ಟೆವು ಎಂಬುದು ಅನುಭವಕ್ಕೆ ಬರುತ್ತದೆ, ಈಗ ಸುಖವನ್ನು ಪಟ್ಟೆವು ಎಂಬ ಅನುಭವ. ಆದರೆ ತರ್ಕ ಮಾಡಿದರೆ ಈಗ ಇಲ್ಲವೇ ಇಲ್ಲ.

ಈ ಸಮಸ್ಯೆಯನ್ನು ಅಗಸ್ಟಿನ್ ಪರಿಹರಿಸಿದ್ದು, ಅನುಭವವನ್ನು ಬಳಸಿಕೊಂಡು. ಅನುಭವವು ಮನಸ್ಸಿನಲ್ಲಿ ಆಗುತ್ತದೆ. ಆದಕಾರಣ ಮನಸ್ಸಿನ ಒಂದು ತೆರನ ವಿಸ್ತರಿಸುವಿಕೆಯೇ ಕಾಲ [Time is protraction of the mind] ಎಂದು ಹೇಳಿದನು. ಕಾಲವನ್ನು ಅಳೆಯುವಾಗ, ತೋರ ಮನಸ್ಸಿನ ಸ್ಮರಣೆಯ ವಿಸ್ತಾರವನ್ನು ಅಳೆಯುತ್ತೇವೆ, [When we measure Time,

we really measure a certain expense in our conscious memory] ಎಂದು ನುಡಿದ.

ಸ್ಮರಣೆಯ ವಿಸ್ತಾರ ಎನ್ನುವುದೂ ಮಾತಿನ ಮಾಟವೇ ಹೊರೆತು, ಹೆಚ್ಚು ತಿಳಿವನ್ನೇನೂ ಮೂಡಿಸುವುದಿಲ್ಲ. ಕಾಲ, ಸ್ಮರಣೆಯ ವಿಸ್ತಾರ, ಇವೆರಡೂ ಚಕ್ರ ಬಂಧನವೇ ಹೊರತು, ನಿಖರವಾದ ವಿವರಣೆಯಾಗಲಿಲ್ಲ.

ಅಂದರೆ What, then, is Time ಎನ್ನುವ ಪ್ರಶ್ನೆಯು ಉಳಿದೇ ಉಳಿಯಿತು, ಈ ಮೂವರು ತಾತ್ವಿಕರು, ಅನುಭಾವಿಗಳು ಸ್ಪಷ್ಟವಾಗಿ ಉತ್ತರಿಸಲಿಲ್ಲ.

## 4. ಮೆಕ್ ಟೆಗ್ಗಾರ್ಟ್. J.M.E.Mc Taggart.

ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯದ ಟ್ರಿನಿಟಿ ಕಾಲೇಜಿನಲ್ಲಿ ಈತ ಗೌರವಾನ್ವಿತ ಅಧ್ಯಾಪಕನಾಗಿದ್ದ. ಕುಶಾಗ್ರಮತಿಯ ಆತ ಸ್ವತಂತ್ರವಾಗಿ ವಿವೇಚಿಸುವುದಕ್ಕೂ, ಆಳವಾಗಿ ಮನನ ಮಾಡುವುದಕ್ಕೂ ಪ್ರಸಿದ್ಧನಾಗಿದ್ದ.

ಕಾಲ ಎನ್ನುವ ವಿಷಯದಲ್ಲಿ ಅವ ಹೀಗಂದಿದ್ದಾನೆ. ೧೯೦೮ರಲ್ಲಿ. [It will be convenient to begin our enquiry by asking whether anything existent can posses the characteristic of being in Time. I shall endeavour to prove that it cannot.]

ಯಾವುದಾದರೂ, ಕಾಲದಲ್ಲಿ ಇದೆ, ಎಂದು ಖಚಿತಪಡಿಸುವ ಗುಣಗಳು ಅಥವಾ ವಿಶೇಷಗಳು ಯಾವುದಕ್ಕಾದರೂ ಇದೆಯೇ ? ಎಂಬ ಪ್ರಶ್ನೆಯನ್ನು ಮೊದಲು ಉತ್ತರಿಸಬೇಕು. ಇದು ಸಾಧ್ಯವಿಲ್ಲ ಎಂದು ಸಿದ್ಧಾಂತವನ್ನು ಮಾಡಲು ಯತ್ನಿಸುತ್ತೇನೆ ; ಎಂದು ಆರಂಭಿಸುತ್ತಾನೆ. 'ಕಾಲ'ಎಂಬುದೊಂದು ಮೂಲಭೂತವಾಗಿ ಇಲ್ಲವೇ ಇಲ್ಲ ಎಂದು ವಾದಿಸುತ್ತಾನೆ.

ಬಹಳ ಹಿಂದೆ, ಇತ್ತೀಚಿನ ಹಿಂದೆ, ಇಂದು, ಮುಂದು, ಬಹಳ ಮುಂದು ಎನ್ನುವ ಕಾಲದ ಗತಿಪ್ರಗತಿಯನ್ನು Series A ಎಂದು ಕರೆಯುತ್ತಾನೆ.

ಅದಕ್ಕಿಂತ ಮುಂಚೆ ಅಥವಾ ಇದು ಆದ ಮೇಲೆ, ಅದು ಆಯಿತು ಎನ್ನುವಾಗ ಎರಡು ಘಟನೆಗಳ ಹೋಲಿಕೆಯನ್ನು B Series ಎಂದು ಕರೆಯುತ್ತಾನೆ.

A ಸಾಲಿನಲ್ಲಿ ಉದಾಹರಣೆಗೆ ಯೇಸುವಿನ ಸಾವನ್ನು ತೆಗೆದುಕೊಳ್ಳೋಣ. ಆತ ಸತ್ತು ೧೯೭೨ ವರ್ಷಗಳಾದುವು. ಇನ್ನೊಂದು ಸಾವಿರ ವರ್ಷಗಳಾದ ಮೇಲೆ, ೨೯೭೨ ವರ್ಷಗಳಾಗಿರುತ್ತವೆ. ಹಿಂದೆ ಎನ್ನುವುದು ಸರಿಯುತ್ತಾ ಸರಿಯುತ್ತಾ ಬಹಳ ಹಿಂದೆ ಎಂದು ಅನಿಸುತ್ತದೆ.

B ಸಾಲಿನ ಉದಾಹರಣೆಯನ್ನು ಪರಿಶೀಲಿಸೋಣ. ಯೇಸುವು ಸತ್ತು ೧೯೭೨ ವರ್ಷಗಳಾಯಿತು. ಆದಿಶಂಕರಾಚಾರ್ಯರು ಸತ್ತು ೧೧೫೨ ವರ್ಷಗಳಾದುವು. ಅಂದರೆ ಯೇಸುವು ಸತ್ತನಂತರ ೮೨೦ ವರ್ಷಗಳಾದ ಮೇಲೆ ಶಂಕರರು ನಿಧನರಾದರು. ಈ ಅಂತರವು ಯಾವಾಗಲೂ ಒಂದೇ ಪ್ರಮಾಣದ್ದಾಗಿರುತ್ತದೆ. ಇದರಲ್ಲಿ ಯಾವ ವ್ಯತ್ಯಾಸವೂ ಎಂದೂ ಆಗುವುದಿಲ್ಲ.

ಆದರೆ B ಸಾಲಿನ ಘಟನೆಗಳು A ಸಾಲಿಗೆ ಹೊಂದಿಕೊಂಡಿರಲೇ ಬೇಕು. ಏಕೆಂದರೆ B ಸಾಲಿನ ಘಟನೆಗಳು ಕಾಲಮಾನಕ್ಕೆ ಸಂಬಂಧವನ್ನು ಹೊಂದಿರಲೇ ಬೇಕು. ಕಾಲಮಾನದ ಗತಿಯು ಭೂತ, ವರ್ತಮಾನ ಮತ್ತು ಭವಿಷ್ಯ ಎನ್ನುವ A ಸಾಲಿಗೆ ನಿಕಟ ಸಂಬಂಧವನ್ನು ಹೊಂದಿರುತ್ತದೆ. ಆದುದರಿಂದ A ಸಾಲು ಇಲ್ಲದಿದ್ದರೆ, B ಸಾಲು ಇರಲು ಸಾಧ್ಯವಿಲ್ಲ.

ಇನ್ನೂ ಸ್ವಲ್ಪ ವಿರಳವಾಗಿ A Series ಅನ್ನು ವಿಶ್ಲೇಷಿಸೋಣ. ಯೇಸುವು ೧೯೭೨ ವರ್ಷಗಳ ಹಿಂದೆ ನಿಧನನಾದ. ಈ ಘಟನೆಯು ಎಂದೆಂದಿಗೂ ಸ್ಥಿರವಾಗಿದೆ. ಏರುಪೇರಾಗಲು ಇದಕ್ಕೆ ಸಾಧ್ಯವೇ ಇಲ್ಲ: ಸ್ಥಿರವಾಗಿದೆ, ವ್ಯತ್ಯಾಸವಾಗಲು ಅಸಾಧ್ಯ, ಎಂದರೆ ಕಾಲವೇ ಇಲ್ಲ ಎನ್ನಬೇಕು! ಏಕೆಂದರೆ ಎರಡು ಘಟನೆಗಳ ಅಂತರವೇ ಕಾಲ. ಘಟನೆಗಳೇ ಆಗದಿದ್ದರೆ 'ಕಾಲ'ವೇ ಇಲ್ಲ. ಅಂದರೆ A ಸಾಲು ಮಾಯಾರೂಪಿ: ನಿಜವಾಗಿ ಅದು ಇಲ್ಲವೇ ಇಲ್ಲ. ಅಂದಮೇಲೆ ಅದೇ ಇಲ್ಲದಮೇಲೆ B ಸಾಲು ಇರಲು ಶಕ್ಯವಿಲ್ಲ.

ಈ ಕಾರಣಗಳಿಂದಾಗಿ 'ಕಾಲ' ಎನ್ನುವುದು ಮೂಲಭೂತವಾಗಿ, ಸತ್ಯವಾಗಿ, ಇಲ್ಲವೇ ಇಲ್ಲ. ನಮ್ಮ ವೈಯುಕ್ತಿಕ ಗ್ರಹಣ ಶಕ್ತಿಯ ಪರಿಣಾಮವಾಗಿ A ಸಾಲು ಮತ್ತು B ಸಾಲು, ಕಾಲದ ಅನುಭವವನ್ನು ನಮಗೆ ನೀಡುತ್ತದೆ, ಅಷ್ಟೇ.

ಎಂದು ಮೆಕ್‌ಟಗ್ಗಾರ್ಟ್‌ನ ಮೂಲಭೂತವಾದ ವಾದ

ಅತ್ಯಂತ ಗೂಢವಾದ ತಾತ್ವಿಕ ತರ್ಕವನ್ನು–ಮೆಕ್‌ಟಗ್ಗಾರ್ಟ್ ವಿವರಿಸಿದುದನ್ನು–ಅತಿ ಸರಳವಾಗಿ ಇಲ್ಲಿ ವಿವರಿಸಲಾಗಿದೆ. ತಾತ್ವಿಕದ ದೃಷ್ಟಿಯು, ಕಾಲದ ಅರಿವಿಗೆ ಅತ್ಯಗತ್ಯವಾದರೂ ಅದೊಂದೇ ಸಾಧನವು ಸಾಕಾಗುವುದಿಲ್ಲ. ಭೌತ ಶಾಸ್ತ್ರದ ದೃಷ್ಟಿ ; ಜೀವ ಶಾಸ್ತ್ರದ ದೃಷ್ಟಿ ; ಮನೋಕಾಲದ ಅರಿವು ; ಮನೋಽತೀತ ಕಾಲದ ಪ್ರಜ್ಞೆ ; ಮತ್ತು ಅದೃಷ್ಟವಾದ ಇತರವು ; ಎಲ್ಲದರ ನೆರವೂ ಬೇಕು. ಆದಕಾರಣ ಮೆಕ್‌ಗ್ಗಾರ್ಟನ್ ಅವರ ಕ್ರಾಂತಿಕಾರೀ ವಿಚಾರ ಧಾರೆಯನ್ನು ಸರಳವಾಗಿ ಹೇಳಿದ್ದು ಸಾಕು. ಆತನ ವಿಚಾರಧಾರೆಯನ್ನು ಟೀಕಿಸಿ, ಲೋಪದೋಷಗಳನ್ನು ತೋರಿಸುವ ವಿವರಗಳು ಇಲ್ಲಿ ಅಪ್ರಕೃತ.

ಆದರೆ ಇಷ್ಟು ಮಾತ್ರ ಹೇಳಲೇಬೇಕು. ಕ್ರಿಸ್ತಶಕದ ೨೦ ನೆಯ ಶತಮಾನದ ತಾತ್ವಿಕರೆಲ್ಲರೂ ಮೆಕ್‌ಟಗ್ಗಾರ್ಟ್ ನೀಡಿದ A Series ಮತ್ತು B Series ಸಮಸ್ಯೆಯನ್ನು ಬಿಡಿಸಲು ಯತ್ನಿಸಿದರು. ಮೆಕ್‌ಟಗ್ಗಾರ್ಟ್ ಅನ್ನು ಹೆಸರಿಸಿ, ಅವನ ಮಾತುಗಳನ್ನು ಉಲ್ಲೇಖಿಸಿ, ಲೇಖನಗಳನ್ನು ಅವರು ಬರೆಯಲಿಲ್ಲ. ಆದರೂ ಅವನು ಕಾಣಿಸಿದ ಸಮಸ್ಯೆಯು, ಅವ್ಯಕ್ತವಾಗಿಯಾದರೂ ಕಾಡಿರಲೇಬೇಕು. ಸೊಳ್ಳೆಯು ಕಚ್ಚಿದ ಮೇಲೆ ನವೆ ಮತ್ತು ಉರಿ, ಆ ಸ್ಥಳದಲ್ಲಿ ಉಂಟಾಗುತ್ತದೆ. ಹಿತವಾಗಿ ಕೆರೆದುಕೊಳ್ಳುತ್ತೇವೆ. ಕೆರೆದುಕೊಳ್ಳುವಾಗ, ಸೊಳ್ಳೆ ಕಚ್ಚಿದೆ ಅಥವಾ ಚುಚ್ಚಿ ರಕ್ತವನ್ನು ಹೀರಿದೆ ಎಂಬ ಪ್ರಜ್ಞೆಯು ಬಹುತೇಕ ಇರುವುದೇ ಇಲ್ಲ. ಆದರೂ ಕೆರೆದುಕೊಂಡಾಗ ಎಂತಹ ಸ್ವರ್ಗಸುಖ !

ಅದರಂತೆಯೇ ತಾತ್ವಿಕರ ಪ್ರಪಂಚದಲ್ಲಿ; ೨೦ನೆಯ ಶತಮಾನದ ಮೊದಲ ದಶಕದಲ್ಲಿ ; ಮೆಕ್‌ಟಗ್ಗಾರ್ಟ್ ಮನನಿಗನು, ಯೋಚನಾ ಜೀವಿಗಳ, ಮನಸ್ಸನ್ನು ಕಚ್ಚಿದ, ಚುಚ್ಚಿದ. ತೀಟೆಯನ್ನು ತೀರಿಸಿಕೊಳ್ಳುವುದಕ್ಕೆ ೨೦ ನೆಯ ಶತಮಾನದ ಪಾಶ್ಚಾತ್ಯ ತಾತ್ವಿಕರು, ತೊಡಗಿದರು. ಸಂಖಿಪಟ್ಟರು.

ಆದರೆ, ಮೆಕ್‌ಟಗ್ಗಾರ್ಟ್. ಕಾಲದ ನಿಜ ಸತ್ಯತೆಯು ಅಂಚನ್ನಾದರೂ ಕಂಡಿದ್ದ ; ಎಂದೇನಲ್ಲ. ಆತನ ವಿಚಾರ ಧಾರೆಯಲ್ಲಿ ಹಿರಿದಾದ ದೋಷಗಳಿವೆ, ಲೋಪಗಳಿವೆ. ಆದರೆ ಲೋಪದೋಷಗಳು, ಅತ್ಯಂತ ಮೂಲವಾದುದರಿಂದ ಸಮಕಾಲೀನರಾದ ಪಾಶ್ಚಾತ್ಯ ಬುದ್ಧಿಜೀವಿಗಳು, ತಾತ್ವಿಕರು ಮತ್ತು ಅನುಭಾವಿಗಳು, ಅವನಂದುದನ್ನು ಹರಿದು ತುಂಡರಿಸಲು ತೊಡಗಿದರು. ಈ

ಪ್ರಯತ್ನದಲ್ಲಿ – Change – ವ್ಯತ್ಯಾಸ. Substance and Essence ಘನೀಭೂತ ನೆರಳು–ಆದರ ತಿರುಳು ; Events ಘಟನೆಗಳು ; Proposition ಹೀಗಿರಬೇಕು ಎನ್ನುವ ಚಮತ್ಕಾರಪೂರ್ಣ, ಕುತೂಹಲ ಪ್ರೇರಿತ, ಊಹೆ; Truth – ಸತ್ಯ ; ಮತ್ತು ಕಾಲದ ವಿರಾಟ್ ಸ್ವರೂಪಧಾರಿಯಾದ ಈಶ್ವರ ಇತ್ಯಾದಿಗಳು :– ಇವೆಲ್ಲವೂ ಮಾನವನ ತಾತ್ವಿಕ ತಾರ್ಕಿಕನ ಗಮನವನ್ನು ಸೆಳೆದುವು, ಚಮತ್ಕಾರವು ಅಳಿದನಂತರವೇ, ಸತ್ಯ ಜ್ಞಾನವು, ಚಿತ್ ಜ್ಞಾನ ವಾಗಿ, 'ಕಾಲ'ದ ಅರಿವನ್ನು ಮೂಡಿಸಲು ಸಾಧ್ಯ. ಕಾಲ ಮತ್ತು ಅದನ್ನನು ಭವಿಸುವ ಅಂಶ ಇವೆರಡೂ ಒಂದೇ ಎಂಬುದನ್ನೂ ಪ್ರತ್ಯಕ್ಷಿಸಿತು.

ಪ್ಲೇಟೋ, Plato ಸ್ಪೈನೋಜಾ, Spinoza ಹೆಗೆಲ್, Hegel ಇಂತಹ ಪ್ರಚಂಡ ಮನನಿಗರ ತೋಳಮೇಲೆ ನಿರ್ಭಯವಾಗಿ ಕುಳಿತ ಮೆಕ್‌ಟಗ್ಗಾರ್ಟ್, ಅವರುಗಳು ಅನುಮಾನಿಸಿದಂತೆಯೇ, 'ಕಾಲ' ಎಂಬುದೊಂದು ಆದಿಮೂಲ ವಾದ ಆದಿವಾಸ್ತಿಕವಾದ, 'ಅದು' ಇಲ್ಲವೇ ಇಲ್ಲ ಎಂದು ಘೋಷಿಸಿದ. ತನ್ನ ಬಾಳ ಗುರಿಯನ್ನು ಸಾಧಿಸಿದ.

## 5. ಅರಿಜೋನಾದ ಪುರಾಣ ಕಾಲದ ಹೋಪಿ [Hopis] ಗಳು.

ನಮ್ಮ ಸಂಸ್ಕೃತಿಗಳಲ್ಲಿ, ಕಾಲ ದೇಶ ನಿಮಿತ್ತ ಇವುಗಳ ಕಲ್ಪನೆಯು ಐದಾರು ಸಾವಿರ ವರ್ಷಗಳಿಂದಲೂ ಬೆಳೆಯುತ್ತಾ ಬಂದಿದೆ. ಅರೇಬಿಯಾ, ಗ್ರೀಸ್, ಮತ್ತು ರೋಂ ಗಳಲ್ಲಿಯೂ ಇದೇ ತೆರನ ಕಾಲದ ಮತ್ತು ದೇಶದ ಕಲ್ಪನೆಯು ಉಳಿದು, ಬೆಳೆದು, ಬಂದಿದೆ. ಹಾಗಾಗಿ ಅವುಗಳ ಪರಂಪರೆಯಲ್ಲಿ ನಡೆದು ಬಂದಿರುವವರೆಲ್ಲರೂ, ಕಾಲದ ಮತ್ತು ದೇಶದ ಕಲ್ಪನೆಯನ್ನು ಮುಂದು ವರಿಸಿಕೊಂಡು ಬಂದಿದ್ದಾರೆ. ಹಿಂದೆ, ಇಂದು, ಮುಂದೆ ; ನಿನ್ನೆ, ಇವತ್ತು, ನಾಳೆ ; ಇತ್ಯಾದಿ ಮಾತುಗಳೆಲ್ಲವೂ ಬಳಕೆಯಲ್ಲಿರುವುದು. ಕಾಲದ ಕಲ್ಪನೆಯು ಇರುವುದರಿಂದಲೇ. ಬೇಗ ಬಂದುಬಿಟ್ಟ : ತಡವಾಗಿ ಬಂದಿತು, ಇಂತಹ ಕಾಲದ ತಾರತಮ್ಯವನ್ನು ತೋರುವ ಮಾತುಗಳು ಕೂಡ, ಕಾಲದ ಕಲ್ಪನೆ ಯಿಂದ ಉಂಟಾದುವು. ಕಾಲದ ಅಳತೆಗೆ, ನಿನ್ನೆ ಇವತ್ತು ಮತ್ತು ನಾಳೆಗಳು ಅಗತ್ಯವಾದುವು. ಇನ್ನೊಂದು ರೀತಿಯಲ್ಲಿ ಕಾಲವನ್ನು ಅಳೆಯಲು ಸಾಧ್ಯ. 'ಅದಕ್ಕಿಂತ ಇದು ಮೊದಲು', 'ಇದಾದ ಮೇಲೆ ಅದು ಸಂಭವಿಸಿತು' ಎನ್ನುವ

ಮಾತುಗಳು ಕಾಲವನ್ನು ಅಳೆಯುತ್ತವೆ. ವಿರಳವಾಗಿ ಇದು ಅರ್ಥವಾಗಲು ಉದಾಹರಣೆಯು ಅಗತ್ಯವೇನೋ ಎನಿಸಿದುದರಿಂದ ಸರಳವಾದುದನ್ನು ಬಳಸಿಕೊಳ್ಳುತ್ತೇವೆ.

ಹಿಂದೆ ಬಲು ಹಿಂದೆ ಅಂದರೆ ೧೭೯೯ ರಲ್ಲಿ ಟೀಪೂ ಸುಲ್ತಾನನು ವೀರ ಸ್ವರ್ಗವನ್ನೈದಿದ. ವರ್ತಮಾನ ಕಾಲದಲ್ಲಿ ರಾಜಮಹಾರಾಜರುಗಳು, ಸುಲ್ತಾನರು ಇತ್ಯಾದಿಗಳು ನಾಮಾವಶೇಷವಿಲ್ಲದಂತಾಗಿದ್ದಾರೆ. ಮುಂದೆ ಇನ್ನೊಂದೆರಡು ದಶಕಗಳಲ್ಲಿ 'ನಾಯಕ' ಎಂಬ ಹೆಸರನ್ನು ಹೊತ್ತವರೇ ಸುಲ್ತಾನರಂತೆ ರಾಜಮಹಾರಾಜರಂತೆ ತಮ್ಮ ಬಾಳನ್ನು ನಡೆಸುತ್ತಾರೆ.

ಹೀಗೆಂದು ಹೇಳಿದಾಗ, ಭೂತ, ವರ್ತಮಾನ, ಭವಿಷ್ಯ, ಕಾಲದ ಈ ಮೂರು ವಿಂಗಡನೆಗಳನ್ನು ಕಾಣುತ್ತೇವೆ. ದೇಶದಲ್ಲಿ ನಡೆಯುವ ಘಟನೆಗಳಿಗೆ ಕಾಲದ ಈ ವಿಂಗಡಣೆಗಳು ಅನ್ವಯಿಸುತ್ತವೆ. ಬದಲು ಇನ್ನೊಂದು ರೀತಿಯಲ್ಲಿ ಈ ಘಟನೆಗಳನ್ನು ವಿವರಿಸಬಹುದು.

ಟೀಪೂಸುಲ್ತಾನನು ನಿಧನನಾದ ಮೇಲೆ ವೋಟಿನ ಸುಲ್ತಾನ ಅವತರಿಸಿದ, ಎನ್ನಬಹುದು. ವೋಟಿನ ಸುಲ್ತಾನನು ಗದ್ದುಗೆಯನ್ನು ಏರುವುದಕ್ಕೆ ಮೊದಲು, ರಾಜಮಹಾರಾಜರುಗಳನ್ನು ಗದ್ದುಗೆಯಿಂದ ಬಲವಂತವಾಗಿ ದಬ್ಬಿದರು, ಎಂದೂ ಹೇಳಬಹುದು.

ಕಾಲದ ಕಲ್ಪನೆಯಿರುವುದರಿಂದಲೇ ಈ ಎರಡೂ ತರಹ ಅಳತೆಯ ಮಾತುಗಳು ಅಗತ್ಯವಾಯಿತು.

ಅಮೇರಿಕಾ ಖಂಡದ ಅರಿಜೋನಾ ಎಂಬ ದೇಶದಲ್ಲಿ ಸಾವಿರಾರು ವರ್ಷ ಗಳ ಹಿಂದೆ 'ಹೋಪಿ' [Hopi] ಎನ್ನುವ ಜನಾಂಗವೊಂದಿತ್ತು. ಬಲುಕಾಲ ಬಾಳಿರಬಹುದಾದ ಪುರಾತನವಾದ ಆ ಜನಾಂಗಕ್ಕೆ ಸಂಸ್ಕೃತಿಯೂ ಇತ್ತು. ಭಾಷೆಯೂ ಇತ್ತು.

ಆದರೆ ಅವರ ಭಾಷೆಯಲ್ಲಿ ಕಾಲ, ದೇಶ, ಈ ಮಾತುಗಳೇ ಇದ್ದಿಲ್ಲ. ನಿನ್ನೆ ನಾಳೆ, ಎನ್ನುವ ಪದಗಳೇ ಇರಲಿಲ್ಲ. ಕಾಲದ ಕಲ್ಪನೆಯೂ ಇಲ್ಲದೆ ಇದ್ದ ಅವರ ಸಂಸ್ಕೃತಿಯು ತಿರುಳೇನು ! ಹೋಪಿ ಭಾಷಾ ಪಂಡಿತ ಬೆನ್ಜಮಿನ್ ಲೀಪ್ಹೋರ್ಫ್ Benjamin Lee Whorf ಹೀಗನ್ನುತ್ತಾನೆ.

ಹೋಪಿ ಭಾಷೆಯಲ್ಲಿ ಕಾಲ ಎನ್ನುವ ಪದಕ್ಕೆ ಸರಿಸಮಾನವಾದ ಅಥವಾ ಕಾಲವನ್ನು ಸೂಚಿಸುವಂತಹ ಯಾವ ಪದವೂ ಇಲ್ಲ. ಭೂತ, ವರ್ತಮಾನ, ಭವಿಷ್ಯ ಎಂದು ಅರ್ಥ ಬರುವ ಮಾತುಗಳೇ ಇಲ್ಲ. Space ಅಥವಾ ದೇಶ ಮತ್ತು ಕಾಲದಲ್ಲಿ ಸಂಭವಿಸುವ ಚಲನ, ಉದಾ. 'ನಾಯಿ ಓಡುತ್ತಿದೆ' ಎನ್ನುವಂತಹ ಪದ ಬಳಕೆಯೇ ಇಲ್ಲ. ದೇಶ ಅಥವಾ Space ಎನ್ನುವ ಪದದ ಬಳಕೆಯೇ ಇಲ್ಲ. Space ಎಂಬ ಪದವೇನಾದರೂ ಇದ್ದಿದ್ದರೆ ಅದರ ಬಳಕೆಯಲ್ಲಿ ಕಾಲದ ಸೂಚನೆಯೂ ಇದ್ದಿರಲು ಸಾಧ್ಯ. ಅಂತಹುದೂ ಇಲ್ಲ. ಅಂದರೆ ಹೋಪಿ ಬಾಷೆಯಲ್ಲಿ. Space and Time ; ದೇಶ ಮತ್ತು ಕಾಲದ ಪದಗಳೇ ಇಲ್ಲ.

ಇಂತಹ ಕಲ್ಪನೆಗಳು ಇಲ್ಲದೆಯೇ ಅವರ ಸಂಸ್ಕೃತಿಯು ಹೇಗೆ ಬೆಳೆಯಿತು. ದಿನ ದಿನದ ವ್ಯವಹಾರದಲ್ಲಿ ಅವರುಗಳು ಯಾವ ರೀತಿಯಲ್ಲಿ ದಿನ ರಾತ್ರಿಯನ್ನು ವರ್ಣಿಸುತ್ತಿದ್ದರು.?

ಅವರುಗಳೂ ಬ್ರಹ್ಮಾಂಡದಲ್ಲಿ ವಾಸಿಸುತ್ತಿದ್ದರು. ಅವರ ಕಾಲದ ಮಟ್ಟದಲ್ಲಿ ಸುಸಂಸ್ಕೃತ ಎನ್ನಬಹುದಾಗಿದ್ದ ಪರಂಪರೆಯನ್ನು. ಸಾಮೂಹಿಕ ಜೀವನದ ರೀತಿ ನೀತಿಗಳನ್ನೂ ಅಭಿವೃದ್ಧಿಸಿಕೊಂಡಿದ್ದರು. ಬ್ರಹ್ಮಾಂಡದ ಕಲ್ಪನೆಯನ್ನು ಅವರೂ ಊಹಿಸಲೇಬೇಕು. ತಮ್ಮ ಅನುಭವಕ್ಕೆ ತಕ್ಕಂತೆ ಆ ಕಲ್ಪನೆಯನ್ನು ವಿವರಿಸಲೇ ಬೇಕು, ಹಾಗೆ ವರ್ಣಿಸಿದಾಗ, Space and time, ದೇಶ ಮತ್ತು ಕಾಲ, ಈ ಪದಗಳ ಅಗತ್ಯವೇ ಅವರಿಗೆ ಉಂಟಾಗಲಿಲ್ಲ. ಇದು ಹೇಗೆ ಸಾಧ್ಯ ಎಂದು ಸಮುಗನ್ನಿಸಲೇ ಬೇಕು ; ಅಲ್ಲವೆ ?

ನಮ್ಮ ಇಂತಿನ ಕಲ್ಪನೆಯಲ್ಲಿ ಕಾಲವು ನಿರಂತರವಾಗಿ ಹರಿಯುತ್ತಿದೆ ಎನ್ನುವುದು ತುಂಸು ಕಾಲದ ಹಿಂದೆ ಸಿದ್ಧಾಂತವಾದಂತೆ ಇತ್ತು. ಸಾಪೇಕ್ಷತಾವಾದದ ಆರಂಭವಾದ ಮೇಲೆ, ಕಾಲ ಎನ್ನುವ ಸ್ವಂತ ಅಸ್ತಿತ್ವವುಳ್ಳ ಯಾವುದೂ ಇಲ್ಲ, ಎಂಬುದು ಸಿದ್ಧಾಂತವಾಯಿತು. ಕಾಲಕಾಲಕ್ಕೆ ಜ್ಞಾನಾರ್ಜನೆಯ ಅಪೂರ್ಣತ್ವದಿಂದ, ಸಿದ್ಧಾಂತಗಳು ಉದ್ಭವಿಸುತ್ತವೆ, ಅಳಿದುಹೋಗುತ್ತವೆ. ಕೆಲ ಕಾಲಾನಂತರ ಕಾಲ ಮತ್ತು ದೇಶ ; Space and Time ಎರಡೂ ಸ್ವಂತ ಅಸ್ತಿತ್ವವನ್ನು ಹೊಂದಿಲ್ಲ. ಸಾಂಖ್ಯದಲ್ಲಿ ಹೇಳಿದಂತೆ ನಿಮಿತ್ತವೇ

ಇವೆರಡರೊಂದಿಗೂ ಸಂಪೂರ್ಣವಾಗಿ ಬೆಸೆದುಕೊಂಡಿದೆ ಎಂಬ ಸಿದ್ಧಾಂತವು ಮರುಕಳಿಸಬಹುದು.

ಈ ನೈಜ ದೃಷ್ಟಿಯಿಂದ ನೋಡಿದರೆ, ಹೋಪಿ ಜನಾಂಗದ, ಕಾಲ ದೇಶ ಇವುಗಳ ಕಲ್ಪನೆಯು ಇಲ್ಲದಿರುವ, ಬ್ರಹಾಂಡದ ಊಹೆಯು ಏನಿತ್ತು? ಅದನ್ನು ಅವರು ವರ್ಣಿಸಿದ್ದುದು ಹೇಗೆ? ಎನ್ನುವುದನ್ನು ಅರಿಯುವುದು ಅತ್ಯಗತ್ಯ.

ಬೆಂಜಮಿನ್ ಲೀ ವ್ಹೋರ್ಫ್ ಮುಂದುವರಿಯುತ್ತಾ ಹೀಗನ್ನುತ್ತಾನೆ.

ಬ್ರಹ್ಮಾಂಡದಲ್ಲಿ ಕಂಡ ಘಟನೆಗಳನ್ನು, ಹೋಪಿ ಭಾಷೆಯಲ್ಲಿ ಸರಳವಾಗಿ ತಿಳಿಯುವಂತೆ ವಿವರಿಸಲಾಗಿದೆ. ವ್ಯವಹಾರದ ದೃಷ್ಟಿಯಿಂದ ಸಮರ್ಪಕ ವಾಗಿರುವಂತೆ ವಿವರಿಸಲಾಗಿದೆ. ಆದಕಾರಣ, 'ಕಾಲದ ಪ್ರವಾಹವು ನಿರಂತರ ವಾಗಿ ಹರಿಯುತ್ತಿದೆ. ಇದು ನಮ್ಮ ಆಳಮನಸ್ಸಿನ ಅನುಭವದಿಂದ [Intuitional] ಸ್ಥಿರೀಕೃತವಾಗಿದೆ', ಎಂದು ಇಂದಿನವರು ಹೇಳುವುದರಲ್ಲಿ ಯಾವ ಸತ್ಯಾಂಶವೂ ಇಲ್ಲ. ಗಣಿತ ಶಾಸ್ತ್ರದ ಆಧಾರದ ಮೇಲೆ ಸಿದ್ಧಾಂತ ಮಾಡಲ್ಪಟ್ಟ, ಬ್ರಹ್ಮಾಂಡವನ್ನು ವಿವರಿಸುವ ಸಾಪೇಕ್ಷತಾವಾದವು ಒಂದು ವಿಧಾನ. ಗಣಿತ ಶಾಸ್ತ್ರದ ನೆರವಿಲ್ಲದೆ, ಭಾಷೆಯ ಪದಗಳಿಂದ ಬ್ರಹ್ಮಾಂಡವನ್ನು ವಿವರಿಸುವುದು ಹೋಪಿಯ ವಿಧಾನ.

ಹಾಗಾಗಿ ಹೋಪಿ ಭಾಷೆಯಲ್ಲಿ ಮತ್ತು ಸಂಸ್ಕೃತಿಯಲ್ಲಿ ಭೌತಾತೀತವಾದ ತಿರುಳು ಅಡಗಿದೆ. ಕಾಲ–ದೇಶದ ನಮ್ಮ ಅನುಕೂಲ-ಸಿದ್ಧ ಕಲ್ಪನೆಯಲ್ಲೂ ಅಂತಹ ತಿರುಳಿದೆ. ಸಾಪೇಕ್ಷತಾವಾದದಲ್ಲಿಯೂ ತಿರುಳು ಅಡಗಿದೆ. ಆದರೆ ಮೂರೂ ಈ ವಿಧಾನಗಳಲ್ಲಿ ಅಡಗಿರುವ ಭೌತಾತೀತ ತಿರುಳು ವಿಭಿನ್ನವಾಗಿದೆ. ಹೇಗೆ ಎಂಬುದನ್ನು ಪರಿಶೀಲಿಸೋಣ. ಹೋಪಿ ಸಂಸ್ಕೃತಿಯಲ್ಲಿ ಅಡಗಿರುವ ಭೌತಾತೀತ ತಿರುಳನ್ನು ವಿವರಿಸಬೇಕಾದರೆ, ಆ ಭಾಷೆಯೇ ಅಗತ್ಯ. ಆದರೂ ತರ್ಜುಮೆ ಮಾಡಿ ವಿವರಿಸುತ್ತೇನೆ. ಹೋಪಿ ಭಾಷೆಯಲ್ಲಿ ಕಾಲವೇ ಇಲ್ಲ. ಮಾಯವಾಗಿ ಬಿಟ್ಟಿದೆ. ಹಿಂದಿನ ನಮ್ಮ ಕಲ್ಪನೆಯಂತೆ, Space ಅಥವಾ ದೇಶವು Homogeneous ಆದ, ಕಾಲಕ್ಕೆ ಸಂಬಂಧವಿರದ ಮೂಲಭೂತವಾದು ದಲ್ಲ. ಹಾಗೂ ನ್ಯೂಟನ್ನನು ಊಹಿಸಿದಂತೆಯೂ ಇಲ್ಲ. ಆದರೆ ಹೋಪಿ ಭಾಷೆಯಲ್ಲಿ ಹೊಸ ಹೊಸ ಕಲ್ಪನೆಗಳೂ, ಸಾಂಕೇತಿಕ ಪದಗಳೂ ಹೇರಳವಾಗಿ

ಕಾಣಬರುತ್ತವೆ. ಇವುಗಳನ್ನು ಸ್ಪಷ್ಟವಾಗಿ ವಿವರಿಸಲು ನಮ್ಮ ಭಾಷೆಯಲ್ಲಿ ಸರಿಯಾದ ಪದಗಳೇ ಇಲ್ಲ. ಕಲ್ಪನೆಗಳು ಹೊಸದಾದರೆ, ಹೊಸ ಪದಗಳನ್ನು ಸೃಷ್ಟಿಸುವುದು ಅಗತ್ಯವಾಗುತ್ತದೆ. ಹೋಪಿ ಸಂಸ್ಕೃತಿಯ ಕಲ್ಪನೆಗಳೇ ನಮ್ಮಲ್ಲಿ ಇಲ್ಲದುದರಿಂದ ಅಂತಹ ಕಲ್ಪನೆಗಳನ್ನು ಸಾಂಕೇತಿಸುವ ಪದಗಳೂ ನಮ್ಮ ಭಾಷೆಗಳಲ್ಲಿ ಸೃಷ್ಟಿಯಾಗಲಿಲ್ಲ.

ಹೀಗಾಗಿರುವುದರಿಂದ ಹೋಪಿ ಭಾಷೆಯ ಕಲ್ಪನೆಗಳು, ನಮ್ಮ ಭಾಷೆಗೆ ತರ್ಜುಮೆಯಾದಾಗ ಹೋಪಿ ಸಂಸ್ಕೃತಿಯ ಭೌತಾತೀತ ಕಲ್ಪನೆಗಳು, ಮನಃಶಾಸ್ತ್ರದ ಅಥವಾ ಮನೋಽತೀತ ಅನುಭವದ ಗುಣಗಳನ್ನು ಹೊಂದಿರುವಂತೆ ಕಾಣುತ್ತವೆ. ಆದಿಮಾನವನ Animistic ಸರ್ವಚೇತನವಾದದ ನಂಬಿಕೆಗಳಿದ್ದಂತೆ ನಮಗೆ ಕಾಣಬಹುದು. ಅಥವಾ ಅನುಭವ ಮತ್ತು ಸ್ಫೂರ್ತಿಗಳು ಮನೋಽತೀತವಾಗಿ ಒಂದಾದಂತೆಯೂ ಅನಿಸಬಹುದು. ಹಾಗೂ ಅತೀಂದ್ರಿಯ ಅಥವಾ ಇಂದ್ರಿಯಾತೀತ ಜ್ಞಾನವನ್ನು ಪಡೆದಿರುವ ಮುಮುಕ್ಷುಗಳು[Mystics] ನುಡಿಯುವ ಗೂಢವೂ ಪ್ರಕೃತ್ಯಾತೀತವೂ[Occult] ಆದ ಮಾತುಗಳಂತೆಯೂ ಕಾಣುತ್ತವೆ. ಆದರೂ ಹೋಪಿಯ ಕಲ್ಪನೆಗಳು ಅವರು ಕಂಡ ಪರಿಸರದ ಘಟನೆಗಳನ್ನೂ ಅವುಗಳ ಅಂತರ್ ಸಂಬಂಧವನ್ನೂ ಸರಳವಾಗಿ, ನಿಸ್ಸಂದೇಹವಾಗಿ ವಿವರಿಸುತ್ತವೆ. ಹೋಪಿ ಸಂಸ್ಕೃತಿಯ ಸಂಘಟನೆಗೆ ಅತ್ಯನುಕೂಲವಾಗಿದೆ.

ನಮ್ಮ ಭಾಷೆಯಲ್ಲಿ ಅಸ್ತಿತ್ವಕ್ಕೆ ಬಂದಿರುವ ಬ್ರಹ್ಮಾಂಡದ ಕಲ್ಪನೆಯು ಐನ್‌ಸ್ಟೈನ್ ಅವರಿಗೆ ಮೊದಲು ಹೀಗಿದ್ದಿತು. ಮೂರು ದಿಕ್ಕುಗಳ ಪ್ರಮಾಣವುಳ್ಳ ಸ್ಥಿರಸ್ಥಾಯೀಯಾದ Space ಅಥವಾ ದೇಶ ಮತ್ತು ನಿರಂತರವಾಗಿ ಚಲಿಸುತ್ತಿರುವ ನಾಲ್ಕನೆಯದಾದ ಕಾಲ ಈ ಎರಡೂ ಬ್ರಹ್ಮಾಂಡಕ್ಕೆ ಮೂಲಭೂತವಾದುವು. ಚಲಿಸುತ್ತಿರುವ ಕಾಲವೂ ಭೂತ ವರ್ತಮಾನ ಮತ್ತು ಭವಿಷ್ಯ ಎನ್ನುವ ವಿಂಗಡಣೆಗಳನ್ನು ಹೊಂದಿದೆ.

ಹೋಪಿ ಸಂಸ್ಕೃತಿಯಲ್ಲೂ ಬ್ರಹ್ಮಾಂಡಕ್ಕೆ ಆದಿಮೂಲವಾದ ಕಲ್ಪನೆಗಳು ಎರಡಿವೆ. ಒಂದು ಕಣ್ಣಿಗೆ ಪ್ರತ್ಯಕ್ಷವಾಗಿರುವುದು, ಅಥವಾ ಮನಸ್ಸಿಗೆ ಸ್ಪಷ್ಟವಾಗಿರುವುದು. ಇದನ್ನು Manifested ಅಥವಾ Objective ಬಾಹ್ಯದ ವಾಸ್ತವಿಕತೆ ಎನ್ನುತ್ತಾರೆ. ಎರಡನೆಯದು ಇನ್ನೂ ಕಣ್ಣಿಗೆ ಪ್ರತ್ಯಕ್ಷವಾಗದ

ಅಥವಾ ಮನಸ್ಸಿಗೆ ಅಸ್ಪಷ್ಟವಾಗಿರುವ, ಎಲ್ಲವೂ. ಇದನ್ನು Manifesting ಅಥವಾ Unmanifest ಎಂದು ಕರೆಯಬಹುದು, ಇದು [Subjective] ವೈಯುಕ್ತಿಕವಾದದು.

ಮೊದಲನೆಯದಾದ Manifested ಅಥವಾ ಪ್ರತ್ಯಕ್ಷವಾದ ಬ್ರಹ್ಮಾಂಡ ದಲ್ಲಿ ಪಂಚೇಂದ್ರಿಯಗಳಿಂದ ಅರಿತುದುದೆಲ್ಲವೂ ಸೇರಿದೆ. ಭೌತಜಗತ್ತು ಸೇರಿದೆ. ನಾವುಗಳು ಭವಿಷ್ಯ ಎನ್ನುತ್ತೇವಲ್ಲ ಅದೊಂದನ್ನು ಹೊರತು, ಮಿಕ್ಕೆಲ್ಲವನ್ನೂ ಈ ಭಾಗವು ಒಳಗೊಂಡಿದೆ. ಇದರಲ್ಲಿ ಭೂತ, ವರ್ತಮಾನ ಎನ್ನುವ ಕಲ್ಪನೆ ಗಳೇ ಇಲ್ಲ.

ಎರಡನೆಯದಾದ Manifesting ಅಥವಾ Unimanifest, ಈ ಭಾಗ ದಲ್ಲಿ ನಾವು ಭವಿಷ್ಯ ಅಂದುಕೊಂಡಿರುವುದೆಲ್ಲಾ ಸೇರಿಕೊಂಡಿದೆ. ಅಷ್ಟೇ ಅಲ್ಲ. ಮನಸ್ಸಿನಲ್ಲಿರುವುದು ಎಂದು ನಾವು ಅನ್ನುವುದೆಲ್ಲಾ ಈ ಭಾಗದ ವ್ಯಾಪ್ತಿಗೆ ಒಳಪಟ್ಟಿದೆ. ಮನಸ್ಸಿನಲ್ಲಿ ತೋಚಿ ಬಾದ ಯೋಚನೆಗಳು, ಮನಸ್ಸಿನಲ್ಲಿ ಇರುವ ಭಾವ ರಾಗಗಳು, ಎಲ್ಲವೂ ಈ ಭಾಗಕ್ಕೆ ಸೇರಿವೆ. ಮನಸ್ಸು ಎನ್ನುವ ಪದವು ಹೋಪಿ ಭಾಷೆಯಲ್ಲಿಲ್ಲ. ಮನಸ್ಸು ಎನ್ನುವುದಿಲ್ಲ. ಹೃದಯ ಎಂದು ಕರೆಯುತ್ತಾರೆ ಹೋಪಿ ಭಾಷೆಯಲ್ಲಿ : ಹೃದಯ ಎಂದಾಗ ಮನುಷ್ಯನ ಹೃದಯವನ್ನು ಮಾತ್ರ ಉದ್ದೇಶಿಸುವುದಿಲ್ಲ. ಪ್ರಾಣಿಗಳ ಹೃದಯವೂ, ಸಸ್ಯಗಳ ಹೃದಯವೂ, ಮತ್ತು ವಸ್ತುಗಳ ಹೃದಯವೂ, ಆ ಪದದ ಅರ್ಥವ್ಯಾಪ್ತಿಯಲ್ಲಿ ಸೇರಿಕೊಂಡಿದೆ. ಇಷ್ಟೇ ಅಲ್ಲ ಪ್ರಕೃತಿಯಲ್ಲಿ ಎಲ್ಲದರಲ್ಲಿಯೂ ಅಂತರ್ಗತವಾಗಿರುವ ಹೃದಯವೂ ಇಂಗಿತವಾಗಿದೆ. ಹೃದಯ ಎನ್ನುವಾಗ ಆಧ್ಯಾತ್ಮಿಕವಾದ, ಆದಿ-ಮೂಲವಾದ ಈ ಕಲ್ಪನೆಯೂ ಅಂತರ್ಗತವಾಗಿದೆ. ಆದರೆ ಯಾವ ಹೋಪಿಯೂ ಪವಿತ್ರವಾದ ಈ ಅರ್ಥ ವನ್ನು ಬಹಿರಂಗ ಪಡಿಸುವುದಿಲ್ಲ, ತಾನಾಡುವ ಭಾಷೆಯಲ್ಲಿ.

Subjective ಅಥವಾ ವೈಯುಕ್ತಿಕವಾದ ಈ ಭಾಗವು, ಹೋಪಿಗಳಿಗೆ ಸತ್ಯವೂ ನಿತ್ಯವೂ ಆದಂದು. ಮನಸ್ಸಿನ ಕಲ್ಪನೆ, ಹಗಲುಗನಸು, ಕನಸು, ಇವುಗಳಿಗೆಲ್ಲಾ ಪ್ರತ್ಯೇಕವಾದ ಅಸ್ತಿತ್ವವೇ ಇಲ್ಲ, ಎಂದು ನಾವು ಅಂದು ಕೊಳ್ಳುತ್ತೇವೆ. ಆದರೆ ಹೋಪಿಗಳಿಗೆ ಇದೇ ನನಸು, ಇದೇ ಸತ್ಯ, ಇದೇ ಪ್ರಚಂಡ ಶಕ್ತಿ : ಅತ್ಯುತ್ಸಾಹದಿಂದ ತುಳುಕಾಡುತ್ತಿರುವ ಜೀವನದ ತಿರುಳು.

ಹೀಗೆ ಅವಿತರವಾಗಿ ತುಳುಕಾಡುತ್ತಿದ್ದರೂ, ಈ "ಹೃದಯ" ಎಂಬುದು ನಮ್ಮ ಹತ್ತಿರಕ್ಕೆ ಬರುತ್ತಿದೆ, ನಮ್ಮ ಬಳಿಗೆ ಹರಿಯುತ್ತಿದೆ ಎನ್ನುವ ಕಲ್ಪನೆಯೇ ಇಲ್ಲ. ಅದು ನಮ್ಮಲ್ಲಿ ಅಂತರ್ಗತವಾಗಿದೆ ತುಳುಕಾಡುವಾಗ ಸ್ಪಷ್ಟವಾಗುತ್ತದೆ. ಹೋಪಿಯ "ಹೃದಯ"ದಿಂದ ತುಸು ತುಸು ಹೊರಬೀಳುತ್ತದೆ. [The subjective withoutmotion and.by degrees becomes objective]

ಕನ್ನಡದಲ್ಲಿ ಹೇಳುವುದಾದರೆ, ಹೋಪಿಯು ಹೀಗನ್ನಬೇಕಾಗಿತ್ತು. "ಕಾರ್ಯಕಾರಣವಾದ ಇವುಗಳು 'ಹೃದಯ'ದಿಂದ, ಬರುತ್ತವೆ ಅಥವಾ ಹೋಪಿಯು ಅವುಗಳತ್ತ ಹೋಗುತ್ತಾನೆ" ಎಂದು. ಆದರೆ ಹೋಪಿ ಭಾಷೆಯಲ್ಲಿ ಹೋಗು, ಬರು, ಎನ್ನುವ ಪದಗಳಿಲ್ಲ. ಚಲನವನ್ನು ಸೂಚಿಸುವ ಇಂತಹ ಪದಗಳಿಲ್ಲ. ಇಲ್ಲಿದ್ದಾನೆ, ಎಂದಾಗ ಇಲ್ಲಿಗೆ ಬಂದು ಸೇರಿದ ಎಂಬ ಅರ್ಥ ಬರುವುದಿಲ್ಲವೆ ? ಈಗ ಇಲ್ಲಿದ್ದಾನೆ ಎನ್ನುವ ಆವಶ್ಯಕತೆಯು ಇಲ್ಲ. ಹೋಪಿಗಳು ಈ ರೀತಿ ಭಾಷೆಯನ್ನು ಕಾಲದ ಸಂಕೋಲೆಗಳಲ್ಲಿಲ್ಲದೆ, ಬೆಳೆಸಿದ್ದರು. ಚಲನವನ್ನು ವಿವರಿಸ ಹೋಗದೆ ಅಂತಿಮವಾದ ಸ್ಥಿತಿಯನ್ನು ಹೇಳುತ್ತಿದ್ದರು.

ಬಂದ ಎನ್ನುವುದಕ್ಕೆ ಹೋಪಿ ಭಾಷೆಯಲ್ಲಿ 'pew' i,ಎಂದು. ಹೋದ ಎನ್ನುವುದನ್ನು 'angqo' ಎನ್ನುತ್ತಿದ್ದರು. (ಬಂದು) ಸೇರಿದರು ಎನ್ನುವುದಕ್ಕೆ oki, ಸೇರಿದ ಎನ್ನುವುದಕ್ಕೆ Pitu , ಎನ್ನುತ್ತಿದ್ದರು. ಹೋಪಿ ಭಾಷೆಯ ಒಂದೆರಡು ಪದಗಳ ಪರಿಚಯ ಮಾಡಿಕೊಡಲು, ಹಾಗೂ 'ಕಾಲ'ದ ಕಲ್ಪನೆಯೇ ಇಲ್ಲದುದನ್ನು ತೋರಿಸಲು, ಇವುಗಳನ್ನು ಉದಹರಿಸಿದೆ.

ಇಂತಹ ಪದಗಳನ್ನು ಮತ್ತು ಕಲ್ಪನೆಯನ್ನು ಹೊಂದಿರುವ ಹೋಪಿ ಭಾಷೆಯ ಕೆಲವು ಸಮಸ್ಯೆಗಳನ್ನು ಎದುರಿಸಲೇಬೇಕು. ಅಂತಹವನ್ನು ಹೇಗೆ ಪರಿಹರಿಸಲಾಗಿದೆ ಎನ್ನುವುದನ್ನು ಪರಿಶೀಲಿಸೋಣ.

ಬರೆಯಬೇಕು ಎಂದು ಹೇಳಬೇಕು, ಮನಸ್ಸಿನಲ್ಲಿ ಯೋಚಿಸಿ, ಬರೆಯುವ ಕಾರ್ಯವನ್ನು ಆರಂಭಿಸಬೇಕು. ಇದು ವೈಯಕ್ತಿಕವಾದ, Subjective ಭಾಗ. ಬರೆಯುವುದು, Objective ಅಥವಾ ಬಾಹ್ಯದ ವಾಸ್ತವಿಕತೆ ಬರೆಯಲು ಆರಂಭಿಸುವುದು, ಇವೆರಡಕ್ಕೂ ಸಂಧಿಯುಂಟಿದೆ. ವೈಯಕ್ತಿಕವಾದ, ಅಂದರೆ ಭವಿಷ್ಯದ ಅಂಶ, ಬಾಹ್ಯದ Objective ಇನೊಂದಿಗೆ ಅಂದರೆ ವರ್ತಮಾನದೊಂದಿಗೆ ಕಲಸಿಹೋಗಿರುತ್ತದೆ. ಹೋಪಿ ಭಾಷೆಯಲ್ಲಿ 'ಬರೆಯ

ಬೇಕು' ಎನ್ನುವುದು ಬರವಣಿಗೆಯು ಆರಂಭಿಸಿತು ಎಂದಾಗುತ್ತದೆ. ಊಟ ಮಾಡುತ್ತಿದ್ದೇನೆ ಎನ್ನುವುದು ಊಟ ನಿಂತುಹೋಯಿತು ಎಂದಾಗುತ್ತದೆ. ಹೋಪಿ ಸಂಸ್ಕೃತಿಯ ಭೌತಾತೀತ, Metaphysical, ಕಲ್ಪನೆಯು ತಿಳಿಯು ದಿದ್ದರೆ, ಅವರ ಭಾಷೆಯು ಅರ್ಥವೇ ಆಗುವುದಿಲ್ಲ. ಹೀಗೆ ಹೋಪಿ ಭಾಷೆಯು 'ಸಂಧಿಕಾಲದ' ಸಮಸ್ಯೆಗಳನ್ನು ಪರಿಹರಿಸಿಕೊಂಡಿದೆ.

ನಮ್ಮ ಸಂಸ್ಕೃತಿಯ ಭೌತಾತೀತ ಪದಗಳನ್ನು ಹೋಪಿಯ ಪದಗಳಿಗೆ ಹೋಲಿಸತೊಡಗಿದರೆ ವೈಯಕ್ತಿಕ ಭಾಗವನ್ನು ಅಭಿಲಾಷೆ ಅಥವಾ Hope, Hoping ಎಂದು ಹೇಳಬಹುದು. ಭೌತಾತೀತ ವಿಷಯಂಗಳನ್ನು ಸಾಕೇಂತಿಸಲು ಸಾಮಾನ್ಯವಾಗಿ ಬಳಕೆಯಲ್ಲಿರುವ ಕೆಲವು ಪದಗಳನ್ನು ಪ್ರತಿಯೊಂದು ಭಾಷೆಯೂ ಅಭಿವೃದ್ಧಿ ಹೊಂದಿದ ಒಂದು ಹಂತದಲ್ಲಿ, ಮೀಸಲು ಮಾಡಿ ಕೊಳ್ಳುತ್ತದೆ. ನಮ್ಮ ಭಾಷೆಯಲ್ಲಿ ಸತ್ಯ, ಚಿತ್ತ, ಆನಂದ, ಎಂಬ ಪದಗಳು, ಬ್ರಹ್ಮಾಂಡದ ಕಲ್ಪನೆಯನ್ನು ನೀಡುತ್ತವೆ. ದೈನಂದಿನ ಬಾಳಿನ ವಿವರಣೆಗೂ ಬಳಸಲ್ಪಡುತ್ತವೆ. ಅದೇ ತರಹ ಕಾಲ, ದೇಶ, ನಿಮಿತ್ತ, ಎನ್ನುವ ಪದಗಳೂ ಸಾಂಖ್ಯದ ಉನ್ನತ ಪದಗಳಾಗಿವೆ. Time, space and purpose or cause ಎನ್ನುವ ಅರ್ಥವನ್ನೂ ಈ ಪದಗಳು ನೀಡುತ್ತವೆ.

ಹೋಪಿ ಭಾಷೆಯಲ್ಲಿ ಇಂತಹದೊಂದು ಉನ್ನತಾರ್ಥವಿರುವ ಪದವು, 'ತುನಾತ್ಯ' 'Tunatya', ಎಂಬುದು. ಕ್ರಿಯಾವಾಚಕವಾದ ಈ ಪದವು ಅಭಿಲಾಷೆ ಎನ್ನುವ ಅರ್ಥದೊಂದಿಗೆ, ಯೋಚನೆ, ಆಸೆ, ನಿಮಿತ್ತ ಇವೆಲ್ಲ ಅರ್ಥಗಳನ್ನೂ ಸೂಚಿಸುತ್ತದೆ. Becoming, ಅಥವಾ ಸಾಯುಜ್ಯ ಸಾಧನೆ ಎನ್ನುವ ಅರ್ಥವೂ ಈ ಪದದಲ್ಲಿ ಅಡಗಿದೆ. 'ವೈಯಕ್ತಿಕ' ಎನ್ನುವ ಭಾಗದಲ್ಲಿ ತುನಾತ್ಯ ಎಂಬ ಕ್ರಿಯಾಸೂಚಕ ಪದವು ಬಹು ಗೂಢವಾದುದು. ಶೂನ್ಯ ಸಂಪಾದನೆ ; ದ್ವಂದಾತೀತ ; ನಾನು ಇತರರು ಎನ್ನುವ ಭೇದದ ಅಳಿಯುವಿಕೆ; ಇವೆಲ್ಲದರ ಅರ್ಥವೂ 'ತುನಾತ್ಯ'ದಲ್ಲಿ ಅಡಗಿದೆ. ಹಾಗೂ ಸ್ಪಷ್ಟವಾಗಿದೆ.

ತುನಾತ್ಯದಿಂದಲೇ ಬೀಜವು ಮೊಳಕೆಯನ್ನು ಹೂಡಿ, ಗಿಡವಾಗಿ ಹೆಮ್ಮರ ವಾಗುವುದು. ಮೊಗ್ಗು ಮೂಡಿ, ಅರಳಿ, ಹೂವಾಗಿ, ಕಾಯಾಗಿ, ಹಣ್ಣಾಗಿ ಅಸಂಖ್ಯಾತ ಬೀಜವಾಗುವುದು.

ತುನಾತ್ಯದಿಂದಲೇ ಆಕಾಶದಲ್ಲಿ ಮೋಡಗಳು ಹೆಪ್ಪುಗಟ್ಟಿಕೊಳ್ಳುವುದು. ಕರಗಿ ಹನಿಯಾಗಿ ಮಳೆ ಬೀಳುವುದು.

ತುನಾತ್ಮದಿಂದಲೇ ಸಮಾಜದ ಸುರಕ್ಷಿತ ರಚನೆಯೂ ಸಾಧ್ಯವಾಗಿರುವುದು.
ತುನಾತ್ಮದಿಂದ ವ್ಯವಸಾಯದ ಸಕಲ ಪ್ರಗತಿಯೂ ನಡೆದಿರುವುದು.
ತುನಾತ್ಮದಿಂದ ಕಟ್ಟಡಗಳನ್ನು ಕಟ್ಟುವ ಕುಶಲತೆಯೂ ವೃದ್ಧಿಸುವುದು.
ತುನಾತ್ಮದಿಂದಲೇ ಆಶೆ, ಆಕಾಂಕ್ಷೆ, ಆಲೋಚನೆ, ಮತ್ತು ಆರಾಧನೆಗಳು, ಉಂಟಾಗುವುದು. 'ಕಾಲ' ಎಂಬ ಕಲ್ಪನೆಯೇ ಇಲ್ಲದ ಹೋಪಿ ಸಂಸ್ಕೃತಿಯ 'ತುನಾತ್ಮ' ಕಲ್ಪನೆಯು, ಯಾವ ಇತರ ಜನಾಂಗದ, ಯಾವುದೇ ಕಾಲದ, ಆಧ್ಯಾತ್ಮಿಕ ಅರಿವಿಗಿಂತಲೂ, ಭೌತಾತೀತ ತಿಳಿವಳಿಕೆಗಿಂತಲೂ, ಯಾವ ರೀತಿಯಲ್ಲೂ ಕಡಿಮೆ ಅಥವಾ ಕಳಪೆಯಾದುದಲ್ಲ. ಮೇಲೆ ಹೇಳಿದ ತುನಾತ್ಮದ್ವಿವರಣೆಯಿಂದ, ಇದು ಸ್ವಯಂ ವೇದ್ಯವಾಗಿದೆ.

'ಕಾಲ' ಎಂಬ ಕಲ್ಪನೆಯೂ ಇಲ್ಲದೆ, ಯಾವುದಾದರೂ ಸಂಸ್ಕೃತಿಯು, ಅತ್ಯುನ್ನತ ಅತಿ ಗಂಭೀರ ಎಂದು ನಾವು ಇಂದು ಹೇಳುವ ಯೋಚನೆಗಳನ್ನು ನುಡಿದರೆ, 'ಕಾಲ' ಎನ್ನುವುದು ವಿಚಾರಪರರಿಗೆ ಅಗತ್ಯವೇ ಇಲ್ಲವೇನೋ ಎಂದೆನ್ನಿಸುತ್ತದೆ. ಕಾಲ ಎಂಬುದಕ್ಕೆ ನಿಜವಾದ ಅಸ್ತಿತ್ವವೇ ಇಲ್ಲವೇನೋ ? ಕಾಲವೂ ಮಾಯೆಯ ಒಂದು ಮುಸುಕೇನೋ ?

ಹಾಗೂ ಹೋಪಿ ಸಂಸ್ಕೃತಿಯ 'ತುನಾತ್ಮ'ವನ್ನು Space-Time-primordial cause continuum' ಎಂದೆನ್ನಬಹುದು. ಕಾಲದೇಶ ನಿಮಿತ್ತದ ಒಕ್ಕೂಟ ಎನ್ನಲೂಬಹುದು.

## 6. ಇಮ್ಯಾನ್ಯುಯಲ್ ಕಾಂಟ್ [Immanual Kant]

1724ರಲ್ಲಿ ಪ್ರಷ್ಯಾರಾಜ್ಯದ ಕೋನಿಗ್ಸ್‌ಬರ್ಗ್ ಎಂಬ ಊರಿನಲ್ಲಿ ಕಾಂಟ್ ಜನ್ಮತಾಳಿದ. ಅವನ ತಾಯಿ ಅತ್ಯಂತ ಮಡಿವಂತೆ. ಆಚಾರವಂತ ಕ್ರಿಶ್ಚಿಯನ್ ಆಗಿದ್ದಳು. ತಾಯಿಯ ಈ ನಡವಳಿಕೆಯು ಮಗನ ಮೇಲೆ ಅತ್ಯಂತ ಪ್ರಭಾವವನ್ನು ಮೂಡಿಸಿತು. 1755ರಲ್ಲಿ ಕೋನಿಗ್ಸ್‌ಬರ್ಗ್ ವಿಶ್ವವಿದ್ಯಾನಿಲಯದಲ್ಲಿ ಕೆಳದರ್ಜೆಯ ಅಧ್ಯಾಪಕನಾಗಿ ನೇಮಕಗೊಂಡ. ಹದಿನೈದು ವರ್ಷಗಳಾದ ಮೇಲೆ ಪ್ರಾಧ್ಯಾಪಕನಾಗಿ ಬಡ್ತಿಯನ್ನು ಹೊಂದಿದ. ಹತ್ತಾರು ವರ್ಷಗಳು ಮಾಸ್ತರಾಗಿ ವಿದ್ಯೆ ಕಲಿಸಿದ ನಂತರ ಪಾಠಗಳನ್ನು ಕಲಿಸುವ ವಿಷಯವನ್ನು ಕುರಿತು ಪತ್ರ ಪುಸ್ತಕವೊಂದನ್ನು ಬರೆದ. ಈ ಪುಸ್ತಕದಲ್ಲಿ

ಅತ್ಯಂತ ಉಪಯುಕ್ತವಾದ ವಿಷಯಗಳಿವೆ. ಆದರೆ ಅವು ಯಾವುದನ್ನೂ ನಾನು ಅಭ್ಯಾಸಮಾಡಲಿಲ್ಲ, ಎಂದು ಅವನೇ ಹೇಳುತ್ತಿದ್ದ. ಬರಹಗಾರಿಕೆಗಿಂತ ಮಾಸ್ತರಿಕೆಯಲ್ಲಿ ಅವನಿಗೆ ಹೆಚ್ಚು ಯಶಸ್ಸು ದೊರಕಿತು ಎನ್ನಬಹುದು. ಎರಡು ತಲೆಮಾರಿನ ವಿದ್ಯಾರ್ಥಿಗಳು ಅವನನ್ನು ಆದರದಿಂದ ಗೌರವಿಸುತ್ತಿದ್ದರು. ಅತಿ ಬುದ್ಧಿವಂತ ವಿದ್ಯಾರ್ಥಿಗಳಿಗೆ ಗುರುವಿನ ಅಗತ್ಯವಿಲ್ಲ. ತಾವಾಗಿಯೇ ಕಲಿತುಕೊಳ್ಳುತ್ತಾರೆ: ಅತಿ ದಡ್ಡ ವಿದ್ಯಾರ್ಥಿಗಳಿಗೆ ಕಲಿಸಹೋಗುವುದು ಹೆಡ್ಡತನ, ಅಸಾಧ್ಯವಾದುದು: ಆದಕಾರಣ ಮಧ್ಯಮಬುದ್ಧಿಯ ಹುಡುಗರಿಗೆ ಪಾಠವನ್ನು ಕಲಿಸಬೇಕು ಎಂಬ ನೀತಿಯನ್ನು ಅವ ಅನುಸರಿಸುತ್ತಿದ್ದ.

ಹಲವಾರು ವಿಷಯಗಳ ಮೇಲೆ ಪುಸ್ತಕಗಳನ್ನು ಅವ ಬರೆದ. ತತ್ವಶಾಸ್ತ್ರದ ಪ್ರಬಂಧಗಳನ್ನು ಮುಗಿಸುವ ವೇಳೆಗೆ, ಐವತ್ತೇಳು ವರ್ಷ ವಯಸ್ಸಾಗಿತ್ತು. ಕೃಶಾಂಗನಾಗಿದ್ದ ಐದಡಿ ಎತ್ತರದ ಕುಳ್ಳ, ತಲೆಯಲ್ಲಿ ಅಗಾಧ ಪ್ರತಿಭೆಯನ್ನು ಹೊಂದಿದ್ದ. ಬೆಳಗ್ಗೆ ಏಳುವುದು, ಕಾಫಿ ಕುಡಿಯುವುದು, ಬರೆಯುವುದು, ಪಾಠ ಕಲಿಸುವುದು, ಊಟ ಮಾಡುವುದು, ವ್ಯಾಯಾಮಕ್ಕಾಗಿ ನಡೆಯುವುದು; ಎಲ್ಲವೂ ಕ್ಲಿಪ್ತಕಾಲದಲ್ಲಿ; ಎಂದೂ ವೇಳೆ ತಪ್ಪದೆ. ದೇಹ ಧಾರ್ಢ್ಯವಿಲ್ಲದುದರಿಂದ ಆರೋಗ್ಯದ ವಿಚಾರದಲ್ಲಿ ಅವ ತುಂಬಾ ಎಚ್ಚರದಿಂದಿರುತ್ತಿದ್ದ. ವ್ಯಾಯಾಮಕ್ಕಾಗಿ ನಡೆಯುವಾಗ ಮೂಗಿನಲ್ಲೇ ಉಸಿರಾಡುತ್ತಿದ್ದ. ಕಾರಣ ಮಾತಾಡಲು ಬಾಯನ್ನು ತೆರೆಯದೆ ಮೌನವಾಗಿರುತ್ತಿದ್ದ. ಊಟ ಉಪಚಾರಗಳಲ್ಲಿ ಬಹಳ ಸಂಯಮದಿಂದಿರುತ್ತಿದ್ದ. ವೈದ್ಯರ ಬಳಿಗೆ ಹೋಗಲೇ ಇಲ್ಲ; ಹಾಗಾಗಿ ಎಂಭತ್ತು ವರ್ಷ ಬಾಳಿ ಬದುಕಿದ. ಏನು ಮಾಡಬೇಕಾದರೂ ಆಳವಾಗಿ ಆಲೋಚಿಸಿ, ಆಗು ಹೋಗುಗಳನ್ನು ತೂಗಿ, ನಂತರ ನಿರ್ಧರಿಸುತ್ತಿದ್ದ. ಈ ವಿಳಂಬನಾ ನೀತಿಯಿಂದಲೇ ಅವ ಕಡೆಗೂ ಬ್ರಹ್ಮಚಾರಿಯಾಗಿಯೇ ಉಳಿದಿದ್ದ. ಎರಡು ಬಾರಿ ಮದುವೆಯ ಪ್ರಯತ್ನವನ್ನು ಮಾಡಿದ. ಮೊದಲಾಕೆಯು ಕಾದು ಕಾದು ಸಾಕಾಗಿ, ಇನ್ನೊಬ್ಬ ಧೈರ್ಯಶಾಲಿಯನ್ನು ಮದುವೆಯಾದಳು. ಇನ್ನೊಬ್ಬಾಕೆ, ಇವ ನಿರ್ಧರಿಸುವ ಮೊದಲೇ ಬೇರೆ ಊರಿಗೆ ಹೋದಳು.

ಈ ರೀತಿ ಅತಿ ನಿಧಾನವಾಗಿ ಪರಿಪಕ್ವಗೊಂಡ ಇಮ್ಯಾನುಯಲ್ ಕಾಂಟ್, ತತ್ವಶಾಸ್ತ್ರದ ಪುಸ್ತಕದಿಂದ ತಾತ್ವಿಕ ಪ್ರಪಂಚವನ್ನೇ ಬುಡಮೇಲು ಮಾಡಿದ. ಜಗತ್ ಪ್ರಸಿದ್ಧನಾದ.

'ಕಾಲ'ದ ವಿಚಾರದಲ್ಲಿ ಏನೇನು ಅಂದಿದ್ದಾನೆ?

ಅವನ ಆಲೋಚನಾ ಸರಣಿ, ಹಾಗೂ ವಿಚಾರಪರ ವಿಶ್ಲೇಷಣೆ ಹೀಗಿದೆ:

ಪಂಚೇಂದ್ರಿಯಗಳಿಂದ ನಮ್ಮ ದೇಹವು ಸಹಸ್ರಾರು ವಿಷಯಗಳನ್ನು ಸಂಗ್ರಹಿಸುತ್ತವೆ. ಅವುಗಳಲ್ಲಿ ಕೆಲವು ಮಾತ್ರ ನಮ್ಮ ಮನಸ್ಸಿನ ಗಮನಕ್ಕೆ ಬರುತ್ತವೆ. ರಸ್ತೆಯಲ್ಲಿ ಹೋಗುವಾಗ ಹಲವಾರು ವಾಸನೆಗಳು ನಮ್ಮ ಮೂಗಿಗೆ ಬಡಿಯುತ್ತವೆ. ಹಲವಾರು ಬಣ್ಣಗಳು ಕಣ್ಣಿಗೆ ಸಾಗುತ್ತವೆ. ಹಲವಾರು ಶಬ್ದಗಳು ನಮ್ಮ ಕಿವಿಗಳಿಗೆ ಬಡಿಯುತ್ತವೆ. ಆದರೆ ಇವುಗಳಲ್ಲಿ ಕೆಲವೇ ನಮ್ಮ ಮನಸ್ಸಿನ ಗಮನಕ್ಕೆ ಬರುತ್ತವೆ. ಲಾವೆಂಡರ್ ವಾಸನೆಯ ಅಂಶ, ಕಣ್ಣಿಗೆ ಕಂಡ ಬಣ್ಣದ ಲುಂಗಿಯ ರಂಗು, ಕಿವಿಗೆ ಕೇಳಿಸಿದ ಬಳೆಗಳ ನಿನಾದ, ಇವು ಮಾತ್ರ ಮನಸ್ಸಿನ ಗಮನಕ್ಕೆ ಏರುತ್ತವೆ. ಮನಸ್ಸಿನ ಒಂದು ಭಾಗವು, ಇಂದ್ರಿಯಗಳಿಂದ ಗ್ರಹಿಸಿದ ರಿವುಗಳನ್ನು, ಕ್ರೋಢೀಕರಿಸುತ್ತದೆ. ಇವೆಲ್ಲದರ ಮೂಲವು, ಕಾಲೇಜ್ ವಿದ್ಯಾರ್ಥಿನಿಯಾದ ನವ ತರುಣಿಯಂದು ಎಂದು ನಿರ್ಧರಿಸುತ್ತದೆ. ಹೀಗೆ ನಿರ್ಧರಿಸುವಾಗ ಹಿಂದಿನ ಅರಿವಿನ ಸ್ಮರಣೆಗಳೂ ನೆರವಾಗುತ್ತವೆ. ಇಷ್ಟೇ ಅಲ್ಲ.

ಇಂತಹ ಅಂತಿಮ ನಿರ್ಧಾರಕ್ಕೆ ಬರುವುದಕ್ಕೆ, ಇವೆಲ್ಲಕ್ಕೂ ಆದಿಯಾಗಿರುವ ಕಾಲ, ದೇಶ ಮತ್ತು ನಿಮಿತ್ತ, ಇವುಗಳ ಬೆಂಬಲ ಅಥವಾ ಅನ್ವಯವು ಇರಬೇಕು. Space and Time, ದೇಶ ಮತ್ತು ಕಾಲ ಇವೆರಡೂ 'a priori' 'ಕಾರಣ-ಕಾರ್ಯ' ಸಂಬಂಧವನ್ನು ಹೊಂದಿರುತ್ತದೆ. ಅವುಗಳ ಹಿನ್ನೆಲೆಯಲ್ಲಿ, ಇಂದ್ರಿಯಗಳಿಂದ ಗ್ರಹಿಸಿದುದನ್ನು ರೂಪುಗೊಳಿಸುವುದು, ಮನಸ್ಸಿನ ಮುಖ್ಯ ಕೆಲಸ.

'The mind allocates its sensations in Space and Time, attributes them to this object here or that object there, to this present time, or to that past. Space and Time are not things perceived, but modes of Perception: ways of putting

Sense in to Sensation : Space and Time are organs of Perception.'

[Story of Philosophy. Will Durant]

ಕಾಲ ಮತ್ತು ದೇಶಗಳು 'a priori' ಮೂಲ ಕಾರಣಗಳು. ಬಹಳಷ್ಟು ನಮ್ಮ ಅನುಭವಗಳು ಅವುಗಳನ್ನು ಒಳಗೊಂಡಿರುತ್ತವೆ ; ಅವುಗಳನ್ನು ಒಪ್ಪಿಕೊಂಡಿರುತ್ತವೆ. ಇಂದ್ರಿಯಗಳಿಂದ ಗ್ರಹಿಸಿದ ಅನುಭವಗಳನ್ನು ಮನಸ್ಸು ಎರಡು ತೆರನಾಗಿ ವಿಶ್ಲೇಷಿಸಿ, ಯೋಚನೆ ಅಥವಾ Thought ಅನ್ನು ರೂಪಿಸುತ್ತದೆ. ಒಂದು, Space ಅಥವಾ ದೇಶದ ದೃಷ್ಟಿಯಿಂದ ಗಮನಿಸುವುದು, ಎರಡು, ಕಾಲದ ದೃಷ್ಟಿಯಿಂದ ನೋಡುವುದು. ಇದಾದ ಮೇಲೆ Concept ಸಾಂಕೇತಿಕವಾದ ರೂಪನ್ನು ಯೋಚನೆಯು ತಾಳುತ್ತದೆ. ಅಂದರೆ ಕಾಲ ಮತ್ತು ದೇಶಗಳು ಮೂಲ ಕಾರಣಗಳಾದರೂ, ನಮ್ಮ ಮನಸ್ಸಿನ ಕಾರ್ಯಕ್ಕೆ ಅಳವಡಿಸಲ್ಪಟ್ಟಾಗ, ಅಸ್ತಿತ್ವಕ್ಕೆ ಬರುತ್ತವೆ.

ಆದುದರಿಂದಲೇ 'ಕಾಲ' ಅಥವಾ 'ದೇಶ' ಎನ್ನುವವುಗಳನ್ನು, ಅಸ್ತಿತ್ವಕ್ಕೆ ಬರುವ ಮೊದಲು ಏನಾಗಿದ್ದುವು ಎಂದು ಕೇಳುವುದು ಜಾಣತನವಲ್ಲ. ಏಕೆಂದರೆ ಅಸ್ತಿತ್ವಕ್ಕೆ ಬಾರದೇ ಇರುವಾಗ ನಮ್ಮ ಮನಸ್ಸಿಗೂ ಅತೀತವಾಗಿರುತ್ತದೆ. ಯೋಚನೆಯು ಕ್ಷಿತಿಜದಾಚೆ ಇರುತ್ತದೆ.

Space, Time and Cause are modes of perception and conception, which must enter in to all our experience, since they are the Web and Structure of experience : these dilemmas (like when did Time start, or Space begin) arise from supposing that Space, Time and Cause are external things independent of perception. We shall never have any experience which we shall not interpret in terms of Space and Time and Cause ; but we shall never have any philosophy if we forget that these are not things ; but modes of interpretation and understanding.

ಸಾಂಖ್ಯಕಾರರು ಹೇಳಿದ, ದೇಶಾವಚ್ಛಿನ್ನ, ಕಾಲಾವಚ್ಛಿನ್ನ ಮತ್ತು ನಿಮಿತ್ತಾವಚ್ಛಿನ್ನ ಎನ್ನುವ ಮಾತಂಗಳನ್ನೇ ಇಮಾನ್ಯುಯಲ್ ಕಾಂಟ್ ಆನೂ ನುಡಿದಿದ್ದಾನಲ್ಲವೇ ?

## 7. ಹೆನ್ರಿ ಬರ್ಗ್‌ಸನ್ Henry Bergson

1859 ರಲ್ಲಿ ಪ್ಯಾರಿಸ್ ನಗರದಲ್ಲಿ ಹೆನ್ರಿ ಬರ್ಗ್‌ಸನ್ ಜನ್ಮ ತಾಳಿದನು. ಅತಿಜಾಣ ವಿದ್ಯಾರ್ಥಿಯಾಗಿದ್ದ ಅವ, ಪರೀಕ್ಷೆಗಳಲ್ಲಿ ಪ್ರಥಮ ಪಾರಿತೋಷಕ ಗಳನ್ನೆಲ್ಲಾ ಅನಾಯಾಸದಿಂದ ಪಡೆಯುತ್ತಿದ್ದ. ಗಣಿತಶಾಸ್ತ್ರವನ್ನು ಅವ ಮೊದಲು ಅಭ್ಯಾಸ ಮಾಡಿದ. ಅನಂತರ ಭೌತಶಾಸ್ತ್ರದಲ್ಲಿ ಪ್ರೌಢವಿದ್ಯಾಭ್ಯಾಸ ವನ್ನು ಮಾಡಿದ. ಕುಶಾಗ್ರಮತಿ ಇದ್ದವರಿಗೆ ಬಿಡಿಸಿ ಬಿಡಿಸಿ ವಿಶ್ಲೇಷಣೆ ಮಾಡುವುದು ಅನಿವಾರ್ಯವಾಗುತ್ತದೆ. ಇದೇ ತತ್ವಶಾಸ್ತ್ರದ ಆಧಾರ. ಹೀಗಾಗಿ ಬರ್ಗ್‌ಸನ್ ತಾತ್ವಿಕ ಪ್ರವೃತ್ತಿಯನ್ನು ಸಹಜವಾಗಿ ಅಭಿವೃದ್ಧಿಸಿ ಕೊಂಡ. ವಾಸ್ತವಿಕ ಪ್ರಪಂಚವನ್ನು ವಿಜ್ಞಾನವು ಅರಿತುಕೊಳ್ಳುವಾಗ, Space- ದೇಶದ ಚೌಕಟ್ಟಿನಲ್ಲಿ ಕಂಡುದೆಲ್ಲವನ್ನೂ ಕಟ್ಟಿಹಾಕುತ್ತದೆ. ಆದ್ದರಿಂದ ನೈಜವಾದ ಆದಿಮೂಲವಾದ ಪರಿಸ್ಥಿತಿಯ ಅರಿವು ಉಂಟಾಗು ವುದಿಲ್ಲ, ಎಂದವನಿಗೆ ಅನಿಸಿತು. ಬದುಕಿನಲ್ಲಿ ಕ್ಷಣ ಕ್ಷಣಕ್ಕೂ ಪರಿವರ್ತನೆ ಯಾಗುತ್ತಿರುತ್ತದೆ. ವ್ಯತ್ಯಾಸವು ತೋರಬರುತ್ತದೆ. ಆದ್ದರಿಂದ ಕ್ಷಣ ಕ್ಷಣದ ಅಂತರವಾದ 'ಕಾಲ' ವು ದೇಶಕ್ಕಿಂತ ಅಮೂಲ್ಯವಾದುದು. ವಿಜ್ಞಾನಿ ಗಳು 'ಕಾಲ' ದ ದೃಷ್ಟಿಯಿಂದ, ಪರಿವರ್ತನೆಯ ಅಧ್ಯಯನದಿಂದ ಅಭ್ಯಾಸ ಮಾಡಿಲ್ಲ. ಆದುದರಿಂದ ವಿಜ್ಞಾನವು ಇನ್ನೂ ಪೂರ್ಣ ಜ್ಞಾನವನ್ನು ಪಡೆದಿಲ್ಲ. ಇದೇ ರೀತಿಯಲ್ಲಿ ಮುಂದುವರೆದರೆ ಪೂರ್ಣ ಅರಿವನ್ನು ಪಡೆಯು ವುದು ಸಾಧ್ಯವಾಗುವುದಿಲ್ಲ, ಎಂದು ಅವ ಯೋಚಿಸಿದ.

ಈ ರೀತಿ ಕಾಲವನ್ನು ಸಿಂಹಾಸನದ ಮೇಲೆ ಕೂರಿಸಿದ ಬರ್ಗ್‌ಸನ್ 'ಕಾಲ' ದ ವಿಷಯದಲ್ಲಿ ಏನಂದಿದ್ದಾನೆ ? ಅವನ ವಿಚಾರಸರಣಿ ಎಂತದು ?

ವಾಸ್ತವಿಕ ಪ್ರಪಂಚದ ಅರಿವನ್ನು ನಮ್ಮ ಮನಸ್ಸು ಕ್ಷಣ ಕ್ಷಣವೂ ಪಡೆಯುತ್ತದೆ. ಚಲನಚಿತ್ರದಲ್ಲಿ ನೂರಾರು ಸ್ಥಿರ ಚಿತ್ರಗಳಿರುತ್ತವೆ. ಒಂದೊಂದು ಚಿತ್ರವೂ ಆ ಕ್ಷಣದಲ್ಲಿ ಸೆರೆಹಿಡಿಯಲ್ಪಟ್ಟ ಸ್ಥಿರವಾದ ಚಿತ್ರ. ಆದರೆ

ತಾಂತ್ರಿಕ ಸಾಧನೆಗಳಿಂದ, ವೇಗವಾಗಿ ಅವನ್ನು ಹರಿಸಿದರೆ, ಸ್ಥಿರವಾಗಿದ್ದ ಆ ಚಿತ್ರಗಳು ಚಲಿಸುತ್ತಿರುವಂತೆ ಭಾಸವಾಗುತ್ತದೆ. ಚಲನಚಿತ್ರ ಎನ್ನುವ ಪದವೇ ಈ ಅರ್ಥವನ್ನು ಸ್ಪಷ್ಟಪಡಿಸುತ್ತದೆ. ನಮ್ಮ ಮನಸ್ಸು, ವೇಗವಾಗಿ ಚಲಿಸುವ ಸ್ಥಿರ ಚಿತ್ರಗಳನ್ನು ಗ್ರಹಿಸುವಾಗ, ಅವುಗಳ ಸ್ಥಿರತೆಯು ಮಾಯವಾಗಿ ಚಲಿಸುತ್ತಿರುವಂತೆ ಅನ್ನಿಸುವುದು, ಚಲಿಸುವ ಹದವಾದ ವೇಗದಿಂದ.

ಈ ಉದಾಹರಣೆಯಿಂದ ವಾಸ್ತವಿಕ ಪ್ರಪಂಚದ ನಮ್ಮ ಅನುಭವಗಳನ್ನು ತಿಳಿಯಬಹುದು. ಬಿಲ್ಲಿನಿಂದ ಬೀರಲ್ಪಟ್ಟ ಬಾಣವು ಶರವೇಗದಿಂದ ಹೋಗು ವುದನ್ನು ಕಾಣುತ್ತೇವೆ. ಅಷ್ಟು ವೇಗದಿಂದ ಹೋಗುತ್ತಿದ್ದರೂ, ಒಂದು ಕ್ಷಣದ ಕ್ಷಣದಲ್ಲಿ ಅದು ಒಂದು ಸ್ಥಳದಲ್ಲಿ ಸ್ಥಿರವಾಗಿಯೇ ಇರಬೇಕು. ಸ್ಥಿರವಾಗಿ ಕ್ಷಣಾಂಶ ಗಳಿಲ್ಲಿದ್ದೂ, ಚಲನವನ್ನು ಕಾಣಿಸುವುದು ಸಮಸ್ಯೆಯಲ್ಲವೇ? ಇದನ್ನು Zeno's Paradox ಎಂದು ಕರೆಯುತ್ತಾರೆ, ಸಮಸ್ಯೆಯನ್ನು ಮೊದಲು ಸೂಚಿಸಿದ Zeno ಎಂಬ ತಾತ್ವಿಕನ ಹೆಸರಿನಿಂದ. ಕ್ಷಣಾಂಶದಲ್ಲಿ ಸ್ಥಿರವಾಗಿದೆ ಎನ್ನುವುದು. Space ಅಥವಾ ದೇಶದ ಧೃಷ್ಟಿಯಿಂದ ಆ ಸ್ಥಳದಲ್ಲಿ ಸ್ಥಿರ ಎಂಬ ಎಣಿಕೆಯಿಂದ. ಆದರೆ ಕಾಲದ ಅಥವಾ ಚಲನದ ದೃಷ್ಟಿಯಿಂದ ನೋಡಿದರೆ, ಚಲನವು ನಡೆಯುತ್ತಲೇ ಇದೆ. Space ಇನ ಚೌಕಟ್ಟಿನಲ್ಲಿ ಅಳವಡಿಸಿದರೆ, ಸ್ಥಿರತೆ, ಆದರೆ ಕಾಲದ ಗತಿಯಲ್ಲಿ, ಚಲನದಲ್ಲಿ, ಅರಿಯು ತೊಡಗಿದರೆ, ಕ್ಷಣಾಂಶಗಳಲ್ಲಿಯೂ ಬಾಣವು ಪರಿವರ್ತನೆಯನ್ನು ಹೊಂದುತ್ತಿ ರುತ್ತದೆ. ಹತ್ತು ಅಡಿಗಳ ದೂರದಲ್ಲಿ ಅದು ತಾಕಿದರೆ ಪೆಟ್ಟು ಹೆಚ್ಚಾಗುತ್ತದೆ. ನೂರು ಅಡಿಗಳ ದೂರದಲ್ಲಿ ಪೆಟ್ಟು ಅಷ್ಟು ಹೆಚ್ಚಾಗಿರುವುದಿಲ್ಲ, ಸಾಮಾನ್ಯ ಮನುಷ್ಯನಿಗೂ ಇದು ಸ್ಪಷ್ಟವಾಗಿರುವ ವಿಷಯ.

ಬಾಣದ ವಿಷಯವು ಹೀಗಾದರೆ, ಮನುಷ್ಯನ ಅನುಭವವು ಇನ್ನೂ ಹಿರಿದಾದುದು. ಜನ್ಮ ಜನ್ಮಾಂತರಗಳ, ಅಮೀಬಾ ಸ್ಥಿತಿಯಿಂದ ಮಾನವನ ಹಂತಕ್ಕೆ ಏರುವಾಗ, ಪಡೆದ ಎಲ್ಲಾ ಅನುಭವಗಳೂ ಮನಸ್ಸಿನಲ್ಲಿ ಸಾಂಕೇತಿಕ ವಾಗಿ ಹುದುಗಿರುತ್ತದೆ. ಅವು ಯಾವುದೂ ನಾಶವಾಗಿರುವುದಿಲ್ಲ. ಅವೆಲ್ಲವೂ ಒಟ್ಟುಗೂಡಿಕೊಂಡು Instinct ಸಹಜ ಸ್ವಭಾವ, ಅಜನ್ಮಸ್ಫೂರ್ತಿ, ಯಾಗಿ ಉಳಿದಿರುತ್ತದೆ. ಅಂದರೆ ಭೂತಕಾಲ, ಆಗಿಹೋಯಿತು. ಎನ್ನುವುದು

ಇಲ್ಲವೇ ಇಲ್ಲ. ಭೂತಕಾಲವು ನಿರಂತರವಾಗಿ ಮುಂದುವರಿಯುತ್ತ ವರ್ತಮಾನ ಕಾಲವನ್ನು ತುಸು ತುಸು ಭಕ್ಷಿಸುತ್ತಾ ಭವಿಷ್ಯತ್ತಿನತ್ತ ಸಾಗುತ್ತದೆ. ಹಾಗೆ ಸಾಗುತ್ತಾ ಅದು ಅಭಿವೃದ್ಧಿಸುತ್ತಲೇ ಇರುತ್ತದೆ. ಅಂದರೆ ಭೂತಕಾಲವು ಅಳಿಯುವುದಿಲ್ಲ. ಅದು ಜೀವಂತವಾಗಿ ಇದ್ದು ವರ್ತಮಾನಕ್ಕೆ ಚಾಚಿ ಕೊಂಡಿರುತ್ತದೆ. ಮತ್ತು ಅಲ್ಲಿ ನಿಜವಾಗಿ ಇದ್ದು ಕಾರ್ಯವನ್ನು ಮಾಡುತ್ತದೆ, ಎಂದಂತಾಯಿತು. ನಮ್ಮ ಆಸೆ ಆಕಾಂಕ್ಷೆಗಳು, ಸಂಕಲ್ಪ ಮತ್ತು ಕಾರ್ಯಗಳು, ಇವೆಲ್ಲವೂ ಭೂತಕಾಲದ, ಅಸ್ತಿತ್ವದಲ್ಲಿರುವ ಭೂತಕಾಲದ ಅನುಭವಗಳೆಲ್ಲದುದರಿಂದಲೇನೇ. ಕಾಲ ಎನ್ನುವುದು ಒಂದು ರೀತಿಯಲ್ಲಿ ಶೇಖರಣೆ.

'Duration is the continuous progress of the past which grows into the future and which swells as it advances'

ನಮ್ಮ ಸ್ಮರಣೆಯು 'ಇರುವಿಕೆ'ಗೆ [Duration] ವಾಹಕವಾಗಿದೆ. ಸ್ಮರಣೆಯು ಕಾಲದ ಸ್ವಯಂಸೇವಕ. ನೆನಪಿನಿಂದ ಹಿಂದಾದಂದರ ಸಮೃದ್ಧಿಯಾದ ಅನುಭವವೆಲ್ಲವೂ ಅಸ್ತಿತ್ವದಲ್ಲಿದ್ದು ವರ್ತಮಾನಕಾಲದ ಪ್ರತಿಯೊಂದು ಕ್ಷಣದಲ್ಲೂ, ಹಾಗೂ ಕಾರ್ಯದಲ್ಲೂ, ಹಲವಾರು ನವೀನ ಮಾರ್ಗಗಳನ್ನು ಕಾಣಿಸುತ್ತದೆ. ನಮ್ಮ ಅರಿವು ಬೃಹತ್ ಪ್ರಮಾಣವನ್ನು ಹೊಂದುತ್ತದೆ. 'Consciousness seems proportionate to the living beings power of choice. It lights up the zone of potentialities that surrounds the act. It fills the interval between what is done and what might be done' ಎನ್ನುತ್ತಾನೆ ಬರ್ಗ್‌ಸನ್.

ಈ ದೃಷ್ಟಿಯಿಂದ ನೋಡಿದರೆ ಮನುಷ್ಯನು, ಪರಿಸರಕ್ಕೆ ತೆಪ್ಪಗೆ ಅನ್ವಯಿಸಿಕೊಳ್ಳುವ ಯಂತ್ರ ಮಾತ್ರವಲ್ಲ. ಕಾಲಗತಿಯನ್ನು ಬದಲಾಯಿಸ ಬಲ್ಲ ಶಕ್ತಿ; ಪ್ರಗತಿಯಲ್ಲಿ ಸೃಷ್ಟಿಮಾರ್ಗವನ್ನು ನವ್ಯವಾಗಿ ಹೊಡಬಲ್ಲ ಶಕ್ತಿ ಕೇಂದ್ರ; ಎನ್ನಬೇಕು.

'Man is no passively adaptive machine, he is a focus of redirected force, a centre of creative Evolution'

Duration ಅಥವಾ 'ಇರುವಿಕೆ' ಅಥವಾ 'ಕಾಲಾವಧಿ' ಇದು ಕಾಲದ ಚಲನದ ತಿರುಳು. ಭೂತಕಾಲ ಮತ್ತು ವರ್ತಮಾನದ ಅಂಚು ಬೆಸೆದುಗೊಂಡು,

ಅವಧಿಯಾಗಿ ಅಸ್ತಿತ್ವದಲ್ಲಿದೆ. Space, ದೇಶದ ಚೌಕಟ್ಟಿನಲ್ಲಿ ಮನಸ್ಸು ಗಮನಿಸುವುದನ್ನು ಅಭ್ಯಾಸಮಾಡಿಕೊಂಡಿದೆ. ಇದು ಸರಿಯಲ್ಲ. ಕಾಲವು ದೇಶಕ್ಕಿಂತ ಬದುಕಿಗೆ ಮುಖ್ಯವಾದುದು. ಕಾಲದಿಂದಲೇ Creative Evolution, ಸ್ವಯಂಸ್ಫೂರ್ತಿಯುತ, ಹಾಗೂ ಸೃಷ್ಟಿಸುವ, ಪ್ರಗತಿಯು ಆಗುತ್ತದೆ.

'We tend to think in terms of space. We are geometricians all. But time is as fundamental as space : and it is time, no doubt that holds the essence of life, and perhaps of all Reality'. ಎಂದನ್ನುತ್ತಾನೆ ಬರ್ಗ್‌ಸನ್.

ವಿಶಾಲಬುದ್ಧಿಯ ವ್ಯಾಸಮಹರ್ಷಿಯು, ಶ್ರೀ ಕೃಷ್ಣನಿಂದ 'ಕಾಲೋಸ್ಮಿ' ಎಂದು ಹೇಳಿಸಿರುವುದನ್ನೇ, ಬರ್ಗ್‌ಸನ್ ತನ್ನ ಸಿದ್ಧಾಂತದಲ್ಲಿ ನಿರ್ಧರಿಸಿದ್ದಾನೆ. ಅಂದ ಮಾತ್ರಕ್ಕೆ ಅವನ ಸಿದ್ಧಾಂತದಲ್ಲಿ ಲೋಪ ದೋಷಗಳಿಲ್ಲ ಎಂದಲ್ಲ. ಆದರೆ ಅವುಗಳ ವಿಶ್ಲೇಷಣೆ ಇಲ್ಲಿ ಅಪ್ರಕೃತ.

## ೮. ಆಲ್‌ಫ್ರೆಡ್ ನಾರ್ತ್‌ವೈಟ್‌ಹೆಡ್. Alfred North Whitehead. 1861-1948

ಗಣಿತ ಶಾಸ್ತ್ರದಲ್ಲಿ ಪ್ರೌಢ ಪಾಂಡಿತ್ಯವನ್ನು ಪಡೆದಿದ್ದ, ವೈಟ್‌ಹೆಡ್. ಭೌತಶಾಸ್ತ್ರದಲ್ಲಿ ಅಗಾಧ ಜ್ಞಾನವನ್ನು ಗಳಿಸಿಕೊಂಡಿದ್ದ. ತತ್ವಶಾಸ್ತ್ರದಲ್ಲಿ ಅವನಿಗೆ ಅಪಾರ ಒಲವು, ಮತ್ತು ಆಸಕ್ತಿ. ಅತ್ಯಂತ ಮೇಧಾವಿಯಾದ ಪ್ರಚಂಡನೊಬ್ಬನಿಗೆ ಮೂರೂ ವಿಷಯಗಳಲ್ಲಿ ಪಾಂಡಿತ್ಯವಿದ್ದಾಗ, ಆತನು ಹೇಳುವ ಮಾತುಗಳಿಗೆ ಅತ್ಯಂತ ಬೆಲೆ ಇರುತ್ತದೆ. ಅಂತಹವನ ನುಡಿಗಳನ್ನು ಅಭ್ಯಸಿಸುವವರೆಲ್ಲರೂ ಗಮನಿಸಬೇಕು.

ಕಾಲದ ವಿಚಾರದಲ್ಲಿ ವೈಟ್‌ಹೆಡ್ ಹೀಗನ್ನುತ್ತಾನೆ. ಅವನ ವಿಚಾರ ಸರಣಿ ಈ ರೀತಿ–

ಪ್ರಕೃತಿಯಲ್ಲಿ ಅಣಿಯಾದ ವ್ಯವಸ್ಥೆಯು ಕಾಣಿಸದೆ ಇದ್ದಿದ್ದರೆ. ವಿಜ್ಞಾನವು ಹುಟ್ಟುತ್ತಿರಲಿಲ್ಲ. ವಿಜ್ಞಾನವನ್ನು ಮೊದಲು ಅಭ್ಯಸಿಸಿದ ಗ್ರೀಕರು, ವಿಧಿಯು ಪ್ರಕೃತಿಯಲ್ಲಿ ಸುವ್ಯವಸ್ಥೆಯನ್ನು ಏರ್ಪಡಿಸಿದೆ ಎಂದು

ನಂಬಿದ್ದರು. ಆ ಅವಸ್ಥೆಯನ್ನು ಅರಿಯಲೋಸಂಗ ಪ್ರಯತ್ನಿಸಿದರು. ಅಂತಹ ಪ್ರಯತ್ನವೇ ವಿಜ್ಞಾನದ ತಳಹದಿಯಾಯಿತು.

ಪ್ರಕೃತಿಯಲ್ಲಿರುವ ಬ್ರಹ್ಮಾಂಡದ ವ್ಯವಸ್ಥೆಯನ್ನು ನ್ಯೂಟನ್ ಒಂದು ರೀತಿಯಲ್ಲಿ ವಿವರಿಸಿದ. Space ದೇಶ ಮತ್ತು ಕಾಲ. ಇವುಗಳ ಸ್ವರೂಪವನ್ನು ವಿವರಿಸಿ, ಇದೇ ಬ್ರಹ್ಮಾಂಡದ ಆದಿಮೂಲ ಎಂದು ನಂಬಿದ್ದ.

ಆನಂತರ ಪ್ರಪಂಚದಲ್ಲಿನ ಮಾನವ ಜ್ಞಾನಭಂಡಾರವು ಹೆಚ್ಚಿತು. ದೇಶ ಮತ್ತು ಕಾಲ ಎಂಬ ಪ್ರತ್ಯೇಕವಾದವುಗಳಿಗೆ ಅಸ್ತಿತ್ವವೇ ಇಲ್ಲ. ಇವೆರಡೂ ಬೆಸೆದುಕೊಂಡು, ಹಾಸು ಹೊಕ್ಕಾಗಿರುವುದೇ, ಬ್ರಹ್ಮಾಂಡದ ಆಧಾರ, ಎಂಬುದು ಐನ್‌ಸ್ಟೈನಿನಾನಂತರ ನಂಬಲ್ಪಟ್ಟಿತು.

ಭೌತಶಾಸ್ತ್ರದ, ಎಣಿಕೆಗೆ ಸಿಗುವ ಕಾಲವು ; ಪ್ರಕೃತಿಯ ಮುನ್ನಡೆಯುವ ಕಾಲಾವಧಿ (Duration) ಯು, ಬೇರೆ ಬೇರೆ ಸ್ವರೂಪವನ್ನು ಹೊಂದಿವೆ.

ಬ್ರಹ್ಮಾಂಡವು ಅತ್ಯಂತ ನಿಧಾನವಾದ ಗತಿಯಲ್ಲಿ ಸಾಗುತ್ತಿದೆ. ಎಷ್ಟು ನಿಧಾನವಾಗಿ ಅಂದರೆ. ಅದನ್ನು ಭೌತಶಾಸ್ತ್ರದ ಕಾಲ ಪ್ರಮಾಣದಿಂದ ಅಳೆಯುವುದು ಅಸಾಧ್ಯ. ತುಲಾಭಾರವನ್ನು ತೂಗುವ ದೊಡ್ಡ ತಕ್ಕಡಿಯಲ್ಲಿ, ವಜ್ರದ ಹರಳನ್ನು ತೂಕಮಾಡುವುದು ಹೇಗೆ ಅಸಾಧ್ಯವೋ, ಹಾಗೆಯೇ ಭೌತಶಾಸ್ತ್ರದ ಕಾಲದ ನೆರವಿನಿಂದ, ಬ್ರಹ್ಮಾಂಡದ ಅಥವಾ ಪ್ರಕೃತಿಯ ಮುನ್ನಡೆಯನ್ನು ಅಳೆಯುವುದು ಅಸಾಧ್ಯ. ಬ್ರಹ್ಮಾಂಡದ ಮುನ್ನಡೆಯು ಅಗಾಧವಾದ ಬೃಹತ್ಸಾಗರದಂತಿದೆ. ಮಾನವನ ಅರಿವಿಗೆ ನಿಲುಕುವ ವರ್ತಮಾನ ಕಾಲವು, ಪ್ರಕೃತಿಯ ಆ ಮಹಾಸಾಗರದಲ್ಲಿ ಕೇಳ ಹೆಸರಿಲ್ಲದ; ಇದೆಯೋ ಇಲ್ಲವೋ ಎನ್ನುವಂತಹ ಬಲು ಪುಟಾಣಿಯಾದ ಅಲೆಯಿದ್ದಂತೆ. ಕಾಲ ಮತ್ತು ದೇಶಗಳು ಹೊಸ ಹೊಸ ಗುಣಗಳನ್ನು ಪಡೆದುಕೊಂಡು ಅಭಿವೃದ್ಧಿಯಾಗುವುದು, ಬ್ರಹ್ಮಾಂಡದ ನಿಧಾನವಾದ ಪ್ರಗತಿಯ ಲಕ್ಷಣ. ಹೀಗನ್ನುವಾಗ ವೈಟ್‌ಹೆಡ್ಡಿನ ಗಮನದಲ್ಲಿದ್ದುದು, ನ್ಯೂಟನ್ನಿನ ಕಾಲದ ಕಲ್ಪನೆ ಎಂದೆನ್ನಬೇಕು.

ಪ್ರಕೃತಿಯ ಕಾಲಾವಧಿಗಳು[Duration] ನಿಧಾನವಾದರೂ, ನಿರಂತರವಾದ ಹರಿಯುವಿಕೆಯೇ ಬ್ರಹ್ಮಾಂಡದ ಕಾಲ. ಪ್ರಕೃತಿಯ ಎಲ್ಲ ಕಡೆಗಳಲ್ಲಿಯೂ

ಒಂದೇ ಸಮಯದಲ್ಲಿ ನಡೆಯುವ ಘಟನೆಗಳ ಕಾಲಾವಧಿಯು, ಬ್ರಹ್ಮಾಂಡದ ಕಾಲದ ಒಂದು ತೆಳುವಾದ ಪದರ. ಕಾಲಾವಧಿಯನ್ನು 'ಅನುಭವಿ'ಸುತ್ತೇವೆ. ಭೌತಶಾಸ್ತ್ರದ ಕಾಲವನ್ನು 'ಕಲ್ಪಿಸಿ'ಕೊಳ್ಳುತ್ತೇವೆಯೇ ಹೊರತು ಅನುಭವಿಸುವುದಿಲ್ಲ. ಈ ರೀತಿ ವೈಟ್‌ಹೆಡ್ ತರ್ಕಿಸುತ್ತಾನೆ.

ಅಕ್ಕನ ಮಗಳು ಎಂದರೇನು, ಸೋದರಸೊಸೆ ಎಂದರೇನು. ಎನ್ನುವಂತಿದೆ, ಈ ತಾತ್ವಿಕರ ವಿವಿಧ ತರ್ಕಸರಣಿಗಳ ತಿರುಳು !!

# ಅಧ್ಯಾಯ-೫

## ಭಾರತೀಯ ತಾತ್ವಿಕರು ಮತ್ತು ಅನುಭಾವಿಗಳ ದೃಷ್ಟಿಯಲ್ಲಿ ಕಾಲ

ಇಂದು ನಾವು ವೈಜ್ಞಾನಿಕ ಎನ್ನುವ ರೀತಿಯಲ್ಲಿ 'ಕಾಲ'ವನ್ನು ನಮ್ಮ ಪೂರ್ವೀಕರು ಅಭ್ಯಾಸ ಮಾಡಿದ್ದರು ಎನ್ನುವುದಕ್ಕೆ ಯಾವ ಸಾಕ್ಷ್ಯವೂ ಇಲ್ಲ. ಆದರೆ ತಾತ್ವಿಕ ದೃಷ್ಟಿಯಿಂದ ಕಾಲವನ್ನು ಗಮನಿಸಿದ್ದರು. ಹಾಗೂ ಭೌತ ಕಾಲದ ಅರಿವನ್ನು ಅತಿಶಯವಾಗಿ ಪಡೆದಿದ್ದರು. ಮತ್ತು ದಿನ ದಿನದ ಕೆಲಸ ಗಳಿಗೆ ಬಳಸಿಕೊಳ್ಳುತ್ತಿದ್ದರು. ಸ್ಥೂಲವಾಗಿ ಈ ಎರಡೂ ತೆರನ ಕಾಲದ ವಿವರಣೆಯನ್ನು ಅಭ್ಯಾಸ ಮಾಡುವ.

1. ಅಥರ್ವ ವೇದದಲ್ಲಿ 'ಕಾಲ'ವು ಒಂದು ಆದಿಮೂಲವಾದ ಶಕ್ತಿ ಎಂದು ಪರಿಗಣಿಸಿ, ಎರಡು ಪ್ರಾರ್ಥನೆಗಳನ್ನು ಸಲ್ಲಿಸಲಾಗಿದೆ. 19ನೆಯ ಕಾಂಡದ 53 ಮತ್ತು 54ನೆಯ ಶ್ಲೋಕಗಳೇ ಆ ಪ್ರಾರ್ಥನೆಗಳು. 19ನೆಯ ಕಾಂಡ, 53ನೆಯ ಸೂಕ್ತ.

1-10 ಭೃಗುಃ ಕಾಲಃ ಅನುಷ್ಟುಪ್ : 1-4 ತ್ರಿಷ್ಟುಪ್ : 5 ನಿಚೃತ್ ಪುರಸ್ತಾದ್ ಭಾಹತೀ.

**ಕಾಲೋ ಅಶ್ವೋವಹತಿ**

ಕಾಲವೆಂಬ ಕುದುರೆಯು ಸಂಚರಿಸುತ್ತದೆ.

**ಸಪ್ತರಶ್ಮಿಃ ಸಹಸ್ರಾಕ್ಷೋ ಅಜರೋ ಭೂರಿ ರೇತಾಃ**

ಏಳು ಕಿರಣಗಳು, ಸಾವಿರ ಕಣ್ಣುಗಳು, ಮುಪ್ಪಿಲ್ಲದುದು, ಮತ್ತು ವೀರ್ಯ ಸಮೃದ್ಧಿಯಾದುದು, ಅದು.

ತಮಾರೋಹಂತಿ ಕವಯೋ ವಿಪಶ್ಚಿದಸ್ತಸ್ಯ ಚಕ್ರಾ ಭವನಾನಿ ವಿಶ್ವಾ

ದೃಷ್ಟಾವರಾದ ಕವಿಗಳು ಉತ್ತಮ ಯೋಚನೆಗಳನ್ನು ಹೊಂದಿ ಕಾಲವೆಂಬ ಅಶ್ವವನ್ನು ಏರುತ್ತಾರೆ. ವಿಶ್ವವೇ ಚಕ್ರವು.

ಸಪ್ತ ಚಕ್ರಾನ್ ವಹತಿ ಕಾಲ ಏಷ ಸಪ್ತಾಸ್ಯ ನಾಭಿರಮೃತಂ ನ್ವಕ್ಷಃ

ಏಳು ಚಕ್ರಗಳಿಂದ ಸಂಚರಿಸುತ್ತದೆ. ಹೊಕ್ಕಳುಗಳೇಳು (ಕಾಲಕ್ಕೆ) ಮರಣವಿಲ್ಲದುದೇ ಗಾಲಿಯ ಅರಚು.

ಸ ಇಮಾ ವಿಶ್ವಾ ಭುವನಾನಿ ಅಯುಂಜತ್ ಕಾಲಃ ಸ ಈಯತೆ ಪ್ರಥಮೋನು ದೇವಃ

ಎಲ್ಲಾ ಲೋಕಗಳನ್ನೂ ಕಾಲವು ಸರಿಸುತ್ತದೆ. ಮೊದಲ ದೇವರಾದ ಕಾಲವು ಮುಂದು ಸಾಗುತ್ತದೆ.

ಪೂರ್ಣಃ ಕುಂಭೋಽಧಿ ಕಾಲ ಆಹಿತಸ್ತಂ ವೈ ಪಶ್ಯಾಮೋ ಬಹುಧಾನು ಸಂತಃ

ಕಾಲದ ಮೇಲೆ ಪೂರ್ಣಕುಂಭವು ಇಡಲ್ಪಟ್ಟದೆ. ಬಹುರೂಪಗಳಲ್ಲಿ ಕಾಲವನ್ನು ಕಾಣುತ್ತೇವೆ.

ಸ ಇಮಾ ವಿಶ್ವಾ ಭುವನಾನಿ ಪ್ರತ್ಯಂ ಕಾಲಂ ತಮಾಹುಃ ಪರಮೇ ವ್ಯೋಮನ್

ಎಲ್ಲಾ ಲೋಕಗಳನ್ನೂ ಕಾಲವು ಕೊಂಡೊಯ್ಯುತ್ತದೆ. ಎಲ್ಲವನ್ನೂ ಆವರಿಸಿದೆ, ಕಾಲ ಎಂದನ್ನುತ್ತಾರೆ ಸ್ವರ್ಗೋತ್ತಮರು.

ಸ ಏವ ಸಂ ಭುವನಾನ್ಯಾಭರತ್ ಸ ಏವ ಸಂ ಭುವನಾನಿ ಪರ್ಯೈತ್

ಲೋಕಗಳೆಲ್ಲವನ್ನೂ ಕಾಲವೇ ವಹಿಸುತ್ತದೆ. ಲೋಕಗಳೆಲ್ಲವನ್ನೂ ಕಾಲವು ಆವರಿಸಿಕೊಂಡಿದೆ.

ಪಿತಾ ಸನ್ನಭವತ್ ಪುತ್ರ ಏಷಾಂ ತಸ್ಮಾದ್ ವೈ ನಾನ್ಯತ್ ಪರಮಸ್ತಿ ತೇಜಃ

ಅವರೆಲ್ಲರ ತಂದೆಯಾದುದರಿಂದ ಅವರ ಮಗನೂ ಆದನು. ಕಾಲಕ್ಕಿಂತ ತೇಜಸ್ವಿಯಾದ ಇನ್ನೊಂದು ಇಲ್ಲ.

**ಕಾಲೋಽಮೂಂ ದಿವಮಜನಯತ್ ಕಾಲ ಇಮಾಃ ಪೃಥಿವೀರುತ**

ಕಾಲವು ಈ ಸ್ವರ್ಗವನ್ನು ಸೃಷ್ಟಿಸಿತು. ಕಾಲವೇ ಈ ಪೃಥ್ವಿಯನ್ನೂ ಸೃಷ್ಟಿಸಿತು.

**ಕಾಲೇಹ ಭೂತಂ ಭವ್ಯಂ ಚೇಷಿತಂ ಹ ವಿ ತಿಷ್ಠತೇ**

ಭೂತ ಭವಿಷ್ಯಗಳು ಕಾಲದಿಂದಲೆ ಚೇತನಗೊಂಡು ಹರಡುತ್ತವೆ.

**ಕಾಲೋ ಭೂತಿಮಸೃಜತ ಕಾಲೇ ತಪತಿ ಸೂರ್ಯಃ**

ಕಾಲವು ಭೂಮಿಯನ್ನು ಸೃಷ್ಟಿಸಿತು. ಕಾಲದಲ್ಲಿ ಸೂರ್ಯನು ಉರಿಯುತ್ತಾನೆ.

**ಕಾಲೇ ಹ ವಿಶ್ವಾ ಭೂತಾನಿ, ಕಾಲೇ ಚಕ್ಷುರ್ ವಿಪಶ್ಯತಿ.**

ಕಾಲದಲಿ ವಿಶ್ವದ ಸಮಸ್ತವೂ ಇದೆ. ಕಣ್ಣುಗಳು ಕಾಲದಲ್ಲಿ ಹೊರ ನೋಡುತ್ತವೆ.

**ಕಾಲೇ ಮನಃ ಕಾಲೇ ಪ್ರಾಣಃ ಕಾಲೇ ನಾಮ ಸಮಾಹಿತಂ.**

ಮನಸ್ಸು, ಪ್ರಾಣ, ಮತ್ತು ಹೆಸರು, ಇವು ಕಾಲದಲ್ಲಿ ಅಸ್ತಿತ್ವಕ್ಕೆ ಬರುತ್ತವೆ.

**ಕಾಲೇನ ಸರ್ವಾ ನಂದಂತ್ಯಾಗತೇನ ಪ್ರಜಾ ಇಮಾಃ**

ಕಾಲವು ಬಂದಾಗ ಜೀವಿಗಳೆಲ್ಲವೂ ಆನಂದಿಸುತ್ತವೆ.

**ಕಾಲೇ ತಪಃ ಕಾಲೇ ಜ್ಯೇಷ್ಠಂ ಕಾಲೇ ಬ್ರಹ್ಮ ಸಮಾಹಿತಂ**

ತಪಸ್ಸು, ಆದಿಯಾದುದು, ಬ್ರಹ್ಮ, ಇವೆಲ್ಲವೂ ಕಾಲದಲ್ಲಿ ಸ್ಥಿರವಾಗಿವೆ.

**ಕಾಲೋ ಹ ಸರ್ವಸ್ಯೇಶ್ವರೋಯಃ ಪಿತಾಸೀತ್ ಪ್ರಜಾಪತೇಃ**

ಕಾಲವು ಸರ್ವಕ್ಕೂ ಅಧಿಪತಿ, ಹಾಗೂ ಪ್ರಜಾಪತಿಯ ತಂದೆಯು.

**ತೇನೇಷಿತಂ ತೇನ ಜಾತಂ ತದು ತಸ್ಮಿಸ್ ಪ್ರತಿಷ್ಠಿತಂ**

(ಬ್ರಹ್ಮಾಂಡವು) ಕಾಲದಿಂದ ಪ್ರಚೋದಿಸಲ್ಪಟ್ಟಿತು, ಸೃಷ್ಟಿಸಲ್ಪಟ್ಟಿತು ಮತ್ತು ಆಧಾರವನ್ನು ಹೊಂದಿತು.

ಕಾಲೋ ಹ ಬ್ರಹ್ಮಾ ಭೂತ್ವಾ ಬಿಭರ್ತಿ ಪರಮೇಷ್ಠಿನಂ.

ಕಾಲವೇ ಬ್ರಹ್ಮನಾಗಿ, ಪರಮೇಷ್ಟಿಯನ್ನೂ ಹೊರುತ್ತದೆ.

ಕಾಲಃ ಪ್ರಜಾ ಅಸೃಜತ ಕಾಲೋ ಅಗ್ರೇ ಪ್ರಜಾಪತಿಂ

ಕಾಲವು ಪ್ರಜೆಗಳನ್ನು ಸೃಷ್ಟಿಸಿತು. ಪ್ರಾರಂಭದಲ್ಲಿ ಪ್ರಜಾಪತಿಯನ್ನು ಸೃಷ್ಟಿಸಿತು.

ಸ್ವಯಂ ಭೂಃ ಕಶ್ಯಪಃ ಕಾಲಾತ್ ತಪಃ ಕಾಲಾದಜಾಯತ

ಸ್ವಯಂ ಆಗಿ ಅಸ್ತಿತ್ವದಲ್ಲಿರುವ ಕಶ್ಯಪನೂ, ತಪಸ್ಸೂ, ಕಾಲದಿಂದ ಹುಟ್ಟಿದುವು.

## ಶ್ಲೋಕ 54

ಕಾಲಾದಾಪಃ ಸಮ ಭವನ್ ಕಾಲಾದ್ ಬ್ರಹ್ಮ ತಪೋ ದಿಶಃ

ಕಾಲದಿಂದ (ಆಪಃ) ನೀರು ಉದ್ಭವಿಸಿತು. ಕಾಲದಿಂದ ಬ್ರಹ್ಮ, ತಪಸ್ಸು ಮತ್ತು ದಿಕ್ಕುಗಳು (Space) ಹುಟ್ಟಿದುವು.

ಕಾಲೇನ ಉದೇತಿ ಸೂರ್ಯಃ ಕಾಲೇನಿ ವಿಶತೆ ಪುನಃ

ಕಾಲದಿಂದ ಸೂರ್ಯನು ಉದಯಿಸುತ್ತಾನೆ. ಕಾಲದಲ್ಲಿ ಪುನಃ ಮುಳುಗುತ್ತಾನೆ.

ಕಾಲೇನ ವಾತಃ ಪವತೇ ಕಾಲೇನ ಪೃಥಿವೀ ಮಹೀ

ಕಾಲದಿಂದ ವಾಯುವು ಬೀಸುತ್ತದೆ. ಪೃಥಿವಿಯು ಕಾಲದಿಂದ ಅಸ್ತಿತ್ವದಲ್ಲಿದೆ.

ದ್ಯೌರ್ಮಹೀ ಕಾಲ ಆಹಿತಾ

ವಿಶಾಲವಾದ ಆಕಾಶವು ಕಾಲದಿಂದ ಆವೃತವಾಗಿದೆ.

ಕಾಲೋಹ ಭೂತಂ ಭವ್ಯಂಚ ಪುತ್ರೋ ಅಜನಯತ್ ಪುರಾ

ಕಾಲದ ಪುತ್ರನಾದ ಪ್ರಜಾಪತಿಯಿಂದ ಪುರಾತನಕಾಲದಲ್ಲಿ, ಭೂತ ಭವಿಷ್ಯಗಳು ಸೃಷ್ಟಿಸಲ್ಪಟ್ಟವು.

ಕಾಲಾದೃಚಃ ಸಮುಭವನ್ ಯಜುಃ ಕಾಲಾದಜಾಯತ

ಕಾಲದಿಂದ ಋಕ್, ಮತ್ತು ಯಜುರ್ವೇದಗಳು ಹುಟ್ಟಿದುವು.

ಕಾಲೋ ಯಜ್ಞಂ ಸಮೈರಯದ್ ದೇವೇಭ್ಯೋ ಭಾಗಮಕ್ಷಿತಂ.

ಯಜ್ಞವನ್ನೂ ದೇವತೆಗಳಿಗೆ ಮೀಸಲಾದ ಅವಿನಾಶಿಯಾದ ಹವಿಸ್ಸನ್ನೂ ಕಾಲ ಹೊರತಂದಿತು.

ಕಾಲೇ ಗಂಧರ್ವಾಪ್ಸರಸಃ ಕಾಲೇ ಲೋಕಾಃ ಪ್ರತಿಷ್ಠಿತಾಃ

ಗಂಧರ್ವರೂ ಅಪ್ಸರೆಯರೂ ಹಾಗೂ ಈ ಲೋಕಗಳೂ ಕಾಲದಲ್ಲಿ ಪ್ರತಿಷ್ಠಿತವಾಗಿವೆ.

ಕಾಲೇऽಯಮಂಗೀರಾ ದೇವೋऽಥರ್ವಾಚಾದಿ ತಿಷ್ಠತಃ

ಅಂಗೀರಸ ಮತ್ತು ಅಥರ್ವರು ಕಾಲದಲ್ಲಿ ದೇವಲೋಕವನ್ನು ಆಳುತ್ತಿದ್ದಾರೆ.

ಇಮಂ ಚ ಲೋಕಂ ಪರಮಂ ಚ ಲೋಕಂ ಪುಣ್ಯಾಶ್ಚ ಲೋಕಾನ್ ವಿಧೃತೀಶ್ಚ ಪುಣ್ಯಾನ್

ಈ ಲೋಕವನ್ನೂ ಅತ್ಯುತ್ತಮ ಲೋಕವನ್ನೂ ಪುಣ್ಯಪ್ರಾಪ್ತವಾದ ಲೋಕಗಳನ್ನೂ ಮತ್ತು ಪುಣ್ಯ ಲೋಕಗಳ ವಿಭಾಗಗಳನ್ನೂ

ಸರ್ವಾನ್ ಲೋಕಾನ್ ಅಭಿಜತ್ಯ ಬ್ರಹ್ಮಣಾ ಕಾಲಂ ಸ ಈಯತೆ ಪರಮೋನು ದೇವಃ

ಅಂದರೆ, ಸರ್ವಲೋಕಗಳನ್ನೂ ಬ್ರಹ್ಮನ ಮೂಲಕ ಸ್ವಾಧೀನಪಡಿಸಿ ಕೊಂಡ ಅತ್ಯುನ್ನತ ದೇವನಾದ 'ಕಾಲ'ವು ಮುನ್ನುಗ್ಗುತ್ತದೆ.

ವೇದಗಳ ಕಾಲದಲ್ಲಿ, ಲೋಕ ವಿಜ್ಞಾನವು ಶೈಶವಾವಸ್ಥೆಯಲ್ಲಿತ್ತು. ಮುನಿಗರು ದೀರ್ಘಾಲೋಚನೆಯನ್ನು ವಿಶಾಲ ದೃಷ್ಟಿಯಿಂದ ಮಾಡಿ, ತಾವು ಕಂಡುದನ್ನು ಪ್ರಾಪಂಚಿಕ ಅನುಭವದೊಂದಿಗೆ ಸಮನ್ವಯ ಮಾಡಿ ಕೊಂಡು, 'ಕಾಲ' ಎಂಬ ಬ್ರಹ್ಮಾಂಡದ ಆದಿಯಾದುದನ್ನು ಪ್ರಾರ್ಥಿಸಿದರು. ಈ ಪ್ರಾರ್ಥನೆಗಳಲ್ಲಿ ಕಾಲದ ಇಂದಿನ ಕಲ್ಪನೆಯಲ್ಲಿರುವ ಹಲವಾರು ವಿಷಯ ಗಳಿರುವುದು ಗಮನಾರ್ಹ.

1. 'ತಂ ಆರೋಹಂತಿ ಕವಯೋಃ'. ಕವಿಗಳು, ರವಿ ಕಾಣದುದನ್ನು ಕಾಣುತ್ತಾರೆ. ಭವಿಷ್ಯವನ್ನು ಸಾಕ್ಷಾತ್ ದರ್ಶಿಸುತ್ತಾರೆ. ಆದ್ದರಿಂದ ದೃಷ್ಟಾರರು ಎಂಬ ಹೆಸರು. ಇಂತಹ ತೀಕ್ಷ್ಣಮತಿಯ ಮನನಿಗರು ಕಾಲವೆಂಬ ಅಶ್ವವನ್ನು ಏರುತ್ತಾರೆ. ಸವಾರಿ ಮಾಡುತ್ತಾರೆ ಎಂದರೇನು? ಕಾಲವನ್ನು ಸ್ವಾಧೀನಮಾಡಿಕೊಂಡಿದ್ದಾರೆ ಎಂಬ ಅರ್ಥ. ಬ್ರಹ್ಮಾಂಡದ ಆದಿ ಮೂಲಗಳಲ್ಲಿ ಒಂದಾದುದು ಎಂಬ ಕಾಲವನ್ನು ಸ್ವಾಧೀನ ಮಾಡಿಕೊಂಡರು ಎಂದರೆ ಕಾಲಾತೀತರಾದರು. ಕಾಲನ ಪಾಶದಿಂದ ವಿಮುಕ್ತರಾದರು, ಎಂದು ಅರ್ಥ.

ಮನೋತೀತ ಅವಸ್ಥೆಯನ್ನು ಸಾಧಿಸಿಕೊಂಡರೆ ಕಾಲದ ಕಲ್ಪನೆಯು ಮಾಯವಾಗುತ್ತದೆ. ಹಿಂದು ಮುಂದು ಎನ್ನುವ ಕಾಲ ವಿಂಗಡನೆಯು ಅಳಿಸಿ, ಎಂದೆಂದೂ ಇಂದೇ, ಎಂದೆಂದೂ ಈ ಕ್ಷಣವೇ ಎನ್ನುವ ಅನುಭವವಾಗುತ್ತದೆ. ಪಾಶ್ಚಾತ್ಯ ತಾತ್ವಿಕರು, ಅನುಭವಿಗಳೂ ಇದೇ ಮಾತನ್ನು, ಅನುಭವಾನಂತರ ಹೇಳಿದ್ದಾರೆ,

2. 'ಪಿತಾ ಸನ್ನಭವತ್, ಪುತ್ರ ಏಷಾಂ ತಸ್ಮಾದ್'

ಎಲ್ಲದಕ್ಕೂ ಪಿತೃವಾದವನು, ಆ ಕಾರಣದಿಂದಲೇ ಅವುಗಳಿಗೆ ಪುತ್ರನೂ ಆಗುತ್ತಾನೆ.

Hereditary characteristics ಆಜನ್ಮಸಿದ್ಧವಾದ ಗುಣಗಳು, ಎಂಬುವು ವಂಶ ಪಾರಂಪರೆಯಲ್ಲಿ ಸ್ಪಷ್ಟವಾಗಿ ಕಾಣಬರುತ್ತವೆ. ವಿಶಾಲ ದೃಷ್ಟಿಯಿಂದ ಇದನ್ನು ಗಮನಿಸಿ, ಹಾಗೂ ವಿಶ್ಲೇಷಿಸಿದರೆ, ಬ್ರಹ್ಮಾಂಡದ ಆದಿ ಮೂಲವಾದವುಗಳೂ, ಜೀವಿಗಳ ಬಾಳಿನಲ್ಲಿ ಕಾಣಿಸಿಕೊಳ್ಳಲೇಬೇಕು. ಕಾಲವು, ಆದಿಮೂಲವಾದದು. ಅದು ನಮ್ಮ ಬಾಳಿನಲ್ಲಿ ನಮ್ಮ ಮಕ್ಕಳ ಬಾಳಿನಲ್ಲೂ ಇರಲೇಬೇಕು.

'ಕಾಲವೆಂಬುದು ಅನಂತವಾಗಿ ಹರಿಯುತ್ತಲೇ ಇರುತ್ತದೆ. ಇದು ನಮ್ಮ ಮನಸ್ಸಿನ ಆಳದಲ್ಲಿ ಸ್ಪಷ್ಟವಾಗಿದೆ. ವಿಚಾರಕ್ಕೆ ಇದು ಸಿಗುವುದಿಲ್ಲ. ಆದರೆ ಆಳ ಅನುಭವದಲ್ಲಿ ಸ್ಪಷ್ಟವಾಗಿರುತ್ತದೆ' ಎಂದು 19ನೆಯ ಶತಮಾನದ ವಿಜ್ಞಾನಿಗಳು ಹಲವರು ನುಡಿದಿದ್ದಾರೆ. ಇಂದಿನ ವೈಜ್ಞಾನಿಕರೂ, ತಾತ್ವಿಕರೂ

ಇದನ್ನು ಒಪ್ಪುವುದಿಲ್ಲ. ನಿರ್ವಿಚಾರ ನಿರ್ವಿಕಲ್ಪ ಪ್ರಜ್ಞೆಯನ್ನು-ಆ ತೆರನಾಗಿ ಅರಿಯುವ ಸಾಧ್ಯತೆಯನ್ನು ನಮ್ಮ ಇಂದಿನ ವೈಜ್ಞಾನಿಕ ಹಂತದಲ್ಲಿ ಯಾರೂ ಒಪ್ಪುವುದಿಲ್ಲ. ಸವಿಚಾರ ನಿರ್ವಿಕಲ್ಪ ಪ್ರಜ್ಞೆಯನ್ನು Intuition ಎಂದು ಒಪ್ಪುತ್ತಾರೆ. ಅನಂತರ ಅದನ್ನು ಸ್ಥಿರೀಕರಿಸಲು ಪ್ರಯೋಗಗಳನ್ನು ನಡೆಸುತ್ತಾರೆ.

ಪಿತಾಸನ್ನಭವತ್...ಈ ನುಡಿಯು ನಿರ್ವಿಚಾರ ನಿರ್ವಿಕಲ್ಪ ಪ್ರಜ್ಞೆಯಿಂದ ಉಂಟಾಗಿರಬಹುದು. ನಿರ್ವಿಚಾರ, ಅಥವಾ ಸವಿಚಾರ ನಿರ್ವಿಕಲ್ಪ ಪ್ರಜ್ಞೆಯ ವಿವರಗಳನ್ನು 'ಸಾಂಖ್ಯ-ಯೋಗ'ದ ಅಧ್ಯಾಯದಲ್ಲಿ ವಿರಳವಾಗಿ ಬಿಡಿಸಲಾಗಿದೆ.

### 3. 'ಕಾಲೇನ ಆಗತೇನ ಇಮಾಃ ಸರ್ವಾ ಪ್ರಜಾ ನಂದತಿ'

ನಂದತಿ, ಆನಂದಿಸುತ್ತವೆ. ಆನಂದ ಎಂಬುದು ದ್ವಂದ್ವಾತೀತವಾದ ಅನುಭವ. ಈ ಅನುಭವವು ಹಿತವಾಗಿರುತ್ತದೆ. ದ್ವಂದಾತೀತವಾದರೂ, ಹಿತವಾಗುವುದರಿಂದ. ಈ ಅನುಭವದಲ್ಲಿ ಕಾಮ್ಯದ ಅಥವಾ ರಾಗದ ತುಸು ಛಾಯೆ ಇರಲೇಬೇಕು. ಏಕೆಂದರೆ ಆನಂದಾತೀತ ಅವಸ್ಥೆಯಲ್ಲಿ ನಿರಾಕಾರ, ನಿರಾಮಯ, ನಿರಂಜನ, ನಿವರ್ಣನ, ಹಾಗೂ ನಿಷ್ಕಾಮ ಇತ್ಯಾದಿಗಳು ಮಾತ್ರ ಇರಲು ಸಾಧ್ಯ. ಬ್ರಹ್ಮಾಂಡವು ಆ ಅವಸ್ಥೆಯಲ್ಲಿಯೇ ಪ್ರಾರಂಭದಲ್ಲಿತ್ತು. 'ಪುರುಷ'ದ ಪ್ರಚೋದನೆಯಿಂದ 'ಪ್ರಕೃತಿ'ಯಲ್ಲಿ ತ್ರಿಗುಣಗಳು ಕಾಣಿಸಿಕೊಂಡವು. ಆಗ ಕಾಲ, ದೇಶ, ನಿಮಿತ್ತ ಇವುಗಳೂ ಅವತರಿಸಿದುವು. ಇದಾದ ನಂತರ 'Evolution' ಪ್ರಕೃತಿಯ ಪ್ರಗತಿಯು ಮುನ್ನಡೆಯಲಾರಂಭಿಸಿತು.

Evolution. ಇನಲ್ಲಿ ಸುಖವಾದುದನ್ನು ಬಯಸುವುದು, ಅರಸುವುದೂ ಒಂದು ಪ್ರೇರಕ. ದುಃಖಕರವಾದುದರಿಂದ ತಪ್ಪಿಸಿಕೊಳ್ಳುವುದು ಇನ್ನೊಂದು ಪ್ರೇರಕ. ಇವೆರಡು ಅತ್ಯಂತ ಮುಖ್ಯವಾದ ಪ್ರೇರಕಗಳು, ಪ್ರಕೃತಿಯಲ್ಲಿ.

ಅಂದರೆ ಪ್ರಕೃತಿಯ ಪ್ರಗತಿಯ ಆರಂಭದಿಂದ; ಅಂದರೆ ಕಾಲದ ಕಲ್ಪನೆಯು ಉಂಟಾದಾಗಿನಿಂದ, ಆನಂದದ ಅರಸುವಿಕೆಯೂ ಪ್ರಾರಂಭವಾಯಿತು. ಇದೇ ಅರ್ಥವನ್ನು ಅಥರ್ವವೇದದ ಪ್ರಾರ್ಥನೆಯು ನೀಡುತ್ತದೆ.

2. ಸಾಂಖ್ಯ ಮತ್ತು ಯೋಗ : ಇವುಗಳಲ್ಲಿ 'ಕಾಲ'ದ ಕಲ್ಪನೆ.

ಸಾಂಖ್ಯ ಮತ್ತು ಯೋಗ ಇವೆರಡೂ ದರ್ಶನಗಳು. ಬಹಳಷ್ಟು ನಿಕಟ ಸಂಬಂಧವನ್ನು ಹೊಂದಿವೆ. ಕಾಲದ ವಿಶ್ಲೇಷಣೆಯು 'ತನ್ಮಾತ್ರ'ಗಳಿಗೆ ಅನ್ವಯಿಸಲ್ಪಟ್ಟಿದೆ. ತನ್ಮಾತ್ರಗಳು ಎಂದರೇನು? ಬ್ರಹ್ಮಾಂಡದ ಸೃಷ್ಟಿಯಲ್ಲಿ, ಸಾಂಖ್ಯಕಾರರ ಪ್ರಕಾರ, ತನ್ಮಾತ್ರಗಳು ಒಂದು ಅಗತ್ಯವಾದ ವಿಭಾಗ. ಇದನ್ನು ಅರಿಯಲು ಸಾಂಖ್ಯದ ಪ್ರಕಾರ, ಬ್ರಹ್ಮಾಂಡದ ಸೃಷ್ಟಿಯನ್ನು ಸ್ಥೂಲವಾಗಿ ತಿಳಿದುಕೊಳ್ಳುವುದು ಅಗತ್ಯ.

ನಿರಾಕಾರವಾದ, ಅವಿನಾಶಿಯಾದ, ಅನಾದ್ಯನಂತವಾದ ಮೂಲ ವಸ್ತುವನ್ನು 'ಪ್ರಕೃತಿ' ಎಂದು ಹೆಸರಿಸಿದ್ದಾರೆ, ಸಾಂಖ್ಯಕಾರರು.

ಪ್ರಕೃತಿಯಲ್ಲಿ ಮೂಲಭೂತವಾದ ಮೂರು ಗುಣಗಳು ಹುದುಗಿರುತ್ತವೆ. ಸತ್ವ, ರಜಸ್, ತಮಸ್ ಎಂಬ ಮೂರು ಗುಣಗಳು. ಸ್ವಾಭಾವಿಕವಾದ ಸಹಜವಾದ ನಡವಳಿಕೆಯಿಂದ ಆ ಗುಣಗಳನ್ನು ಗುರುತಿಸಬಹುದು. ಹುದುಗಿರುವ, ಹಾಗೂ ಅಡಗಿರುವ, ಈ ಮೂರು ಗುಣಗಳನ್ನು ಪ್ರಚೋದಿಸುವಂತಹುದು. 'ಪುರುಷ' ಎಂಬ ಆದಿಮೂಲವಾದ ಚೇತನ. ಪುರುಷ ಎಂಬುದೂ ಸಾಂಖ್ಯಕಾರರ ಮನೋಕಲ್ಪನೆ ಎಂಬುದನ್ನು ಗಮನಿಸಬೇಕು, ನಾವು.

'ಪುರುಷ'ನಿಂದ ಪ್ರಚೋದಿಸಲ್ಪಟ್ಟಮೇಲೆ 'ಪ್ರಕೃತಿ'ಯಲ್ಲಿ ಗುಣಗಳು ಮೂರೂ ಅಸ್ತಿತ್ವಕ್ಕೆ ಬರುತ್ತವೆ. ತಮ್ಮ ತಮ್ಮ ಸ್ವಭಾವಗಳನ್ನು ಬಹಿರಂಗಪಡಿಸುತ್ತವೆ. ಪುರುಷನ ಪ್ರಚೋದನೆಯಾಗುವ ತನಕ ಅಂತರಂಗದಲ್ಲಿರುತ್ತವೆ.

ಅ) ಸತ್ವಗುಣ. ಈ ಗುಣದಿಂದ ಬ್ರಹ್ಮಾಂಡವು ವ್ಯಕ್ತಿಗೆ ವ್ಯಕ್ತವಾಗುತ್ತದೆ. ವ್ಯಕ್ತಿಯ ಬುದ್ಧಿಗೆ ಅಥವಾ ಅರಿವಿಗೆ, ಕನ್ನಡಿಯನ್ನು ಹಿಡಿದು, ಬ್ರಹ್ಮಾಂಡದ ಪ್ರತಿಬಿಂಬವನ್ನು ಕಾಣಿಸುತ್ತದೆ. ಇದರಿಂದ ಸಮಷ್ಟಿ ಬುದ್ಧಿಯು ಪರಿಣಮಿಸುತ್ತದೆ. ವ್ಯಷ್ಟಿ, ಸಮಷ್ಟಿಯು ಸಮನ್ವಯವಾಗುತ್ತದೆ. ಕೀರ್ತಿಶೇಷ ಬ್ರಜೇಂದ್ರನಾಥ್ ಸೀಲ್ ಅವರು 'ಸತ್ವ' ಗುಣವನ್ನು 'Intelligence Stuff ಎಂದು ಕರೆದಿದ್ದಾರೆ.

ಆ) ರಜೋಗುಣ. ಈ ಗುಣದಿಂದ ಕಾರ್ಯವನ್ನು ಮಾಡಲು ಸಾಧ್ಯ. ಜಡತ್ವದಿಂದ ಇರುವುವನ್ನು ಚಲಿಸುವಂತೆ ಪ್ರಚೋದಿಸುವ ಶಕ್ತಿ

ಇದು. ಹಾಗೂ ಸ್ವಯಂ ಹತೋಟಿಯಿಲ್ಲದೆ ಚಲಿಸುತ್ತಿರುವುದನ್ನು ಸ್ಥಿರವಾಗುವಂತೆ ನಿಲ್ಲಿಸುವ ಶಕ್ತಿಯೂ ಇದು.

೩) ತಮೋಗುಣ. ಈ ಗುಣದಿಂದಲೇ ಘನತೆಯೂ [Mass] ಕಾಣಬರುವುದು. ಜಡತ್ವವೂ ಈ ಗುಣದಿಂದಲೇ. ಹಾಗೂ ಚಲಿಸಲಾರಂಭಿಸಿದರೆ, ಚಲಿಸುತ್ತಲೇ ಇರುವ ಪ್ರವೃತ್ತಿ. 'Inertia' ಎಂದಿದನ್ನು ಪ್ರೊಫೆಸರ್ ಸೀಲ್ ಅವರು ಗುರುತಿಸಿದ್ದಾರೆ.

ಈ ಮೂರೂ ಗುಣಗಳು ಪ್ರಧಾನವಾದುವುಗಳಲ್ಲ. ಇವುಗಳಿಗೆ ಸ್ವಯಂ ಆದ, ಪ್ರತ್ಯೇಕವಾದ ಅಸ್ತಿತ್ವವಿಲ್ಲ. ಆದರೆ ಪರಸ್ಪರವಾದ ಹಾಗೂ ನಿಕಟವಾದ ಸಂಬಂಧವನ್ನು ಇವು ಹೊಂದಿವೆ. ಬ್ರಹ್ಮಾಂಡದಲ್ಲಿನ ಯಾವುದೊಂದರ, ಹಾಗೂ ಯಾವ ಅನುಭವದಲ್ಲೂ, ಪ್ರತಿಯೊಂದು ಕ್ಷಣದಲ್ಲಿಯೂ, ಈ ಮೂರೂ ಗುಣಗಳು ಪ್ರಭಾವವನ್ನು ಬೀರುತ್ತವೆ.

ದೈನಂದಿನ ನಮ್ಮ ಅನುಭವಗಳಿಂದ ಪ್ರತ್ಯಕ್ಷವಾಗಿ ಕಾಣುವ ಜೀವಿಗಳ ನಡವಳಿಕೆಯಿಂದ, ಈ ಮೂರೂ ಗುಣಗಳ ಪ್ರಭಾವವನ್ನು ತಿಳಿಯಲೆತ್ನಿಸೋಣ. ನಮ್ಮ ಅತ್ಯಂತ ಅಲ್ಪವಾದ ಅನುಭವಗಳ ತೆರನಾಗಿಯೇ ಇರುವ ಬ್ರಹ್ಮಾಂಡದ ಸ್ವರೂಪವನ್ನು ಅರಿಯಲು ನಮಗೆ ಸಾಧ್ಯ! ಹನಿಗೂಡಿದರೆ ಹಳ್ಳ. ತುಂತುರು ಹನಿಗಳಿಂದಲೇ ಮಹಾಸಾಗರವು ಅಸ್ತಿತ್ವಕ್ಕೆ ಬರುತ್ತದೆ. ತೆನೆಗೂಡಿದರೆ ಭತ್ತ. ಪುಟಾಣಿ ಕಾಳುಗಳು ಕೂಡಿಕೊಂಡು ಅವುಗಳದೇ ರಾಜ್ಯವನ್ನು ರಚಿಸಿಕೊಂಡಾಗ, ತೆನೆ ಮೂಡಿತು ಎನ್ನುತ್ತೇವೆ. ಪುಟ್ಟ ಪುಟ್ಟ ನಮ್ಮ ಅನುಭವಗಳ ಮಹಾಸಮೂಹವೇ ಬ್ರಹ್ಮಾಂಡ.

ನಮ್ಮ ನಿತ್ಯದ ಬಾಳಿನಲ್ಲಿ ಈ ಮೂರೂ ಗುಣಗಳ ಪ್ರಭಾವವನ್ನು ಕಾಣುತ್ತೇವೆ.

ಮಧುರ ಕಂಠದ ಗಾಯಕಿಯು ದಾಸರ ಪದವನ್ನು ಹಿತವಾಗಿ ಹಾಡುತ್ತಿರುವಾಗ, ಕೇಳುವವನಿಗೆ ಬಹಳ ಸುಖವಾಗಿರುತ್ತದೆ. ದಾಸರ ನುಡಿಗಳು, ಗಾಯಕಿಯ ಸಂಗೀತಶ್ರೀಯು ಕೂಡಿಕೊಂಡು ನಮ್ಮ ಮನಸ್ಸನ್ನು ಸೆರೆಹಿಡಿದಿರುತ್ತವೆ. ಆ ಕಾಲದಲ್ಲಿ ಸತ್ವಗುಣವು ಅಧಿಕವಾಗಿರುತ್ತದೆ. ಇನ್ನು ಯಾವುದಾದರೂ ಕೆಲಸವನ್ನು ಮಾಡಬೇಕು ಎನ್ನುವ ರಜೋಗುಣವು

ತುಂಬಾ ಕಡಿಮೆಯಾಗಿರುತ್ತದೆ. ಜಡತ್ವ, ಆಲಸಿಕೆ ಇತ್ಯಾದಿಯಾದ ತಮೋ ಗುಣವೂ ಬಹಳ ಕಡಿಮೆ ಪ್ರಮಾಣದಲ್ಲಿರುತ್ತದೆ. ಸತ್ವಗುಣವು ಪ್ರಾಮುಖ್ಯ ವಾಗಿರುವ ಈ ಅವಧಿಯಲ್ಲಿ ಸಮಾಧಾನ, ನಿಶ್ಚಿಂತತೆ, ಉಲ್ಲಾಸ ; ಇವುಗಳ ಅನುಭವವಾಗುತ್ತದೆ.

ನಾಲ್ಕು ಜನ ಸ್ನೇಹಿತರನ್ನು ಸಂತೋಷಕೂಟಕ್ಕೆಂದು ಮನೆಗೆ ಕರೆದಿರುತ್ತೇವೆ. ಸಂಜೆ ಐದಕ್ಕೆ ಅತಿಥಿಗಳು ಬರುವ ನಿರೀಕ್ಷೆ. ಮೂರು ಗಂಟೆ ಯಿಂದ ಮನೆಯ ಯಜಮಾನ ಮತ್ತು ಯಜಮಾನಿತಿ ಛಡಪಡಿಸಲು ಶುರು ಮಾಡುತ್ತಾರೆ. ಏರ್ಪಾಡೆಲ್ಲವನ್ನೂ ಸುವ್ಯವಸ್ಥಿತವಾಗಿ ಮಾಡಿರುತ್ತಾರೆ. ಆದರೆ ಏನನ್ನಾದರೂ ಮರೆತೆವೋ ಎಂಬ ಸಂಶಯವು ಕುಕ್ಕುತ್ತಲೇ ಇರುತ್ತದೆ. ಸಮಾಧಾನಚಿತ್ತದಿಂದ ಒಂದೈದು ನಿಮಿಷಗಳು ಕುಳಿತರೂ, ಮನಸ್ಸು, ತೊಣಚಿ ಹೊಕ್ಕ ನಾಯಿಯಂತೆ, ಅತ್ತಿತ್ತ ಅಡ್ಡಾದಿಡ್ಡಿ ಚಲಿಸುತ್ತದೆ. ಅತಿಥಿ ಗಳು ಬಂದು, ಉಂಡು ತಿಂದು ಹರಟಿ, ಹಿಂತಿರುಗಿ ಹೋದಮೇಲೆ, ಮನೆ ಯವರಿಗೆ, ಉಸ್ಸಪ್ಪಾ ಎಂದು ಕೂತು ಸಮಾಧಾನವನ್ನು ಪಡೆಯುವುದು ಶಕ್ಯ ವಾಗುತ್ತದೆ. ಅಂದರೆ ಕಾರ್ಯೋನ್ಮುಖವಾಗಿರುವಾಗ, ರಜೋಗುಣವು ಪ್ರಬಲವಾಗಿರುತ್ತದೆ. ಮಿಕ್ಕೆರಡು ಗುಣಗಳೂ ಅಲ್ಪವಾಗಿರುತ್ತವೆ. ರಜೋ ಗುಣವು ಅಧಿಕವಾಗಿರುವಾಗ, ಸಮಾಧಾನವಿರುವುದಿಲ್ಲ. ಸಂದೇಹಗಳು ಕಾಣಬರುತ್ತವೆ. ನಿಶ್ಚಿಂತತೆ ಇರುವುದಿಲ್ಲ. ಚಿಂತೆಯೇ ಪ್ರೇರಕವಾಗುತ್ತದೆ, ಕಾರ್ಯದಲ್ಲಿ ಮಗ್ನನಾಗಲು.

ಅವರೆಕಾಯಿ ಹುಳಿ, ಹುರುಳಿ ಹಪ್ಪಳ, ಥ್ಯೆಂಡಿ ಮೊಸರಿನ ಊಟವನ್ನು ಪಟ್ಟಾಗಿ ಹೊಡೆದೆವು ಅನ್ನಿ. ಆನಂತರ ಬಿದ್ದುಗೊಳ್ಳುವುದರ ಹೊರತು ಮತ್ತಾವುದರಲ್ಲೂ ಆಸಕ್ತಿ ಇರುವುದಿಲ್ಲ. ಸತ್ವಗುಣವು ಅಧಿಕವಾಗಿದ್ದರೆ ಮನಸ್ಸಿನಲ್ಲಿ ಸಮಾಧಾನವಿರುತ್ತದೆ. ಉಲ್ಲಾಸವಿರುತ್ತದೆ. ಆದರೆ ತಮೋ ಗುಣವು ಆವರಿಸಿಕೊಂಡಾಗ, ಮನಸ್ಸಿನಲ್ಲಿ ಜಡತ್ವವಿರುತ್ತದೆ, ಉಲ್ಲಾಸದ ಹೆಸರೇ ಇರುವುದಿಲ್ಲ.

ಮೂರೂ ಗುಣಗಳು ಸರ್ವದಾ ಇದ್ದರೂ, ಒಂದು ಪ್ರಧಾನವಾಗಿರುತ್ತದೆ, ಸ್ವಲ್ಪಕಾಲ. ಮತ್ತಿನ್ನೊಂದು ಪ್ರಬಲವಾಗುತ್ತವೆ, ಬೇರೆ ಕಾಲದಲ್ಲಿ. ಬಹುತೇಕ ಬಾಳಿನಲ್ಲಿ ರಜಸ್ತಮೋಗುಣಗಳು ಪ್ರಬಲವಾಗಿರುವ ಸಂದರ್ಭಗಳು ಹೆಚ್ಚು.

ಸತ್ವಗುಣದ ಪ್ರಾಬಲ್ಯವು ಅಷ್ಟಾಗಿ ಕಾಣಬರುವುದಿಲ್ಲ. ಸತ್ವಗುಣದ ಪ್ರಾಬಲ್ಯವನ್ನು ಹೊರತರುವುದೇ ಬಾಳಗುರಿ.

ಎಲ್ಲ ಜೀವಿಗಳ ಬಾಳಿನಲ್ಲೂ ಈ ಮೂರೂ ಗುಣಗಳು ಇದ್ದೇ ಇರುತ್ತವೆ. ಆದುದರಿಂದಲೇ ಇವು ಮೂರೂ ಪ್ರಕೃತಿಯ ಆದ್ಯವಸ್ಥೆಯಲ್ಲಿಯೂ ಇರುತ್ತವೆ, ಎಂದನ್ನುತ್ತಾರೆ ಸಾಂಖ್ಯಕಾರರು. ಮೂರೂ ಗುಣಗಳ ಪರಸ್ಪರ ಸೆಣಸಾಟವೇ ಬ್ರಹ್ಮಾಂಡದ ಸೃಷ್ಟಿಗೆ ಕಾರಣ ಎನ್ನುತ್ತದೆ ಸಾಂಖ್ಯ.

ಪ್ರಕೃತಿಯು ಸೃಷ್ಟಿ ಕ್ರಮದಲ್ಲಿ ಈ ರೀತಿ ಉದ್ಯುಕ್ತವಾದಾಗ, ಮಹತ್ ಎನ್ನುವ ಆದಿಶಕ್ತಿಯು ಅವತರಿಸುತ್ತದೆ. ಸುತ್ತಲೂ ಇರುವುದನ್ನು ಅರಿಯುವ ಗುಣವು ಇದಕ್ಕಿದೆ. ಬುದ್ಧಿ ಎಂದೂ ಇದನ್ನು ಕರೆಯುತ್ತಾರೆ.

ಮಹತ್ ಇನಿಂದ 'ನಾನು' ಎನ್ನುವ ವ್ಯಕ್ತಿಯ ಅರಿವು ಅನಂತರ ಮೂಡುತ್ತದೆ. ಇದೇ ಅಹಂ-ಕಾರ. ಅಹಂಕಾರವು ವೃದ್ಧಿಯಾಗಬೇಕಾದರೆ ಪ್ರಪಂಚದ ಅರಿವು ಮೂಡಬೇಕು. ಯಾವುದಕ್ಕೆ ಮೂಡಬೇಕು ? ವ್ಯಕ್ತಿಯ ಬುದ್ಧಿಗೆ. ಪ್ರಪಂಚದ ಅರಿವನ್ನು ಮೂಡಿಸುವದು ಬುದ್ಧೀಂದ್ರಿಯಗಳು. ಇವು ಐದು. ಕಣ್ಣು, ಕಿವಿ, ನಾಲಿಗೆ, ಚರ್ಮ ಮತ್ತು ಮೂಗು ; ಇವುಗಳ ಜತೆಗೆ ಐದು ಕರ್ಮೇಂದ್ರಿಯಗಳೂ ಕಾರ್ಯವನ್ನು ಮಾಡಲೋಸುಗ ಅಣಿಯಾಗುತ್ತವೆ. ವಾಕ್ಕು, ಪಾಣಿ, ಪಾದ, ಪಾಯು, ಉಪಸ್ಥಗಳೆಂಬ ಕರ್ಮೇಂದ್ರಿಯಗಳು.

ಇವಲ್ಲದೆ ಐದು ಸ್ಥೂಲವಾದ ಭೂತಗಳು. ಪೃಥಿವಿ, ಅಪ್, ತೇಜಸ್, ವಾಯು ಮತ್ತು ಆಕಾಶ.

ಈ ಹದಿನೈದೂ ಸ್ಥೂಲಭೂತಗಳು.

ಇದರೊಡನೆ ಸೂಕ್ಷ್ಮವಾದ ಐದು ತನ್ಮಾತ್ರಗಳು ಇರುತ್ತವೆ. ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳು. ಅಂದರೆ ಪ್ರಕೃತಿ ಮಹತ್. ಬುದ್ಧಿ ಅಹಂಕಾರ ಎಂಬ ಅಂತಃಕರಣ ಚತುಷ್ಟಯವು, ಮತ್ತು ಇಪ್ಪತ್ತು, ಸ್ಥೂಲ ಭೂತಗಳು ಮತ್ತು ಸೂಕ್ಷ್ಮ ತನ್ಮಾತ್ರಗಳು. ಒಟ್ಟು 24 ಜಡತತ್ವಗಳು.

ಸೂಕ್ಷ್ಮವಾದ, ಐದು ತನ್ಮಾತ್ರಗಳು, ಕಾಲದ ಅರಿವಿಗೆ ನಿಕಟ ಸಂಬಂಧವನ್ನು ಮೂಲತಃ ಹೊಂದಿವೆ. ಸಾಂಖ್ಯ-ಯೋಗದ ದೃಷ್ಟಿಯಿಂದ ಕಾಲದ

ವಿವರಣೆಯನ್ನು ಅರಿಯುವಾಗ ತನ್ಮಾತ್ರಗಳು ಮತ್ತು ಕಾಲ ಎಂಬುದರಿಂದಲೇ ತಿಳಿಯಬೇಕು. ಅದೇ ಮೂಲ ಸಂಬಂಧ.

## ತನ್ಮಾತ್ರಗಳು ಮತ್ತು ಕಾಲ

ತನ್ಮಾತ್ರಗಳು' ಬ್ರಹ್ಮಾಂಡದೊಂದಿಗೆ ಮೂರು ವಿಧದ ಸಂಬಂಧವನು ಹೊಂದಿರುತ್ತವೆ.

೧) ದೇಶಾವಿಚ್ಛಿನ್ನ. ದೇಶ ಅಥವಾ Space ಇನೊಂದಿಗೆ ಅವಿ. ಭಾಜ್ಯವಾದ, ಅವಿಚ್ಛಿನ್ನವಾದ ನಿಕಟ ಸಂಪರ್ಕವನ್ನು ಹೊಂದಿದೆ.

೨) ಕಾಲಾವಚ್ಛಿನ್ನ. ಕಾಲ ಅಥವಾ Time. ಇದರ ಜೊತೆಗೂ ಅವಿ ಚ್ಛಿನ್ನವಾದ, ವಿಭಜಿಸಲಾಗದಂತಹ ನಿಕಟ ಸಂಪರ್ಕವನ್ನು ಹೊಂದಿದೆ.

೩) ನಿಮಿತ್ತಾವಚ್ಛಿನ್ನ. ನಿಮಿತ್ತ. ಬ್ರಹ್ಮಾಂಡದ ಮೂಲ ಕಾರಣ ದೊಂದಿಗೂ ಅವಿಚ್ಛಿನ್ನವಾದ, ಬೇರ್ಪಡಿಸಲಾಗದ ಸಂಬಂಧವನ್ನು ಹೊಂದಿದೆ.

ಈ ಮೂರು ವಿಧದ ತನ್ಮಾತ್ರವಿನ ಸಂಬಂಧಗಳು, ಅಂತಃಸ್ಫೂರ್ತಿಯಿಂದ (Intuitve) ತಿಳಿಯಬರುತ್ತವೆ. ನಿರ್ವಿಕಲ್ಪ ಪ್ರಜ್ಞಾ ಎಂದೂ ಇದನ್ನು ಅನ್ವರ್ಥವಾಗಿ ಕರೆಯುತ್ತಾರೆ. ಮನಸ್ಸಿನಿಂದಲೇ ಅರಿಯುವ Conceptual ಜ್ಞಾನವನ್ನು ಸವಿಕಲ್ಪ ಪ್ರಜ್ಞಾ ಎಂದನ್ನುತ್ತಾರೆ. ನಿರ್ವಿಕಲ್ಪ ಪ್ರಜ್ಞೆಯಿಂದ, ತನ್ಮಾತ್ರ ಮತ್ತು ಕಾಲದ ಸಂಬಂಧವನ್ನು ಅರಿಯುವಾಗ, ಕೇವಲ ಶುದ್ಧವಾದ ಅಂತಃಸ್ಫೂರ್ತಿಯಿಂದಲೇ ಸಾಧ್ಯ ಎನ್ನುವಂತಿಲ್ಲ. ವಿಚಾರವನ್ನು ಮಾಡಿ ಯೋಚಿಸಿದ ಮೇಲೆ 'ಸಾಧ್ಯ. ಆದ್ದರಿಂದ 'ತನ್ಮಾತ್ರ ಮತ್ತು ಕಾಲ'ದ ಸಂಬಂಧವನ್ನು 'ಸವಿಚಾರ ನಿರ್ವಿಕಲ್ಪ ಪ್ರಜ್ಞೆ'ಯಿಂದ ಅರಿಯಬೇಕು. ಸಾಂಖ್ಯಕಾರರು ಈ ರೀತಿ ಅರಿತು ವಿವರಿಸಿದುದು ಹೀಗೆ :—

ಅನಾದಿ ಅನಂತವಾದ ಕಾಲ=Eternity ಎಂಬುದು ಮನಸ್ಸಿನ ಒಂದು ಕಲ್ಪನೆ. ಬುದ್ಧಿ ನಿರ್ಮಾಣವಾದುದು. ಒಂದು ಘಟನೆಯು ಮೊದಲು ಆಯಿತು, ಇನ್ನೊಂದು ಅನಂತರ ಎಂಬ ನಮ್ಮ ಅನುಭವದಿಂದ ಘಟನೆಗಳ ಅಂತರವನ್ನು ಅಳೆಯುತ್ತೇವೆ, ಕಾಲ ಎಂದು ಕರೆಯುತ್ತೇವೆ. ತನ್ಮಾತ್ರವು ಒಂದು ಸ್ಥಳದಿಂದ ಇನ್ನೊಂದಕ್ಕೆ ಚಲಿಸಿದರೆ, ಆ ಚಲನೆಯ ಅವಧಿಯನ್ನು ಕಾಲ ಎನ್ನುತ್ತೇವೆ. ತನ್ಮಾತ್ರವಿನ ಅತ್ಯಂತ ಸೂಕ್ಷ್ಮ ಚಲನೆಯು, ಅತ್ಯಂತ

ಸೂಕ್ಷ್ಮವಾದ, ವಿಭಜಿಸಲಾಗದ ಕಾಲವನ್ನು ತೆಗೆದುಕೊಳ್ಳುತ್ತದೆ. ಕಾಲದ ಆ ಅವಧಿಯನ್ನು 'ಕ್ಷಣ' ಎಂದು ಕರೆದರು. ನಮ್ಮ ಮನಸ್ಸಿಗೆ ವ್ಯಕ್ತವಾಗುವ, ಅತಿ ಪುಟ್ಟ ಕಾಲಾವಧಿಯೇ ಕ್ಷಣ.

ಕ್ಷಣತತ್ ಕ್ರಮಯೋಃ— ಣ ಮತ್ತು ಅನಂತರದ ಕ್ರಮ.

ನಾಸ್ತಿ ವಸ್ತು ಸಮಾಹಾರ ಇತಿ—ಇವುಗಳಿಗೆ ವಾಸ್ತವಿಕತೆಯು ಇಲ್ಲ.

ಬುದ್ಧಿ ಸಮಾಹಾರಃ—ಬುದ್ಧಿಯ ಕಲ್ಪನೆಯಿಂದ ಉಂಟಾದುದು

ಮುಹೂರ್ತಾ ಅಹೋರಾತ್ರಾದಯಃ—ಮುಹೂರ್ತ, ದಿನ, ರಾತ್ರಿ ಇತ್ಯಾದಿಗಳು.

ಸ ಖಲ್ವಯಂ ಕಾಲಃ—ಇವೆಲ್ಲವೂ ಈ ಕಾಲವೇ.

ವಸ್ತುಶೂನ್ಯೋ ಬುದ್ಧಿ ನಿರ್ಮಾಣಃ—ಇದಕ್ಕೆ ವಾಸ್ತವಿಕ ಅಸ್ತಿತ್ವವಿಲ್ಲ. ಬುದ್ಧಿಯ ಕಲ್ಪನೆ.

ಶಬ್ದ ಜ್ಞಾನಾನುಪಾತಿ—ಶಬ್ದ ಮತ್ತು ಜ್ಞಾನಗಳಿಂದ.

ಲೌಕಿಕಾನಾಂ ವ್ಯುತ್ಥಿತ ದರ್ಶನಾನಾಂ—ಲೋಕದ ವಿಧವಿಧ ದೃಶ್ಯಗಳಂತೆ ಕಾಣುವುದರಿಂದ.

ವಸ್ತು ಸ್ವರೂಪ ಇವ ಅವಭಾಸತೆ—ವಸ್ತುವಿನಂತೆ ಭಾಸವಾಗುತ್ತದೆ.

ಕ್ಷಣಸ್ತು ವಸ್ತು ಪತಿತ ಕ್ರಮಾವಲಂಬೀ—ಕ್ಷಣವು ವಸ್ತುವು ವ್ಯತ್ಯಾಸವನ್ನು ಹೊಂದುವ ಕ್ರಮವನ್ನು ಅವಲಂಬಿಸುತ್ತದೆ.

ಕ್ರಮಶ್ಚ ಕ್ಷಣಾನಂತರ್ಯಾತ್ಮ—ಕ್ರಮವಾದರೋ ಕ್ಷಣದ ಅನಂತರದ ಘಟನೆ.

ತಂ ಕಾಲವಿದಃ ಕಾಲಇತಿ ಆಚಕ್ಷತೆ ಯೋಗಿನಃ—ಕಾಲವನ್ನು ತಿಳಿದ ಯೋಗಿಗಳು, ಕ್ಷಣ, ಅನಂತರದ ಕ್ರಮ ಇವುಗಳನ್ನು ಕಾಲ ಎಂದನ್ನುತ್ತಾರೆ.

ನಚದ್ವೌ ಕ್ಷಣಾ ಸಹಭವತಃ—ಎರಡು ಕ್ಷಣಗಳು ಒಟ್ಟಿಗೆ ಇರುವುದಿಲ್ಲ.

ಕ್ರಮಶ್ಚ ನ ದ್ವಯೋಃ—ಕ್ರಮಗಳೆರಡೂ ಒಟ್ಟಿಗೆ ಇರಲು ಸಾಧ್ಯವಿಲ್ಲ.

ಸಹಭುವೋರಸಂಭವಾತ್—ಒಟ್ಟಿಗೆ ಎರಡೂ ಇರುವುದು ಅಸಂಭವ.

ಪೂರ್ವಸ್ಮಾತ್ ಉತ್ತರ ಭಾವಿನೋ—ಮೊದಲು ಆಯಿತು, ಆಮೇಲೆ ಆಗುವುದು.

ಯದ್ ಅನಂತರ್ಯಂ—ಯಾವ ಅನಂತರ, ಎನ್ನಿಸಿಕೊಳ್ಳುವುದೋ

ಕ್ಷಣಸ್ಯ ಸ ಕ್ರಮಃ—ಅದು ಕ್ಷಣದ ಕ್ರಮ.

ತಸ್ಮಾತ್ ವರ್ತಮಾನ ಏವೈಕಃ ಕ್ಷಣಃ—ಆದುದರಿಂದ ವರ್ತಮಾನ ಎನ್ನುವುದು ಒಂದೇ ಕ್ಷಣ.

ನ ಪೂರ್ವೋತ್ತರ ಕ್ಷಣಾಃ ಸಂತೀತಿ—ಹಿಂದೆ ಮತ್ತು ಮುಂದಿನ ಕ್ಷಣಗಳು ಇರುವುದಿಲ್ಲ.

ತಸ್ಮಾನ್ನಾಸ್ತಿ ತತ್ ಸಮಾಹಾರಃ—ಆದ್ದರಿಂದ ಅವುಗಳ ಅಸ್ತಿತ್ವವು ಇಲ್ಲ.

ಯೇತು ಭೂತ ಭಾವಿನಃ ಕ್ಷಣಾಃ—ಹಿಂದೆ ಆದುದು ಎಂದು ಭಾವಿಸಲ್ಪಟ್ಟ ಕ್ಷಣವು

ತೇ ಪರಿಣಾಮಾನ್ವಿತಾ ವ್ಯಾಖ್ಯೇಯಾಃ—ಅದರ ಪರಿಣಾಮದಿಂದ ತಿಳಿಯಲ್ಪಟ್ಟು

ತೇ ನೈಕೇನ ಕ್ಷಣೇನ—ಈ ಒಂದೇ ಕ್ಷಣದಿಂದ

ಕೃತ್ಸ್ನೋ ಲೋಕಃ ಪರಿಣಾಮ ಮನುಭವತಿ—ಕೂಡಿ ಲೋಕದ ಪರಿಣಾಮ ಎಂದು ಅನುಭವವಾಗುತ್ತದೆ.

ತತ್ಕ್ಷಣಾರೂಢಾಃಖಲ್ವಮೀ ಧರ್ಮಾಃ—ಆ ಕ್ಷಣದಿಂದ ಧರ್ಮ ಎಂಬುದು

ಯಥಾಽಪಕರ್ಷ ಪರ್ಯ್ಯಂತಂ ದ್ರವ್ಯಂ ಪರಮಾಣುಃ—ಹೇಗೆ ವಸ್ತುವನ್ನು (ದ್ರವ್ಯ) ವಿಭಜಿಸಿದಾಗ ಕಡೆಗೆ ಪರಮಾಣುವು ದೊರೆಯುತ್ತದೆಯೋ

ಏವಂ ಪರಮಾಽಪಕರ್ಷ ಪರ್ಯಂತಃ ಕಾಲಃ ಕ್ಷಣಃ—ಅದಕ್ಕಿಂತಲೂ ಅತಿಯಾಗಿ ವಿಭಜಿಸಿದಾಗ ಕಾಲವು, ಕ್ಷಣ ಎನಿಸಿಕೊಳ್ಳುತ್ತದೆ.

ಯಾವತಾ ವಾ ಸಮಯೇನ ಚಲಿತಃ ಪರಮಾಣುಃ—ಪರಮಾಣುವು ಯಾವ ಕಾಲದಲ್ಲಿ ಚಲಿಸುತ್ತದೆಯೋ

ಪೂರ್ವ ದೇಶಂ ಜಹ್ಯಾತ್—ಹಿಂದೆ ಇದ್ದ ದೇಶವನ್ನು ಬಿಡುತ್ತದೆಯೋ
ಉತ್ತರ ದೇಶಂ ಉಪ ಸಮ್ಪದ್ಯೇತ—ಮುಂದಿನ ದೇಶವನ್ನು (Space) ಹೊಂದುತ್ತದೆಯೋ.

ಸ ಕಾಲಃ ಕ್ಷಣಃ—ಆ ಕಾಲವು ಕ್ಷಣವು.
ತತ್ ಪ್ರವಾಹ ಅವಿಚ್ಛೇದಸ್ತು ಕ್ರಮಃ—ಅಂತಹ ಪ್ರವಾಹ ವಿಚ್ಛೇದಿಸಲಾಗುದುದೇ ಕ್ರಮ.

(ವ್ಯಾಸ ಭಾಷ್ಯ, ಸೂತ್ರ ೫೨-ಪಾದ ೩) (ಸರಳ ಅನುವಾದ)

'ಕಾಲ' ವು ಅಸ್ತಿತ್ವದಲ್ಲಿ ಇಲ್ಲವೇ ಇಲ್ಲ ಎಂದು ಹೇಳುವುದಿಲ್ಲ, ಈ ವಿಚಾರ ಸರಣಿಯು. ಇದರ ಸಿದ್ಧಾಂತವು ಇಷ್ಟೇ. 'ಕ್ಷಣ' ಎಂಬುದನ್ನು ಬಿಟ್ಟು ಕಾಲಕ್ಕೆ ಇತರ ಯಾವ ಅಸ್ತಿತ್ವವೂ ಇಲ್ಲ. ಆದರ ಕ್ಷಣಕ್ಕೆ ಅಸ್ತಿತ್ವ ವಿದೆ. ಏಕೆಂದರೆ ತ್ರಿಗುಣಗಳಿಂದ ಕೂಡಿರುವುದರಿಂದ ಪ್ರಾಪಂಚಿಕ ವ್ಯತ್ಯಾಸ ದೊಂದಿಗೆ, ಲೋಕದ ಪರಿವರ್ತನೆಯೊಂದಿಗೆ, ಅದು ಸಂಪೂರ್ಣವಾಗಿ ಬಂಧಿತ ವಾಗಿದೆ-[ಗುಣಾ ಪರಿಣಾಮಸ್ಯ ಕ್ಷಣಾತ್ವವಚನಾತ್]-ಆದರೆ ಇದು ಕೂಡ ಅಸ್ತಿತ್ವದಲ್ಲಿರುವುದು. ನಮ್ಮ ಮನಸ್ಸಿನ ಗ್ರಹಿಸುವಿಕೆಯಿಂದ—[ವ್ಯಕ್ತಿತ ದರ್ಶನ]

ಸವಿಚಾರ ನಿರ್ವಿಕಲ್ಪ ಪ್ರಜ್ಞೆಯಿಂದ ಕ್ಷಣದ ಅಸ್ತಿತ್ವವನ್ನು ತಿಳಿಯುತ್ತೇವೆ. ಈ ತಿಳಿವಳಿಕೆಗೆ ತ್ರಿಗುಣಗಳು ಪರಿಣಾಮವನ್ನು ಮೂಡಿಸುವುದೇ ಕಾರಣ

ಆದರೆ ನಿರ್ವಿಚಾರ ನಿರ್ವಿಕಲ್ಪ ಪ್ರಜ್ಞೆಯು, ತ್ರಿಗುಣಾತೀತವಾದುದರಿಂದ, ಮೂಲ ಪ್ರಕೃತಿಯ ಸಹಜ ಅಸ್ತಿತ್ವವನ್ನು ಗ್ರಹಿಸಬಲ್ಲುದು. ಅಂತಹ ಪ್ರಜ್ಞೆಯಲ್ಲಿ, ಕಾಲ, ದೇಶ, ನಿಮಿತ್ತ, ಇವು ಮೂರೂ ಅತಿಕ್ರಮಿಸಲ್ಪಟ್ಟಿರುತ್ತವೆ. ಅವುಗಳ ಕಲ್ಪನೆಯೇ ಬರುವುದಿಲ್ಲ.

ಅಂದರೆ ಕಾಲದ, ಅತಿ ಪುಟ್ಟ ವಿಂಗಡಿಸಲಾಗದ, ಅಳತೆಯು ಕ್ಷಣ. ತ್ರಯೀಗುಣಗಳಿಂದ ಪ್ರಭಾವಿತವಾದ ಪ್ರಕೃತಿಯಲ್ಲಿ, ಕ್ಷಣವು ಅಸ್ತಿತ್ವದಲ್ಲಿರುತ್ತದೆ. ನಮ್ಮ ಬುದ್ಧಿಗೆ ಕಾಣಬರುತ್ತದೆ. ಅಥವಾ ನಮ್ಮ ಅರಿವಿನ

ಅನುಭವಕ್ಕೆ ಸಿಲುಕುತ್ತದೆ. ಕ್ಷಣವು, ದೇಶ ಮತ್ತು ನಿಮಿತ್ತಗಳೊಂದಿಗೆ ಅತ್ಯಂತ ನಿಕಟವಾದ ಸಂಬಂಧವನ್ನು ಹೊಂದಿರುತ್ತದೆ. ಇವು ಮೂರೂ ಒಟ್ಟುಗೂಡಿರುವುದೇ, ನಮ್ಮ ಗ್ರಹಿಕೆಗೆ ದೊರಕುವುದು. ನಿರ್ವಿಚಾರವಾದ, ನಿರ್ವಿಕಲ್ಪ ಪ್ರಜ್ಞೆಯಲ್ಲಿ, ಕಾಲ ದೇಶ ನಿಮಿತ್ತಗಳು ಮಾಯವಾಗುತ್ತವೆ.

ಪಾಶ್ಚಾತ್ಯ ವಿಜ್ಞಾನಿಗಳು ಮತ್ತು ತಾತ್ವಿಕರು. ಕಾಲ ದೇಶ ಇವೆರಡನ್ನೇ ಆಧಾರವನ್ನಾಗಿರಿಸಿಕೊಂಡು ವಿಚಾರ ಮಾಡಿದ್ದಾರೆ, ಅತ್ಯಂತ ಶ್ರದ್ಧೆಯಿಂದ, ಕುಶಾಗ್ರಮತಿಯಿಂದ ವಿಶ್ಲೇಷಿಸಿದ್ದಾರೆ. ಆದರೆ ನಿಮಿತ್ತ, The causal factor, ವನ್ನು ಗಣನೆಗೆ ತೆಗೆದುಕೊಳ್ಳಲಿಲ್ಲ. ಹಾಗಾಗಿ ಬ್ರಹ್ಮಾಂಡದ ಕಲ್ಪನೆಯನ್ನು Linear curved space-time continuum ಎಂದು ವರ್ಣಿಸಿದ್ದಾರೆ.

ಸಾಂಖ್ಯಕಾರರ ನಿರ್ವಿಚಾರ ನಿರ್ವಿಕಲ್ಪ ಪ್ರಜ್ಞೆಯ ದೃಷ್ಟಿಯಿಂದ, ದೇಶ ಕಾಲ ನಿಮಿತ್ತಗಳು ಮಾಯಾರೂಪಿನವು. ನಿಜವಾದ ಅಸ್ತಿತ್ವವೇ ಅವುಗಳಿಗಿಲ್ಲ.

ಆದರೆ ಸವಿಚಾರ ನಿರ್ವಿಕಲ್ಪ ಪ್ರಜ್ಞೆಯ ದೆಸೆಯಿಂದ, ತ್ರಯಿಗುಣಗಳಿಂದ ಸಂಪೂರ್ಣವಾಗಿ ಆವೃತವಾಗಿರುವುದರಿಂದ, ಕಾಲ ದೇಶ ನಿಮಿತ್ತಗಳು ಒಟ್ಟುಗೂಡಿ ನಮ್ಮ ಅರಿವಿಗೆ ಮತ್ತು ಅನುಭವಕ್ಕೆ ಸಿಗುತ್ತದೆ. ಬ್ರಹ್ಮಾಂಡದ ಕಲ್ಪನೆಯನ್ನು, ಸಾಂಖ್ಯಕಾರರ ಪ್ರಕಾರ, Linear, curved, space, time and nimitha continuum ಎಂದು ವಿವರಿಸಬೇಕು.

Linear curved ಎಂದು ಹೇಳುವುದಕ್ಕೆ ಸಾಕಷ್ಟು ಸಾಕ್ಷ್ಯಗಳು, ಸಾಂಖ್ಯಕಾರಿಕದಲ್ಲಿಯೂ, ವಿಜ್ಞಾನ ಭಿಕ್ಷುವಿನ ಪ್ರವಚನ ಭಾಷ್ಯದಲ್ಲಿಯೂ ಹೇರಳವಾಗಿ ದೊರೆಯುತ್ತವೆ. ಅವುಗಳನ್ನು ಇಲ್ಲಿ ಉದ್ಧರಿಸುವುದು, ಅಪ್ರಕೃತ. 'ಕಾಲ'ದ ವಿಶ್ಲೇಷಣೆಗೆ ಮಾತ್ರ ಮೀಸಲಾಗಿದೆ ಈ ಪುಟ್ಟ ಪುಸ್ತಕ.

# ಅಧ್ಯಾಯ–೬

## 1. ಪ್ರಾರ್ಥನೆ ; ಧ್ಯಾನ ; ಮತ್ತು ಕಾಲ

ಧ್ಯಾನವನ್ನು ಮಾಡುವಾಗ ಮನಸ್ಸು ಒಂದು ಅವಸ್ಥೆಯಲ್ಲಿರುತ್ತದೆ. ಮನಸ್ಸಿನ ಈ ಅವಸ್ಥೆಯನ್ನು ವೈಜ್ಞಾನಿಕವಾಗಿ ಇನ್ನೂ ವಿಶ್ಲೇಷಣೆ ಮಾಡಿಲ್ಲ ಆದರೆ ಧ್ಯಾನದಿಂದ (Meditation) ಹಲವಾರು ಪರಿಣಾಮಗಳು ಆಗುವುದನ್ನು ಸಾಕ್ಷಾತ್ ಕಾಣುತ್ತೇವೆ. (1) ದೇಹದ ಕಾರ್ಯ ಚಟುವಟಿಕೆಗಳ ಮೇಲೆ ಧ್ಯಾನವು, ಕೆಲವು ವೇಳೆ ಪವಾಡವೆನ್ನುವ ರೀತಿಯಲ್ಲಿ, ಪರಿಣಾಮವನ್ನು ಬೀರುತ್ತದೆ. ದೇಹದ ಚಟುವಟಿಕೆಗಳಿಗೆ ಕಾಲದ ಗತಿಯು ಅನ್ವಯಿಸಿ ಕೊಂಡಿರುವುದನ್ನು ಈಗಾಗಲೇ ತಿಳಿದಿದ್ದೇವೆ. ಚಟುವಟಿಕೆಗಳು ವ್ಯತ್ಯಾಸ ವನ್ನು ಹೊಂದಿದರೆ ಕಾಲದ ಗತಿಯೂ ಏರುಪೇರಾಯಿತು ಎನ್ನಬೇಕು. (2) ಮನಸ್ಸಿನ ಚಟುವಟಿಕೆಗಳ ಮೇಲೆ ಧ್ಯಾನವು ಪ್ರಭಾವವನ್ನು ಬೀರುತ್ತದೆ. ಅಂದರೆ ಮನೋಕಾಲದ ಗತಿಯು ವ್ಯತ್ಯಾಸವಾಗುತ್ತದೆ. (3) ಧ್ಯಾನದಿಂದ ಮನೋತೀತ ಕಾಲದ ಅರಿವು ಉಂಟಾಗುತ್ತದೆ ಎನ್ನುವುದಕ್ಕೆ ಸಾಕಷ್ಟು ನಿದರ್ಶನಗಳಿವೆ. ಹೀಗೆ ಮೂರು ತೆರನ ವಿಪರೀತ ಪ್ರಭಾವವನ್ನು ಬೀರುವ ಧ್ಯಾನವನ್ನು ಕಾಲದ ಅರಿವಿನ ದೃಷ್ಟಿಯಿಂದ ವಿಶ್ಲೇಷಿಸೋಣ.

(1) ಧ್ಯಾನ ಎಂದರೇನು ? ಪ್ರಾರ್ಥನೆಯು ಯಾವುದು ?

Prayer ಎಂದರೆ To ask earnestly, devoutly ಎಂದು ಅರ್ಥ. ಪ್ರಾರ್ಥನೆ, ಅತ್ಯಂತ ಶ್ರದ್ಧೆಯಿಂದ ಬೇಡಿಕೊಳ್ಳುವುದು. ತುಂಬು ಭಕ್ತಿ ಯಿಂದ ಕೇಳಿಕೊಳ್ಳುವುದು. ಧ್ಯಾನ ಎನ್ನುವ ಅರ್ಥದಲ್ಲಿ 'Prayer' ದೇವರನ್ನು ಬೇಡಿಕೊಳ್ಳುವುದು ಎಂದಾಗುತ್ತದೆ. ನಮ್ಮ ಇಷ್ಟಾರ್ಥವನ್ನು ಸಲ್ಲಿಸುವ ಶಕ್ತಿ ಇರುವ, ಅಗೋಚರವಾದ ಅವ್ಯಕ್ತವಾದ, ಯಾವುದನ್ನೋ ದೇವರು ಎಂದು ಅನ್ನುತ್ತೇವೆ. ಅದನ್ನು ವ್ಯಕ್ತಿಯ ಪರಿಸರದ ಸಂಸ್ಕೃತಿಗೆ ಅನುಗುಣವಾಗಿ

ವಿಧವಿಧ ಹೆಸರುಗಳಿಂದ ಕರೆಯುತ್ತೇವೆ. ಆ ಹೆಸರಿನ ದೇವರನ್ನು ಬೇಡಿ ಕೊಳ್ಳುತ್ತೇವೆ. ಧ್ಯಾನ ಎನ್ನುವ ಪದದ ಸಾಮಾನ್ಯ ಬಳಕೆಯಲ್ಲಿ ಈ ಅರ್ಥವು ಬರುತ್ತದೆ. ದೇವರ ಪ್ರಾರ್ಥನೆಯು, ಧ್ಯಾನದ ಮೊದಲ ಮೆಟ್ಟಲು.

ಆದರೆ ಧ್ಯಾನ ಎನ್ನುವ ಪದವನ್ನು ನಮ್ಮ ಸಂಸ್ಕೃತಿಯಲ್ಲಿ, ವಿಶೇಷಾರ್ಥ ದಲ್ಲಿ ಬಳಸುತ್ತಾರೆ. ಧಾರಣ, ಧ್ಯಾನ ಮತ್ತು ಸಮಾಧಿ ಎಂದು ಮನಸ್ಸಿನ ಮೂರು ಸ್ಥಿತಿಗಳನ್ನು ವಿವರಿಸುತ್ತಾರೆ.

ಯಾವುದಾದರೂ ಒಂದು ವಸ್ತುವಿನಲ್ಲಿ (ಉದಾಹರಣೆಗೆ, ವಿಗ್ರಹ, ಚಿತ್ರ ;) ಅಥವಾ ದೇಹದ ಯಾವುದಾದರೂ ಒಂದು ಸ್ಥಳದಲ್ಲಿ (ಉದಾ : ಭ್ರೂಮಧ್ಯದಲ್ಲಿ ; ಅಥವಾ ನಾಸಿಕಾಗ್ರದಲ್ಲಿ ;) ಮನಸ್ಸನ್ನು ನಿಲ್ಲಿಸುವುದು ಧಾರಣಾ. 'ದೇಶಬಂಧ ಚಿತ್ತಸ್ಯ ಧಾರಣಾ' ಎನ್ನುತ್ತಾರೆ ಪತಂಜಲಿ ಋಷಿಗಳು.

ಧಾರಣೆಯ ಸ್ಥಾನದಲ್ಲಿ, ತಾನು ಧ್ಯಾನಿಸತಕ್ಕ ವಸ್ತುವಿನ ಹೊರತು, ಇತರ ಯಾವುದೂ ಮನಸ್ಸಿಗೆ ಬರದಂತೆ ಸಾಧಿಸುವ ಕ್ರಮವು ಧ್ಯಾನ. 'ತತ್ರ ಪ್ರತ್ಯಯೈಕ ತಾನತಾ ಧ್ಯಾನಂ' ಎಂದು ಯೋಗಸೂತ್ರ. (ವಿಭೂತಿ ಪಾದ-೨)

ಧ್ಯಾನ ಮಾಡುವಾಗ ಇತರ ಯಾವ ವಿಷಯಗಳೂ ಮನಸ್ಸಿಗೆ ಬರದಂತೆ ಸಾಧಿಸಬೇಕು. ಧ್ಯಾನ ಎಂದರೆ ಈ ಎರಡೂ ಅರ್ಥಗಳು ಬರಬೇಕು. ಇಷ್ಟಾರ್ಥಸಿದ್ಧಿಗಾಗಿ, ಇಷ್ಟದೇವತೆಯನ್ನು ತುಂಬು ಭಕ್ತಿಯಿಂದ ಬೇಡಿ ಕೊಳ್ಳುವುದು ಒಂದು. ಮನಸ್ಸನ್ನು ಹದಗೊಳಿಸಿ, ಅದರ ಚಂಚಲತೆಯನ್ನು ಸ್ತಬ್ಧಗೊಳಿಸಿ, ಧ್ಯಾನವನ್ನು ಮಾಡಿ, ಮನಸ್ಸಿನ ಮೇಲೆ ಸಂಪೂರ್ಣ ಹತೋಟಿಯನ್ನು ಸಾಧಿಸುವುದು, ಎರಡನೆಯ ಅರ್ಥ. ಆಸೆ ಆಕಾಂಕ್ಷೆಗಳಿಂದ ಜೀವನವನ್ನು ನಡಸುವ ಸಾಮಾನ್ಯರಿಗೆ ಮೊದಲ ಅರ್ಥವು ಸಲ್ಲುತ್ತದೆ. ಆ ಹಂತವನ್ನು ಮೀರಿದ, ಆದಿಮೂಲವನ್ನು ಅರಸುವ ಕುತೂಹಲವು ಅತ್ಯಧಿಕ ವಾದವರಿಗೆ, ಎರಡನೆಯ ಅರ್ಥವು ಅನ್ವಯಿಸುತ್ತದೆ.

ಮೊದಲನೆಯ ಅರ್ಥವು ಅನ್ವಯಿಸುವ ಸಾಮಾನ್ಯರಿಗೆ ಕಾಲವು ದೇಹ ಮತ್ತು ಮನಸ್ಸುಗಳಲ್ಲಿ ಪ್ರತ್ಯಕ್ಷವಾಗುತ್ತದೆ. ಎರಡನೆಯ ಅರ್ಥದಲ್ಲಿ ಅರಸು ವವರಿಗೆ, ಮನೋಽತೀತ ಕಾಲದ ಪ್ರಜ್ಞೆಯು ಉಂಟಾಗುತ್ತದೆ.

(2) ಧ್ಯಾನ ಮತ್ತು ದೇಹದ ಕಾಲ.

ಸಾಮಾನ್ಯವಾದ ಆರೋಗ್ಯ ಸ್ಥಿತಿಯಲ್ಲಿರುವವನು, ಅತ್ಯಂತ ಶ್ರದ್ಧೆಯಿಂದ ಧ್ಯಾನವನ್ನು ಮಾಡುತ್ತಿದ್ದರೆ, ಅವನ ನಾಡಿಯ ಬಡಿತವು ಸ್ವಲ್ಪ ಮಂದವಾಗುತ್ತದೆ. ನಿಮಿಷಕ್ಕೆ 70–74 ಇರುವುದು 60–62 ಕ್ಕೆ ಇಳಿಯುತ್ತದೆ. ಅದೇ ಪ್ರಕಾರ ರಕ್ತದ ಒತ್ತಡವು 120–80 ಇರುವುದು 100–70ಕ್ಕೆ ಇಳಿಯುತ್ತದೆ. ಇದಕ್ಕೆ ಅನುಗುಣವಾಗಿ ಉಸಿರಾಡುವುದರ ಗತಿಯೂ ನಿಮಿಷಕ್ಕೆ 18 ಇರುವುದು, 14-15 ಕ್ಕೆ ಇಳಿಯುತ್ತದೆ.

ಅಂದರೆ ಕಾಲವು, ಧ್ಯಾನಾವಸ್ಥೆಯಲ್ಲಿರುವಾಗ, ಸ್ವಲ್ಪಮಟ್ಟಿಗೆ ನಿಧಾನವಾಗುತ್ತದೆ ಎನ್ನಬೇಕು. ಹಾಗಾದಾಗ ಜೀವಾವಧಿಯೂ ಹೆಚ್ಚುತ್ತದೆ. ದೇಹದ ಆರೋಗ್ಯ ಸ್ಥಿತಿಯೂ ಉತ್ತಮಗೊಳ್ಳುತ್ತದೆ. ಮತ್ತು ಬೇನೆಗಳು ತಾಕಿದರೆ, ಶೀಘ್ರವಾಗಿ ಗುಣವಾಗುತ್ತವೆ.

Transcendental meditation, ಎಂಬ ಧ್ಯಾನದ ಒಂದು ಬಗೆಯನ್ನು, ದೇಹಕಾರ್ಯ ಶಾಸ್ತ್ರಜ್ಞರು (Physiologists) ಸೂಕ್ಷ್ಮವಾದ ಪ್ರಯೋಗಗಳಿಂದ ಅಭ್ಯಾಸ ಮಾಡಿ, ಮೇಲೆ ವಿವರಿಸಿದ ಪರಿಣಾಮಗಳು ಉಂಟಾಗುತ್ತವೆ ಎಂಬುದನ್ನು ಸಿದ್ಧಾಂತ ಮಾಡಿದ್ದಾರೆ.

ರಕ್ತದ ಒತ್ತಡ ಅಧಿಕವಾಗಿರುವವರು, High Blood Pressure ಇನಿಂದ ನರಳುತ್ತಿರುವವರು ಶ್ರದ್ಧೆಯಿಂದ ಧ್ಯಾನವನ್ನು ಮಾಡತೊಡಗಿದರೆ, ಅವರ ರಕ್ತದ ಒತ್ತಡವು ಪರಿಣಾಮಕಾರಿಯಾಗಿ ಇಳಿಯುತ್ತದೆ. ರಕ್ತದ ಒತ್ತಡವನ್ನು ಇಳಿಸುವ ರಸಾಯನಿಕ ಔಷಧಗಳಂತೆಯೇ, ಧ್ಯಾನವೂ ಗುಣಕಾರಿಯಾಗುತ್ತದೆ. ರಕ್ತದ ಒತ್ತಡವು ಹೆಚ್ಚಾದರೆ, ಹುಟ್ಟು, ಸಾವು, ಇವುಗಳ ಅಂತರ ಕಡಿಮೆಯಾಗುತ್ತದೆ. ಆಯುಃಪ್ರಮಾಣ ಕಡಿಮೆಯಾಗುತ್ತದೆ. ಧ್ಯಾನದಿಂದ, ಅಥವಾ ಔಷಧಿಗಳಿಂದ ರಕ್ತದ ಒತ್ತಡವನ್ನು ಇಳಿಸಿದರೆ ಆಯುಃಪ್ರಮಾಣವು ದೀರ್ಘವಾಗುತ್ತದೆ. ಅಂದರೆ ದೇಹದ ಕಾಲವು ಮಂದಗತಿಯಲ್ಲಿ, ಆರೋಗ್ಯವಂತರಲ್ಲಿರಬೇಕಾದ ಗತಿಯಲ್ಲಿ, ಸಾಗುತ್ತದೆ.

ಆರೋಗ್ಯ ಸ್ಥಿತಿಯಲ್ಲಿ ಹುಟ್ಟು ಸಾವುಗಳ ಅಂತರವನ್ನು ಅಂದರೆ ಜೀವಂತ ಕಾಲವನ್ನು ಹೆಚ್ಚಿಸುತ್ತದೆ. ಅನಾರೋಗ್ಯ ಸ್ಥಿತಿಯಲ್ಲಿದ್ದವರಲ್ಲೂ ಅದೇ ಪರಿಣಾಮವನ್ನು ನೀಡುತ್ತದೆ. ಧ್ಯಾನವನ್ನು ಶ್ರದ್ಧೆಯಿಂದ ಮಾಡು

ವಾಗ ಈ ತೆರನ ಫಲವು ದೊರಕುತ್ತದೆ. ಇದನ್ನು ಅರ್ಥಮಾಡಿಕೊಳ್ಳುವುದು ಸುಲಭ.

ಆದರೆ ಬೇರೆಯವರು ಧ್ಯಾನ ಮಾಡಿದರೆ, ರೋಗಿಯ ಮೇಲೆ ಪರಿಣಾಮವಾಗಬಹುದೇ ? ಬೇರೆಯವರು ಧ್ಯಾನ ಮಾಡದೇ ಇದ್ದರೂ, ಸ್ಥಳ ಮಹಾತ್ಮೆಯಿಂದ ರೋಗಿಯ ಮೇಲೆ ಸತ್ಪರಿಣಾಮವು ಸಾಧ್ಯವೇ ? ಸ್ಥಳ ಮಹಾತ್ಮೆ ಎಂದರೇನು ? ಭಕ್ತೋತ್ತಮರು, ಮನೋತೀತ ಕಾಲದ ಅನುಭವವನ್ನು ಹೊಂದಿದವರು, ಯಾವುದಾದರೂ ಒಂದು ಸ್ಥಳದಲ್ಲಿ, ಒಂದು ಕ್ಷೇತ್ರದಲ್ಲಿ, ಧ್ಯಾನವನ್ನು ಮಾಡಿದರೆ, ಅದರ ಫಲವು ಆ ಕ್ಷೇತ್ರದಲ್ಲಿ, ಆ ಸ್ಥಳದಲ್ಲಿ, ಬಹುಕಾಲ ಪ್ರಭಾವವನ್ನು ಬೀರುತ್ತದೆ ; ಅಂತಹ ಸ್ಥಳಕ್ಕೆ ಹೋದವರಿಗೂ ಆ ಸತ್ಪ್ರಭಾವದ ಪ್ರಯೋಜನವು ದೊರಕುತ್ತದೆ. ಈ ಫಲಿತಾಂಶವನ್ನು ಸ್ಥಳ ಮಹಾತ್ಮೆ ಎನ್ನುತ್ತಾರೆ.

ಇವೆರಡೂ ಸಾಧ್ಯ, ವಿರಳವಾಗಿಯಾದರೂ, ಇವುಗಳು ಇಂದಿನ ಲೋಕದಲ್ಲಿ, ಆಗೀದಾಗ್ಗೆ, ಪ್ರತ್ಯಕ್ಷವಾಗುತ್ತವೆ. ಅಂದರೆ ಧ್ಯಾನದ ಪ್ರಭಾವವು, ಒಂದು ದೇಹದಿಂದ ಇನ್ನೊಂದು ದೇಹಕ್ಕೆ ಸಾಗಿ, ಅಲ್ಲಿ ಕಾಲದ ಗತಿಯನ್ನು ಮಂದಗೊಳಿಸಬಹುದು. ಹಾಗೂ ಭಕ್ತೋತ್ತಮರ ಧ್ಯಾನದ ಪ್ರಭಾವವು, ಸುತ್ತಮುತ್ತಲಿನ ಪರಿಸರದಲ್ಲಿ, ಭಕ್ತರು ಸತ್ತ ಮೇಲೆ ಕೂಡ, ಉಳಿದಿರುತ್ತದೆ. ಆ ಸ್ಥಳಕ್ಕೆ ಹೋದವರ ಮೇಲೆ, ಹಲವಾರು ವರ್ಷಗಳಾದ ಮೇಲೆ ಕೂಡ, ಸತ್ಪರಿಣಾಮವನ್ನು ಉಂಟುಮಾಡುತ್ತದೆ, ಅಂದರೆ ಧ್ಯಾನದ ಪ್ರಭಾವವು, ಒಂದು ದೇಹದಿಂದ, ಇನ್ನೊಂದು ದೇಹಕ್ಕೆ ದೇಶ ಅಥವಾ Space ಇನಲ್ಲಿ ಪಸರಿಸುತ್ತದೆ. ಯಾವ ರೀತಿಯಲ್ಲಿ ಎಂಬುದು ಮಾನವನ ಇಂದಿನ ಜ್ಞಾನಾವಸ್ಥೆಯಲ್ಲಿ ತಿಳಿಯದು. ಆ ಪ್ರಭಾವವು, ಬೆಳಕು ಶಾಖಗಳಂತೆ, ಒಂದು ವಿಚಿತ್ರ ತೆರನ ಶಕ್ತಿಯೋ ? ಅದೂ ತಿಳಿಯದು. ಆದರೆ ಧ್ಯಾನದ ಪ್ರಭಾವವು Space ಅಥವಾ ದೇಶವನ್ನು ಸುಲಭವಾಗಿ ಅತಿಕ್ರಮಿಸುತ್ತದೆ ಎನ್ನಬೇಕು. ಅಲ್ಲದೆ ಧ್ಯಾನದ ಪ್ರಭಾವವು ಒಂದೇ ಸ್ಥಳದಲ್ಲಿ ಬಹುಕಾಲ (ಪಂಚಾಂಗದ ಅಥವಾ ಗಡಿಯಾರದ ಕಾಲ) ಮುಂದುವರಿಯಲೂಬಹುದು. ಹಾಗೆಂದಾಗ, ಧ್ಯಾನದ ಪ್ರಭಾವವು 'ಕಾಲ'ವನ್ನೂ ಅತಿಕ್ರಮಿಸುತ್ತದೆ ಎಂದಾಯಿತು.

ಕಾಲವನ್ನೂ ದೇಶವನ್ನೂ ಈ ರೀತಿ ಅತಿಕ್ರಮಿಸುವ ಧ್ಯಾನದ ಪ್ರಭಾವವು ನಿಮಿತ್ತವನ್ನೂ ಮೀರುವುದೇ ? ಅಥವಾ ನಿಮಿತ್ತವೇ ಅದಾಗಿ ಅದೊಂದು ಅಲೌಕಿಕವಾದ ಅನುಭವವೇ ? ಅತಿ ಗೂಢವಾದ ಪ್ರಶ್ನೆಯು ಇದು. ಪ್ರಶ್ನೆಯಾಗಿಯೇ ಇಂದೂ ಉಳಿದಿದೆ. ವಿಜ್ಞಾನದ ವಿಶ್ಲೇಷಣೆಗೆ ಇನ್ನೂ ಸಿಲುಕಿಲ್ಲ.

ಇಂತಹ ವಿಷಯಂಗಳನ್ನು ಹೇಳಿದರೆ ಸುಲಭವಾಗಿ ಯಾರೂ ನಂಬುವುದಿಲ್ಲ. ವಿಜ್ಞಾನಿಗಳಿಂದ ಸ್ಥಿರೀಕರಿಸಲ್ಪಟ್ಟ ನಿದರ್ಶನಗಳನ್ನು ಉಲ್ಲೇಖಿಸಬೇಕು. ಹಾಗೂ ಸಾಕ್ಷಾತ್ ಇಂತಹ ನಿದರ್ಶನಗಳನ್ನು ಕಂಡವರ ಹೇಳಿಕೆಗಳನ್ನು ಉಲ್ಲೇಖಿಸಬೇಕು. ಅದೇ ಪ್ರಯತ್ನವನ್ನು ಈಗ ಮಾಡುತ್ತೇನೆ.

## 2. ಧ್ಯಾನ, ಮತ್ತು ದೇಹದ ಕಾಲ

1. ಶಸ್ತ್ರ ಚಿಕಿತ್ಸೆಯನ್ನು ಮಾಡುವವರು ಸ್ವಲ್ಪ ಮಟ್ಟಿಗೆ ಕ್ರೂರ ಸ್ವಭಾವವನ್ನು ಹೊಂದಿದವರು ಎಂದು ಜನರ ನಂಬಿಕೆ. ಕಟುಕರು, ಚಾರ್ವಾಕರು, ಇತ್ಯಾದಿಗಳ ಹಿಂಡಿಗೆ ಸೇರಿದವರಿವರು ಎಂದು ಅಪವಾದವೂ ಇದೆ. ಆದರೆ ವಸ್ತುತಃ ಹಾಗಿಲ್ಲ. ಶಸ್ತ್ರ ಚಿಕಿತ್ಸೆಯು ಪುಟ್ಟದಾಗಲೀ ದೊಡ್ಡದಾಗಲೀ ಅನಿರೀಕ್ಷಿತವಾದ ಅಪಾಯಗಳು ಒದಗಬಹುದು. ಅತ್ಯಂತ ವಿರಳವಾಗಿ ಇಂತಹ ಅಪಾಯಗಳು ಸಂಭವಿಸುವುದಾದರೂ, ಯಾವಾಗ ಅದು ನನ್ನ ರೋಗಿಗೆ ಸಂಭವಿಸುತ್ತದೆಯೋ ಎನ್ನುವ ಭಯವು ಯಾವ ಶಸ್ತ್ರಚಿಕಿತ್ಸಕನಿಗೂ ತಪ್ಪಿದ್ದಲ್ಲ. ಸಾವಿರ ಶಸ್ತ್ರಚಿಕಿತ್ಸೆಗಳನ್ನು ಸುಸೂತ್ರವಾಗಿ ಮತ್ತು ಯಶಸ್ವಿಯಾಗಿ ಮಾಡಿರುವ ಸರ್ಜನನೂ ಸಾವಿರದೊಂದನೆಯ ಶಸ್ತ್ರ ಚಿಕಿತ್ಸೆಗೆ ತೊಡಗಿದಾಗ, ಆಳಮನಸ್ಸಿನಲ್ಲಿ ಸ್ವಲ್ಪ ಪುಕು ಪುಕು ಇದ್ದೇ ಇರುತ್ತದೆ. ಕೈಯಲ್ಲಿ ಚಾಕುವನ್ನು ಹಿಡಿದಾಗ, ಅವನ ಅಹಂಕಾರವೆಲ್ಲವೂ ಕರಗಿಹೋಗಿರುತ್ತದೆ. ಆಪರೇಷನ್ ಮುಗಿದ ಮೇಲೆ, ಸುರಕ್ಷಿತವಾಗಿ ರೋಗಿಯು ಎಚ್ಚೆತ್ತು, ತನ್ನ ವಾರ್ಡಿಗೆ ಹಿಂತಿರುಗಿದ ಮೇಲೆ, ಅಹಂಕಾರವು ಪುನಃ ಹಬ್ಬುತ್ತದೆ. ಲಕ್ಷಣವಾಗಿ, ಇತರ ಸರ್ಜನ್ನರು ಕರುಬುವಂತೆ, ಆಪರೇಷನ್ನನ್ನು ಎಷ್ಟು ಬೇಗ ಮಾಡಿ ಮುಗಿಸಿದೆ ಎನ್ನುವ ಅಹಂಕಾರವು ಹಬ್ಬಿ ಹರಡುತ್ತದೆ, ವ್ಯಕ್ತಿಯು ತುಂಬಾ. ಇದು ಸಾಮಾನ್ಯವಾದ ಹಣೇಬರಹ, ಸರ್ಜನರದು.

ಇಂತಹ ಸರ್ಜನ್ ಒಬ್ಬ ಹೊಟ್ಟೆಯಲ್ಲಿರುವ ಹುಣ್ಣಿಗೆ ಆಪರೇಷನ್ ಮಾಡತೊಡಗಿದ. ಅನಿಸ್ತೀಸಿಯಾ ಹದವಾಗಿತ್ತು. ಹೊಟ್ಟೆಯ ಮೇಲಿನ ಚರ್ಮ, ಮತ್ತು ಸ್ನಾಯುಗಳ ಪದರವನ್ನು ಕತ್ತರಿಸಿದ್ದ. ಹೊಟ್ಟೆಯಲ್ಲಿನ ಕರಳು ಕಾಣಿಸಿತು.

ಆಗ ಅನೀಸ್‌ತಟಿಸ್ಟ್ ಭಯದಿಂದ ಉಸುರಿದ: 'ಸರ್! ಉಸಿರಾಡು ವುದು ನಿಂತಿದೆ. ನಾಡಿಯು ಸಿಗುತ್ತಿಲ್ಲ. ಬ್ಲಡ್‌ಪ್ರೆಷರ್‌ಅನ್ನು ಅಳತೆ ಹಾಕು ವುದಕ್ಕಾಗುತ್ತಿಲ್ಲ. ಹೃದಯವು ಸ್ಥಬ್ಧವಾಗಿದೆ' ಎಂದು ಅಂದರೆ ರೋಗಿಯ ಆಟ ಮುಗಿಯಿತು!

ಅಂತಹ ಸಂದರ್ಭಗಳಲ್ಲಿ, ವಪೆಯನ್ನು ಹರಿದು, ಹೃದಯವನ್ನು ಅಂಗೈಯಿಂದ ಹಿಂಡಲಾರಂಭಿಸುವುದು ಆಗತ್ಯ ಕ್ರಮ. ಆಗ ಹೃದಯವು ಪುನಃ ಮಿಡಿಯಲಾರಂಭಿಸುವುದು ಸಾಧ್ಯ. ರೋಗಿಯ ಪ್ರಾಣವನ್ನು ಉಳಿಸಲು ಇದು ಕಟ್ಟಕಡೆಯ ಸಾಧನ. ಯೋಚಿಸಿ, ಇದನ್ನು ನುರಿತ ಸರ್ಜನ್ನರು ಮಾಡುವುದಿಲ್ಲ. ಎಂದಿನಿಂದಲೂ ಮನಗೂಡಿಬಂದ ಕೇವಲ ಅಭ್ಯಾಸ ಬಲದಿಂದ, ಯಾಂತ್ರಿಕವಾಗಿ ಸರ್ಜನ್ನರು ಈ ವಿಧಾನವನ್ನು ಅನುಸರಿಸುತ್ತಾರೆ.

ನೀಲಿಗಟ್ಟುತ್ತಿರುವ, ನಿಂತ ಉಸುರಿನ, ಇಂತಹ ರೋಗಿಯು ಸರ್ಜನ್ನನ ಆಯುಷ್ಯವನ್ನು ಹತ್ತಕ್ಕೆ ಒಂದರ ಪ್ರಮಾಣದಲ್ಲಿಯಾದರೂ ಕಡಿಮೆ ಮಾಡು ತ್ತಾನೆ. ಆ ಅನುಭವ ಅಷ್ಟು ಘೋರ.

ನಮ್ಮ ಸರ್ಜನ್ ವಪೆಯನ್ನು ಕ್ಷಣದಲ್ಲಿ ಹರಿದು ಹೃದಯವನ್ನು ಹಿಂಡ ತೊಡಗಿದ, ಯಂತ್ರದಂತೆ. ಕಲಿತ ವಿದ್ಯೆ, ಪಡೆದ ಅನುಭವ, ಹಾಗೂ ಸಹಜ ಮಾನವತೆ, ಇವೆಲ್ಲವೂ ಒಟ್ಟಾಗಿ ಕಾರ್ಯ ಮಾಡಲಾರಂಭಿಸಿದುವು. ಅವ, ಸರ್ಜನ್, ಎನ್ನುವ ಅರಿವೇ ಅವನಿಗಿರಲಿಲ್ಲ.

ಇಂತಹ ವಿಪರೀತ ಸಂದರ್ಭಗಳಲ್ಲಿ, ನಾಲ್ಕು ನಿಮಿಷಗಳ ಕಾಲ ಹೃದಯ ವನ್ನು ಹಿಂಡಬೇಕು. ಅಷ್ಟರೊಳಗೆ ಹೃದಯವು ಪುನಃ ಮಿಡಿಯಲಾರಂಭಿಸದೇ ಇದ್ದರೆ; ದೈವೇಚ್ಛೆ! ಎಂದು ಕೈಬಿಡಬೇಕು. ಎಂಬುದು ಸರ್ಜನ ಶಾಸ್ತ್ರದ ಸಿದ್ಧಾಂತ.

ನಿರಂಸಿನ ರೋಗಿಯ ಹೃದಯವನ್ನು ನಮ್ಮ ಸರ್ಜನ್ ಹಿಂಡ ಲಾರಂಭಿಸಿದ, ನಿಮಿಷಕ್ಕೆ 72 ರ ತಾಳದ ಗತಿಯಲ್ಲಿ. ಅಂತಹ ಅಪಾಯದ

ಅವಸ್ಥೆಯಲ್ಲಿ, ಒಂದೊಂದು ನಿಮಿಷವೂ ಒಂದು ಯುಗದಂತೆ ಭಾಸವಾಗುತ್ತದೆ. ನಾಲ್ಕು ನಿಮಿಷಗಳು ಮುಗಿದುವು, ಎಂಬುದು ನಮ್ಮ ಸರ್ಜನ್ನಿನ ಗಮನಕ್ಕೆ ಬರಲೇ ಇಲ್ಲ. ಹೃದಯವು ಮಿಡಿಯಲಾರಂಭಿಸಲಿಲ್ಲ ಎನ್ನುವುದೊಂದೇ ಅವನಿಗೆ ತಿಳಿದಿತ್ತು. ಸರ್ಜನ್ನನ ಸಹಾಯಕರೆಲ್ಲರೂ ವಿಭ್ರಾಂತರಾಗಿದ್ದರು. ಹಿರಿಯನಾದ ಸರ್ಜನ್ನಿಗೆ, ನಾಲ್ಕು ನಿಮಿಷಗಳು ಮುಗಿದುವು ಎಂದು ಹೇಳುವುದನ್ನು ಮರೆತರು. ಸರ್ಜನ್ನನನ್ನು ನೋಡುತ್ತಿದ್ದರೇ ವಿನಹಾ, ಗಡಿಯಾರವನ್ನು ನೋಡುವ ಯೋಚನೆಯೂ ಬರಲಿಲ್ಲ.

ಹದಿನೈದು ಹದಿನಾರು ನಿಮಿಷಗಳಾದ ಮೇಲೆ ರೋಗಿಯ ಹೃದಯವು ಮಿಡಿಯಲಾರಂಭಿಸಿತು. ಪುನರ್ಜೀವವನ್ನು ರೋಗಿಯು ಪಡೆದ, ಅಪರೇಷನ್ ಮುಗಿಯಿತು. ರೋಗಿಯು ತನ್ನ ವಾರ್ಡಿಗೆ ಹಿಂತಿರುಗಿದ.

ಸಹಾಯಕ ಕಿರು ಸರ್ಜನ್ನರು, ಆಗ ಹಿರಿಯನನ್ನು ಕೇಳಿದರು. 'ಸಾರ್! ನಾಲ್ಕು ನಿಮಿಷಗಳಕಾಲ ಹೃದಯವನ್ನು ಹಿಂಡಬೇಕು. ಅನಂತರ ನಿಷ್ಪ್ರಯೋಜಕ ಎಂದು ಎಲ್ಲಾ ಸರ್ಜರಿ ಪುಸ್ತಕಗಳೂ ಹೇಳುತ್ತವೆ. ಹದಿನೈದು ಹದಿನಾರು ನಿಮಿಷ ನೀವೇಕೆ ಮುಂದುವರೆಸಿದಿರಿ? ಹೀಗೆ ಮಾಡಬೇಕು, ಹೀಗೆ ಮಾಡಬಹುದು ಎಂದು ನಮಗೆ ತಿಳಿದೇ ಇರಲಿಲ್ಲ' ಎಂದು ಕುತೂಹಲದಿಂದ ಕೇಳಿದರು. ಅವರನ್ನು ಸರ್ಜನ್ ನೋಡಿದ, ಮುಗುಳ್ನಕ್ಕ.

'ಚಿರಂಜೀವಿಗಳೇ! ರೋಗಿಯ ಉಸಿರಾಟ ನಿಂತಿತು; ಹೃದಯ ಸ್ತಬ್ಧವಾಯಿತು ಎಂದು ಅನೀಸ್ತಟಿಸ್ಟ್ ಬಿಸಿಯುಸಿರಾದಾಗ, ನಾನು ದೇವರನ್ನು ಧ್ಯಾನ ಮಾಡಲಾರಂಭಿಸಿದೆ. 'ದೇವರೇ! ಈ ರೋಗಿಯ ಪ್ರಾಣವನ್ನು ಉಳಿಸು' ಎಂದು ಬೇಡಲಾರಂಭಿಸಿದೆ.' ಆಗ ಕಾಲದ ಅರಿವೇ ನನಗಿರಲಿಲ್ಲ. ಹದಿನೈದಲ್ಲ ಮೂವತ್ತೈದು ನಿಮಿಷಗಳಾಗಿದ್ದರೂ ರೋಗಿಯ ಹೃದಯವನ್ನು ಹಿಂಡುತ್ತಲೇ ಇರುತ್ತಿದ್ದೆನೇನೋ? ನನ್ನ ಹೃದಯವೂ ಆಗ ಹಿಂಡಿ ಹಿಂಡಿ ಹಿಪ್ಪೇಕಾಯಾಗಲಾರಂಭಿಸಿತ್ತು. ರೋಗಿಯ ಹೃದಯ ಪುನಃ ಮಿಡಿಯಿತು. ಆಗ ನಾನು ಸರ್ಜನ್ ಎಂಬ ಅರಿವು ಮರುಕಳಿಸಿತು. ಆ ತನಕ ಯಾರು ಏನನ್ನು ಯಾಕೆ ಮಾಡಿದರೋ, ಅದೊಂದೂ ಅರಿವಾಗಲಿಲ್ಲ. ರೋಗಿಯ ಹೃದಯ, ನನ್ನ ಹೃದಯ ಎಂಬ ವ್ಯತ್ಯಾಸವೇ ತಿಳಿಯಲಿಲ್ಲ. ಹಿಂಡುತ್ತಲೇ ಇದ್ದುವು ಅವೆರಡೂ. ಧ್ಯಾನವನ್ನು ಮಾತ್ರ ಮಾಡುತ್ತಿದ್ದೆ.

ನಿಸ್ವಾರ್ಥವಾದ ಧ್ಯಾನಕ್ಕೆ ದೇವರು ಉತ್ತರಿಸಿದ. ರೋಗಿಯು ಉಳಿದು ಕೊಂಡ. ನಿಮಿಷಗಳ ಲೆಕ್ಕವಾಗಲೀ, ಕಾಲದ ಗಮನವಾಗಲೀ, ಯಾವುದೂ ಇರಲಿಲ್ಲ. ನಾನು, ರೋಗಿ, ನಾವಿಬ್ಬರೂ ಇರುವ ಈ ಸ್ಥಳ, (space) ಇವುಗಳ ಅರಿವೇ ಇರಲಿಲ್ಲ.

'ಕಾಲ ಮತ್ತು ದೇಶ, ಇವುಗಳ ಅರಿವೇ ಇಲ್ಲದ, ನಾನೇ ಇರದ ಪರಿಸ್ಥಿತಿಯಲ್ಲಿ, ಏನು ಮಾಡಲಾಯಿತು, ಏಕೆ ಮಾಡಲಾಯಿತು ಎಂಬುದನ್ನು ಈಗ ನಾನು ಹೇಗೆ ವಿವರಿಸಲಿ?'

ಎಂದು ಹಿರಿಯ ಸರ್ಜನ್, ಕಿರಿಯರೆದುರಿಗೆ 'Confession' ಮಾಡಿದರು.

ಧ್ಯಾನದಿಂದ, Prayer ನಿಂದ ರೋಗಿಯು ಪುನರ್ಜನ್ಮ ಪಡೆದ, ಎಂಬುದನ್ನು ಯಾವ ಇಂದಿನ ವೈಜ್ಞಾನಿಕನೂ ಇತರ ಸಾಕ್ಷ್ಯಗಳಿಲ್ಲದೆ ಒಪ್ಪುವುದಿಲ್ಲ. ಆದರೆ ಸರ್ಜನ್ನಿನ ಅರಿವಿನಲ್ಲಿ ಧ್ಯಾನವೇ ರೋಗಿಯನ್ನು ಉಳಿಸಿತು. ಎಂಬ ವೈಯುಕ್ತಿಕ ನಂಬಿಕೆಯು ಧೃಢವಾಗಿ ಬೇರೂರಿತ್ತು. ಆತ ಮಾಡಿದ ಅತ್ಯುಗ್ರವಾದ ಧ್ಯಾನವು, ನಿಶ್ಚೇತನಾಗಿದ್ದ ರೋಗಿಯ ಹೃದಯವನ್ನು ಮಿಡಿಸಿತು. ಹೃದಯವನ್ನು ಹಿಂಡಿದುದು ಒಂದು ರೀತಿಯಲ್ಲಿ ಕೇವಲ ನಿಮಿತ್ತವಾಗಿತ್ತು ಎಂದು ಸರ್ಜನ್ನನ ನಂಬಿಕೆ.

ಕಾಲದ ದೃಷ್ಟಿಯಿಂದ ಇದನ್ನು ಹೀಗನ್ನಬೇಕು. ರೋಗಿಯ ಹೃದಯವು ಸ್ತಬ್ಧವಾಗಿತ್ತು. ಎಂದರೆ ಹೃದಯದ ಪಾಲಿಗೆ ಕಾಲವು ಸ್ತಬ್ಧವಾಗಿತ್ತು. ಲಬ್ ಡಪ್ ಎನ್ನುವ ಹೃದಯದ ತಾಳವು ನಿಂತುಹೋದರೆ ಕಾಲವು ಸ್ತಬ್ಧವಾದಂತೆ. ಹೃದಯದ ಘಟನೆಗಳೆರಡರ ಅಂತರವೇ ಹೃದಯದ ಕಾಲ. ಘಟನೆಗಳು ಆಗದೆ ಇದ್ದರೆ ಕಾಲವೂ ಸ್ತಬ್ಧ. ಸ್ತಬ್ಧವಾಗಿದ್ದ ಹೃದಯದ ಕಾಲವನ್ನು ಮತ್ತೆ ಚಲಿಸುವಂತೆ ಪ್ರಚೋದಿಸಿದ್ದು. ಸರ್ಜನ್ನನ ಧ್ಯಾನದ ಪ್ರಭಾವ. ಹೃದಯದ ಬಡಿತದ ಮೇಲೆ, ಔಷಧಿಗಳು ಮತ್ತು ಅಂಗೈಯಿಂದ ಹಿಂಡುವುದು, ಇತ್ಯಾದಿಗಳು. ಪ್ರಭಾವವನ್ನು ಮಾಡುತ್ತವೆ. ಆದರೆ 15 ನಿಮಿಷಗಳಾದನಂತರ ಧ್ಯಾನದ ಪ್ರಭಾವವು ಕಾಣಬಂತು, ಎಂದಾಗ ಹೃದಯದ 'ಕಾಲ' ಎಂದನ್ನುವುದು ಸೂಕ್ತ. ಏಕೆಂದರೆ 'ಕಾಲ' ಎನ್ನುವ

ಆದಿಮೂಲವಾದುದು. ಧ್ಯಾನ ಎನ್ನುವ ವೈಜ್ಞಾನಿಕ ಅರಿವಿಗೆ ಇನ್ನೂ ಸಿಗದ ಪ್ರಭಾವವು : ಇವೆರಡಕ್ಕೂ ಸಂಬಂಧವಿರುವುದು ವಿಚಾರ ಸಮ್ಮತ.

## 3. ಸ್ಥಳ ಮಹಾತ್ಮೆ ಮತ್ತು ಕಾಲ.

ಸ್ಥಳ ಮಹಾತ್ಮೆಯ ವಿಷಯದಲ್ಲಿ ಭಾರತದ ಪ್ರತಿಯೊಂದು ಕ್ಷೇತ್ರದಲ್ಲಿಯೂ, ಹಲವಾರು ದಂತ ಕತೆಗಳು ಪ್ರಚಾರದಲ್ಲಿವೆ. ದಂತ ಕತೆಗಳ ಹಂತದಲ್ಲಿವೆಯೇ ಹೊರತು, ಅನಾಸಕ್ತಿ ಹೊಂದಿದ ವಿಚಾರಪರರ ಸಾಕ್ಷ್ಯಗಳಿಂದ ಸ್ಥಿರೀಕರಿಸಲ್ಪಟ್ಟಿಲ್ಲ. ಹಾಗೆಂದ ಮಾತ್ರಕ್ಕೆ ಅವು ನಂಬಿಕೆಗೆ ಅರ್ಹವಲ್ಲ ಎಂದು ಹೇಳ ಬರುವುದಿಲ್ಲ.

ಆದರೆ ಫ್ರಾನ್ಸ್ ದೇಶದ ಪಿರನೀಸ್ ಬೆಟ್ಟಗಳ ಕ್ಲಿಬ್ಬಿಯಲ್ಲಿ, ಲೂರ್ಡ್ಸ್ [Lourdes] ಎಂಬ ಕ್ರಿಶ್ಚಿಯನ್ನರ ಯಾತ್ರಾ ಸ್ಥಳವಿದೆ. 1858 ರಲ್ಲಿ ಬರ್ನಡೆಟ್ ಸೂಬಿರೂಸ್ [Bernadette Soubirous] ಎಂಬ ಹೆಸರಿನ ಹಳ್ಳಿಯ ಹುಡುಗಿಗೆ, ಏಸುವಿನ ತಾಯಿಯಾದ ವರ್ಜಿನ್ ಮೇರಿ [Vergin Marry] ಯು ಪ್ರತ್ಯಕ್ಷಳಾದಳೆಂದು ವದಂತಿಯಿದೆ. ಇಂದಿಗೂ ರೋಗಗ್ರಸ್ತರು ಲೂರ್ಡ್ಸ್‌ಗೆ ಹೋಗಿ ಅತಿ ಶೀಘ್ರವಾಗಿ, ಆಶ್ಚರ್ಯಕರವಾಗುವಂತಹ ರೀತಿಯಲ್ಲಿ, ಗುಣ ಹೊಂದುತ್ತಾರೆ. ಲೂರ್ಡ್ಸ್‌ನಲ್ಲಿ ವೈದ್ಯಕೀಯ ಸಂಸ್ಥೆಯೊಂದಿದೆ. ಕಳೆದ ಏಳೆಂಟು ದಶಕಗಳಿಂದ, ಈ ಸಂಸ್ಥೆಯು ಬಂದ ರೋಗಗ್ರಸ್ತ ಯಾತ್ರಾರ್ಥಿಗಳ, ಸಂಪೂರ್ಣ ವರದಿಯನ್ನು ಶೇಖರಿಸಿಟ್ಟಿದೆ. ಆ ಸ್ಥಳಕ್ಕೆ ಬಂದಾಗ ಅವನ ಬೇನೆ ಏನು, ಅದರ ಚಿಹ್ನೆಗಳು ಯಾವುವು, ಇತ್ಯಾದಿಗಳನ್ನು ಬರೆದಿಡುತ್ತಾರೆ. ವರ್ಜಿನ್ ಮೇರಿ ಪ್ರತ್ಯಕ್ಷಳಾದ ಗ್ರಾಟೋದ ಬಳಿ ಇರುವ ಪುಷ್ಕರಿಣಿಯಲ್ಲಿ ರೋಗಿಗಳು ಸ್ನಾನಮಾಡುತ್ತಾರೆ. ಅನಂತರ ಅವರುಗಳ ದೇಹಸ್ಥಿತಿಯ ವರದಿಯನ್ನು ಪ್ರತಿದಿನವೂ ವೈದ್ಯರುಗಳು ಬರೆದಿಡುತ್ತಾರೆ. ಲೂರ್ಡ್ಸಿನ ವೈದ್ಯ ಸಂಸ್ಥೆಯಲ್ಲಿರುವ ವರದಿಗಳನ್ನು ಪ್ರಪಂಚದ ಯಾವ ವೈದ್ಯನಾದರೂ ಹೋಗಿ ಪರೀಕ್ಷಿಸಬಹುದು. ನೂರಾರು ಪ್ರಸಿದ್ಧ ಸದಸ್ಯರಿರುವ, ಅಂತರಾಷ್ಟ್ರೀಯ ವೈದ್ಯ ಸಂಘವೊಂದು ಲೂರ್ಡ್ಸ್‌ನಲ್ಲಿದೆ. ಆ ಸದಸ್ಯರೆಲ್ಲರೂ ಕುತೂಹಲದಿಂದ ಲೂರ್ಡ್ಸಿಗೆ ಬಂದ ರೋಗಿಗಳನ್ನು ಪರೀಕ್ಷಿಸಿ, ತಮ್ಮ ತಮ್ಮ ಅಭಿಪ್ರಾಯಗಳನ್ನೂ ಬರೆದಿಡುತ್ತಾರೆ. ಪ್ರಪಂಚದ ಎಲ್ಲ ಮೂಲೆಗಳಿಂದಲೂ ವೈದ್ಯರುಗಳು

ಹೋಗಿ ರೋಗಿಗಳು ಪವಾಡದ ರೀತಿಯಲ್ಲಿ ಗುಣ ಹೊಂದುವುದನ್ನು ಕಂಡು, ವಿಸ್ತಾರವಾದ ವರದಿಯನ್ನು ಬರೆದಿಟ್ಟಿದ್ದಾರೆ.

ಜಗತ್ಪ್ರಸಿದ್ಧನಾದ ಅಲೆಕ್ಸಿಸ್ ಕ್ಯಾರೆಲ್ [Alexis Carrel] ಎಂಬ ವೈದ್ಯನು (Tissue Culture) ಸ್ನಾಯುಗಳನ್ನು ದೇಹದ ಹೊರಗೆ, ಟೆಸ್ಟ್‌ಟ್ಯೂಬುಗಳಲ್ಲಿ ಬೆಳೆಸಿದ ಮೊದಲಿಗ. ಆಗಿನ ಕಾಲದಲ್ಲಿ ಪ್ರಚಂಡವಾದ ಈ ಸಾಧನೆಗೆ ನೊಬೆಲ್ ಪಾರಿತೋಷಕವನ್ನು ಅವನಿಗೆ ಕೊಟ್ಟು ಗೌರವಿಸಿದರು. Man the unknown ಎಂಬ ಆತನು ಬರೆದ ಪುಸ್ತಕದ ಕೋಟ್ಯಂತರ ಪ್ರತಿಗಳು ಪ್ರಪಂಚದ ಎಲ್ಲೆಡೆಯಲ್ಲೂ ಮಾರಾಟವಾಗಿವೆ.

ಆತ 1902 ರಲ್ಲಿ, ಇನ್ನೂ ಹಸಿ ಡಾಕ್ಟರಾಗಿದ್ದಾಗ ಲೂರ್ಡ್ಸ್‌ಗೆ ಹೋಗಿದ್ದ. ತಾನು ಪ್ರತ್ಯಕ್ಷ ಕಂಡ, ರೋಗಿಯೊಬ್ಬಳ ವರದಿಯನ್ನು ಅವ ಬರೆದಿಟ್ಟ. ಅದರ ಸಾರಾಂಶವನ್ನು ಇಲ್ಲಿ ನೀಡುತ್ತೇನೆ.

ಹರೆಯ ಪ್ರಾಯದ ಹೆಂಗಸು ರೋಗಿಯೊಬ್ಬಳನ್ನು ಸ್ಟ್ರೆಚರ್ ಮೇಲೆ ಹೊತ್ತುಕೊಂಡು ತಂದರು. ಕಳೆದ ಕೆಲವು ವರ್ಷಗಳಿಂದ ಆಕೆಯು ರೋಗಗ್ರಸ್ತಳಾಗಿದ್ದಳು. ಉದರ ಕ್ಷಯದಿಂದ ನರಳುತ್ತಿದ್ದ ಆಕೆಯ ಹೊಟ್ಟೆಯು ನೀರಿನಿಂದ ತುಂಬಿ, ಮಹೋದರವಾಗಿತ್ತು. ಕಾಲುಗಳಲ್ಲಿ ಶೋಭೆ ಅಂದರೆ ಊತವಿತ್ತು. ಏನನ್ನು ತಿನ್ನಲೂ ಆಕೆಗೆ ತುಂಬಾ ಪ್ರಯಾಸವಾಗುತ್ತಿತ್ತು. ಹೆಸರೇ ಸೂಚಿಸುವಂತೆ ಆಕೆಯ ಆರೋಗ್ಯವು ಕ್ಷಯಿಸಿ ಹೋಗುತ್ತಿತ್ತು. ಅಬ್ಬಾ ಎಂದರೆ ಇನ್ನೊಂದೆರಡು ತಿಂಗಳುಗಳಲ್ಲಿ ಆಕೆಯ ಸಾವು ಖಂಡಿತ ಎಂದು ವೈದ್ಯರ ಅಭಿಪ್ರಾಯ. ಆ ಕಾಲದಲ್ಲಿ ಕ್ಷಯರೋಗಕ್ಕೆ ಪರಿಣಾಮಕಾರಿಯಾದ ಯಾವ ಔಷಧಿಗಳೂ ಇರಲಿಲ್ಲ. ಆಕೆಯ ಆರೋಗ್ಯಸ್ಥಿತಿಯನ್ನು ಅಲೆಕ್ಸಿಸ್ ಕ್ಯಾರೆಲ್ ಕೂಡ ಪರೀಕ್ಷಿಸಿದ್ದ. ನಡೆಯುವುದು ಹಾಗಿರಲಿ, ಏಳಲೂ, ಕೂಡಲೂ ಕೂಡ, ಆ ರೋಗಿಗೆ ಆಗುತ್ತಿರಲಿಲ್ಲ. ರೋಗಿಗೆ ಅಷ್ಟು ಉಲ್ಬಣವಾದರೆ ಮನಸ್ಸು ಸನ್ನಿಯಿಂದ ಬಡಿದಂತಿರುತ್ತದೆ. ಆದಕಾರಣ ರೋಗಿಯು ಸ್ಪಷ್ಟವಾಗಿ ಮಾತನಾಡಲಾಗುತ್ತಿರಲಿಲ್ಲ. ಅಂದಮೇಲೆ ಮನಸ್ಸನ್ನು ಹತೋಟಿಯಲ್ಲಿಟ್ಟು ಧ್ಯಾನ ಮಾಡುವ ಪ್ರಶ್ನೆಯೇ ಇತ್ತಿಲ್ಲ.

ಕಡೆಯ ಪ್ರಯತ್ನ ಇದು, ನಾವು ಮಾಡಬೇಕಾದುದನ್ನೆಲ್ಲಾ ಮಾಡಿದೆವು ಎಂಬ ಸಮಾಧಾನವಾದರೂ ನಮಗಿರಲಿ ಎಂದು ಆಕೆಯ ತಾಯ್ತಂದೆಯರು

ಲೂರ್ಡ್ಸ್‌ಗೆ ಕರೆತಂದಿದ್ದರು. ಈ ಯಾತ್ರೆಯಿಂದ ರೋಗವು ವಾಸಿಯಾಗುತ್ತದೆ ಎಂದು ಅವರಿಗೂ ದೃಢ ನಂಬಿಕೆಯು ಇದ್ದಿರಲಿಲ್ಲವೇನೋ !

ಪುಷ್ಕರಣಿಯಲ್ಲಿ, ರೋಗಿಯನ್ನು ಮುಳುಗಿಸಿ ಎತ್ತಿದರು. ಸುತ್ತಲೂ ನೆರೆದಿದ್ದ ಯಾತ್ರಾರ್ಥಿಗಳು ಪೂರ್ಣ ನಂಬೂಗೆಯಿಂದ ಪ್ರಾರ್ಥನೆಯನ್ನು ಮಾಡುತ್ತಿದ್ದರು, ಎಂದಿನಂತೆ.

ಎರಡು ಮೂರು ದಿನಗಳಲ್ಲಿ, ಪುಷ್ಕರಣಿಯಿಂದ ರೋಗಿಯು, ಸ್ವಯಂ ತಾನೆ ನಡೆಯುತ್ತ ಹೊರಕ್ಕೆ ಬಂದಳು. ಹೊಟ್ಟೆಯಲ್ಲಿ (abdomen) ತುಂಬಿದ್ದ ನೀರೆಲ್ಲವೂ ಮಾಯವಾಗಿತ್ತು. ಕೈ ಕಾಲುಗಳ ಊತವು ಇಳಿದುಹೋಗಿತ್ತು. ಹಸಿವಾಗುತ್ತದೆ ಎಂದು ತಾನೇ ಕೇಳಿ ಆಹಾರವನ್ನು ಸೇವಿಸಿದಳು. ಸತ್ಯವಾನನನ್ನು ಸಾವಿತ್ರಿಯು ಉಳಿಸಿದಂತೆ, ಈ ರೋಗಿಯನ್ನು ಲೂರ್ಡ್ಸ್‌ನ ಪುಷ್ಕರಣಿಯ ಸ್ನಾನವು ಉಳಿಸಿತ್ತು.

ಪವಾಡದಂತಹ ಈ ಪರಿಣಾಮದ ವಿಶ್ಲೇಷಣೆಯನ್ನು ಮಾಡಲು ಯತ್ನಿಸೋಣ.

ಉದರ ಕ್ಷಯವು ಈ ರೋಗಿಯಲ್ಲಿ ಅತಿ ತೀವ್ರ ಹಂತಕ್ಕೆ ಮುಟ್ಟಿತ್ತು. ರೋಗವು ಅಷ್ಟು ಉಲ್ಬಣಿಸಿದ ಮೇಲೆ, ಆಗಿನಕಾಲದಲ್ಲಿ, ವಾಸಿಯಾಗುವುದು ಬಹಳ ದುಸ್ಸಾಧ್ಯ. ಅಸಾಧ್ಯ ಎಂದೇ ಅನ್ನಬೇಕು. ರೋಗವು ದೇಹಕ್ಕೆ ತಾಕಿದಾಗ, ಯಾವುದೇ ರೋಗವಾಗಲಿ ಅದಕ್ಕೆ ತಕ್ಕ ಪ್ರತಿಕ್ರಿಯೆಗಳನ್ನು ದೇಹದ ರಕ್ಷಣಾ ವ್ಯವಸ್ಥೆಯು ಏರ್ಪಡಿಸಿ, ರೋಗವನ್ನು ಗುಣಪಡಿಸುತ್ತದೆ. ಪ್ರಕೃತಿ ಸಹಜವಾದ ದೇಹದ ರಕ್ಷಣಾ ವ್ಯವಸ್ಥೆಗಳು ಪ್ರತಿಕ್ರಿಯೆಯನ್ನು ಸಾಕಷ್ಟು ಮಟ್ಟಿಗೆ ಮಾಡಲಾಗದೆ ಇದ್ದರೆ, ಆ ರೋಗವು ಉಲ್ಬಣಗೊಂಡು, ರೋಗಿಯು ಸಾಯುತ್ತಾನೆ.

ಲೂರ್ಡ್ಸ್‌ನ ಈ ರೋಗಿಯು ಗುಣ ಹೊಂದಿರುವುದು ಖಂಡಿತ. ಅಂದರೆ ದೇಹದ ರಕ್ಷಣಾ ವ್ಯವಸ್ಥೆಗಳು ಬಲುಚುರುಕಾಗಿ ಪ್ರತಿಕ್ರಿಯೆಯನ್ನು ಹೂಡಿವೆ. ಆದರೆ ಹಿಂದೆಂದೂ ಇಂತಹ ರೋಗ ನಿರ್ಮೂಲನವನ್ನು ಯಾರೂ ಕಂಡಿದ್ದಿಲ್ಲ. ಅದೂ ಅಲ್ಲದೆ, ಸಹಸ್ರಾರು ರೋಗಿಗಳನ್ನು ಕಂಡಿರುವ ವೈದ್ಯರುಗಳ ಅನುಭವದಲ್ಲಿ, ಇಂತಹ ಉಲ್ಬಣ ಸ್ಥಿತಿಯಲ್ಲಿದ್ದರೂ, ವಾಸಿಯಾಗಬೇಕಾದರೆ ಕೆಲವು ವರ್ಷಗಳಾದರೂ ಆಗಬೇಕು. ಆದರೆ ಈ ರೋಗಿಯಲ್ಲಿ ಆಕೆಯ ದೇಹದ

ರಕ್ಷಣಾ ವ್ಯವಸ್ಥೆಗಳು, ಕೇವಲ ಎರಡು ಮೂರು ದಿನಗಳಲ್ಲಿ ರೋಗವನ್ನು ಗುಣಪಡಿಸಿದೆ. ಈ ರೀತಿ ವಿಚಾರ ಮಾಡಬೇಕು.'

ಕಾಲದ ದೃಷ್ಟಿಯಿಂದ, ಈ ವಿಷಯವನ್ನು ಪರಿಶೀಲಿಸೋಣ.

ರೋಗವು ದೇಹವನ್ನು ಹೊಕ್ಕಿತು. ಇದೊಂದು ಸ್ಪಷ್ಟವಾದ ಘಟನೆ. ರೋಗವು ವಾಸಿಯಾಯಿತು. ಇದು ಇನ್ನೊಂದು ಸ್ಪಷ್ಟವಾದ ಘಟನೆ. ಘಟನೆಗಳವೆರಡರ ಅಂತರವು ರೋಗದ ಕಾಲ. ಸಾಮಾನ್ಯ ಅನುಭವದಲ್ಲಿ ಈ ಅಂತರವು, ರೋಗದ ಕಾಲವು ಆರೇಳು ವರ್ಷಗಳಾಗಿರುತ್ತದೆ. ಆದರೆ ಈ ರೋಗಿಯಲ್ಲಿ, ಲೂರ್ಡ್ಸ್‌ನಲ್ಲಿ ರೋಗದ ಕಾಲವು ವಿಪರೀತ ರಭಸದಿಂದ ಸಾಗಿದೆ. ಹಾಗಾಗಿ ಎರಡು ಮೂರು ದಿನಗಳಲ್ಲಿ ರೋಗವು ವಾಸಿಯಾಗಿದೆ.

ರೋಗವು ಉಲ್ಬಣಗೊಳ್ಳುತ್ತಿದ್ದಾಗ, ರಕ್ಷಣಾ ವ್ಯವಸ್ಥೆಗಳ ಕಾಲವು ಬಲು ನಿಧಾನ ಗತಿಯಲ್ಲಿ ಸಾಗುತ್ತಿತ್ತು. ಆದರೆ ಲೂರ್ಡ್ಸ್‌ನ ಪುಷ್ಕರಣೀ ಸ್ನಾನವಾದ ಮೇಲೆ ಅತಿ ರಭಸದಿಂದ ಹರಿಯತೊಡಗಿತು. ಏಕೆ ಈ ಸತ್ಪರಿಣಾಮವು ಆಯಿತು ? ವೈಜ್ಞಾನಿಕವಾಗಿ ಹೇಳಬೇಕಾದರೆ, ಗೊತ್ತಿಲ್ಲ ಎನ್ನಬೇಕು. ವಿಜ್ಞಾನವನ್ನು ಬದಿಗಿಟ್ಟು, ಸ್ಥಳಮಹಾತ್ಮ್ಯೆಯಿಂದ ಹೀಗಾಯಿತು ಎನ್ನಲೂಬಹುದು.

1858 ರಲ್ಲಿ ಲೂರ್ಡ್ಸ್‌ನ ಪವಿತ್ರತೆಯು ಪ್ರಾರಂಭವಾಯಿತು ಇತ್ತೀಚೆಗೆ ಇದು ನಡೆದುದರಿಂದ, ಇದರ ಸತ್ಯಾಂಶವನ್ನು ಯಾರೂ ಅಲ್ಲಗಳೆಯುವಂತಿಲ್ಲ, ಅನುಮಾನಿಸಬೇಕಿಲ್ಲ. ವರ್ಜಿನ್ ಮೇರಿತಾಯಿಯು ಪ್ರತ್ಯಕ್ಷವಾದ ಕಾಲದಲ್ಲಿ ಹೀಗಾಗಿದ್ದಾರೆ, ಆ ಮಹಾತಾಯಿಯ ಪ್ರಭಾವ ಎನ್ನಬೇಕು. ಬರ್ನಡೆಟ್ ಅಲ್ಲಿರುವಾಗ ಹೀಗಾಯಿತು ಎಂದರೆ, ನಿರ್ಮಲ ಮನಸ್ಸಿನ, ಆಕೆಯ ಧ್ಯಾನದಿಂದ ಅಥವಾ ಮಗು ಮುಗ್ಧ ಮನಸ್ಸಿನ ಆಕೆಯ ಪ್ರಾರ್ಥನೆಯಿಂದ ಹೀಗಾಯಿತು ಎನ್ನಬಹುದು. ಆದರೆ 1902 ರಲ್ಲಿ. ಅಂದರೆ 44 ವರ್ಷಗಳ ತರುವಾಯ ಈ ಪವಾಡವು ನಡೆಯಿತು ಎಂದರೆ ಸ್ಥಳಮಹಾತ್ಮ್ಯೆಯು ಕಾಲವನ್ನು ಮೀರಿ ಇನ್ನೂ ಪ್ರಭಾವವನ್ನು ಬೀರುತ್ತಿದೆ ಎನ್ನಬೇಕು. 1902 ರಲ್ಲಿ ಮಾತ್ರ ಅಲ್ಲ. 1972 ರಲ್ಲೂ ಲೂರ್ಡ್ಸ್‌ನಲ್ಲಿ ಇಂತಹ ಪವಾಡಗಳು ಇನ್ನೂ ನಡೆಯುತ್ತಿವೆ. ಅಂದರೆ ಸ್ಥಳ ಮಹಾತ್ಮೆಯು ಇಷ್ಟೂ ಕಾಲವನ್ನು ಮೀರಿದೆ. ಇನ್ನೂ ಪ್ರಭಾವೀಯಾಗಿದೆ.

ಈ ಮಹಾತ್ಮ್ಯೆಯೇ ದೇಹದ ರಕ್ಷಣಾ ವ್ಯವಸ್ಥೆಗಳ ಕೆಲಸವನ್ನು ಅತಿ ರಭಸದಿಂದ ನಡೆಸುವಂತೆ ಪ್ರಭಾವಿಸಿದೆ ಎನ್ನುವುದರಲ್ಲಿ ತಪ್ಪಿಲ್ಲ.

ಸ್ಥಳ ಮಹಾತ್ಮೆ ಎನ್ನುವುದು ವರ್ಜಿನ್ ಮೇರಿ ತಾಯಿಯು ಅಲ್ಲಿ ಪ್ರತ್ಯಕ್ಷಳಾದುದರಿಂದಲೋ ಅಥವಾ ನಿರ್ಮಲ ಮನಸ್ಸಿನ ಭಕ್ತಿ ಬರ್ನಡೆಟ್ಟಳ, ಪ್ರಾರ್ಥನೆ ಅಥವಾ ಧ್ಯಾನದಿಂದಲೋ, ಅಥವಾ ಎರಡೂ ಕೂಡಿಕೊಂಡಿದ್ದರಿಂದಲೋ, ಹೇಗೆ ಬೇಕಾದರೂ ಯಾರೂ ಅಭಿಪ್ರಾಯವನ್ನು ಹೊಂದಬಹುದು

ರೋಗಿಗೆ ಸ್ಥಳಮಹಾತ್ಮೆಯಲ್ಲಿ ಧೃಡನಂಬಿಗೆಯೇನೂ ಇದ್ದಿರಲಿಲ್ಲ. ಆದರೂ ಸ್ಥಳದ ಮಹಾತ್ಮೆಯು ಆಕೆಯಲ್ಲೂ ಈ ಸತ್ಪರಿಣಾಮವನ್ನು ಉಂಟುಮಾಡಿತು.

ಸ್ಥಳ ಮಹಾತ್ಮೆ ಎನ್ನುವುದು ಕಾಲವನ್ನು ಮೀರಿದ, ಆದರೆ ಆ ಸ್ಥಳಕ್ಕೇ ಸೀಮಿತವಾದ ಪ್ರಭಾವ. ಈ ಪ್ರಭಾವಕ್ಕೆ ಸಿಕ್ಕಿದರೆ, ದೇಹದ-ಕಾಲವು, ಆರೋಗ್ಯವಂತರಲ್ಲಿ ನಿಧಾನವಾಗಿ ಹರಿಯುತ್ತ, ಆಯುಃಪ್ರಮಾಣವನ್ನು ಹೆಚ್ಚಿಸುತ್ತದೆ. ಅನಾರೋಗ್ಯವಂತರಲ್ಲಿ, ಆರೋಗ್ಯ ಸ್ಥಿತಿಗೆ ಬಲು ಬೇಗ ಹಿಂತಿರುಗುವಂತೆ ಪ್ರಚೋದಿಸುತ್ತದೆ.

ಧ್ಯಾನ, ಅಥವಾ ಹೃದಯಾಂತರಾಳದ ಪ್ರಾರ್ಥನೆ, ಇವು ದೇಶ (Space) ವನ್ನು ಅತಿಕ್ರಮಿಸಿ, ಇತರರ ದೇಹದಲ್ಲಿ ಸತ್ಪರಿಣಾಮವನ್ನು ಮಾಡುತ್ತದೆ. ದೇಹದ-ಕಾಲದ ಮೇಲೆ ದೇಹಕ್ಕೆ ಅನುಕೂಲವಾಗುವಂತೆ ಪ್ರಭಾವವನ್ನು ಬೀರುತ್ತದೆ. ಧ್ಯಾನ ಎನ್ನುವ ಶಕ್ತಿ ಯಾವುದು ? ಯಾರೂ ಬಲ್ಲವರಿಲ್ಲ. ಆದರೆ ಅದರ ಪರಿಣಾಮವನ್ನು ಸ್ಪಷ್ಟವಾಗಿ ಕಾಣಬಹುದು. ದೇಹದ ವಿಧವಿಧ ಕಾಲಗತಿಯ ಮೇಲೆ ಧ್ಯಾನವು ಹತೋಟಿಯನ್ನು ಹೊಂದಿದೆ. ಆದರೆ ಧ್ಯಾನದ ಕಾಲಕ್ಕೆ ಬಂಧಿತವಾಗಿದೆ.

ಸ್ಥಳ ಮಹಾತ್ಮೆ ಎನ್ನುವುದೂ ದೇಹದ-ವಿಧವಿಧ ಕಾಲಗತಿಯ ಮೇಲೆ ಹತೋಟಿಯನ್ನು ಹೊಂದಿದೆ. ಆದರೆ ಸ್ಥಳಕ್ಕೆ ಬಂಧಿತವಾಗಿದೆ. ಕಾಲವನ್ನು ಅತಿಕ್ರಮಿಸಿದೆ.

ಧ್ಯಾನ ಮತ್ತು ಸ್ಥಳ ಮಹಾತ್ಮೆ ಇವೆರಡೂ ಒಂದೇ ತೆರನ ಶಕ್ತಿಗಳು, ಅಥವಾ ಪ್ರಭಾವಗಳು ಎಂದನ್ನಲು ಅಡ್ಡಿಯಿಲ್ಲ. ಮಾನವನ ಹಿಂದಿನ ಅರಿವಿನ

ಹಂತದಲ್ಲಿ ಇವನ್ನು ವಿಶ್ಲೇಷಿಸಿ, ಪ್ರಯೋಗಗಳನ್ನು ನಡಸಿ, ತಿಳಿಯಲುವಂತಿಲ್ಲ. ಮುಂದೆ, ಧ್ಯಾನವನ್ನು ಮಾಡಿದರೆ. ಸ್ಥಳ ಮಹಾತ್ಮೆ ಇರುವ ಸ್ಥಳದಲ್ಲಿ ಧ್ಯಾನವನ್ನು ಮಾಡಿದರೆ, ಈ ಶಕ್ತಿ ಅಥವಾ ಪ್ರಭಾವಗಳನ್ನು ವಿಜ್ಞಾನದ ಪ್ರಯೋಗಗಳಿಗೆ ಒಳಪಡಿಸುವುದು ಸಾಧ್ಯವಾಗಬೇಕು.

* * *

ಧ್ಯಾನವನ್ನು ಮಾಡಿದಾಗ, ಇತರರ ಮೇಲೆ, ಪ್ರಭಾವವನ್ನು ಬೀರಿಯೇ ಬೀರುತ್ತದೆ. ಇತರರ ದೇಹದ ಕಾಲವನ್ನು ಪ್ರಭಾವಿಸುತ್ತದೆ, ಎಂದು ಹೇಳ ಬರುವುದಿಲ್ಲ. ಪ್ರಭಾವವನ್ನು ಬೀರುವ ನಿದರ್ಶನಗಳಿದ್ದರೂ, ಅವು ಅತಿ ವಿರಳ. ಹಾಗೇಕೆ ಎಂಬುದನ್ನು ತಿಳಿಯಬೇಕಾದರೆ ಧ್ಯಾನದ ಸ್ವರೂಪವನ್ನು ತಿಳಿಯಬೇಕು. ಇದೇ ಇಲ್ಲದಿರುವಾಗ, ಹಾಗೇಕೆ? ಎನ್ನುವ ಪ್ರಶ್ನೆಯೆಲ್ಲಿ ಬಂತು?

ಸ್ಥಳ ಮಹಾತ್ಮೆಯೂ ಹಾಗೆಯೇ. ಆ ಸ್ಥಳಕ್ಕೆ ಹೋದವರ ಮೇಲೆಲ್ಲಾ ಸತ್ಪ್ರಭಾವವು ಆಗುವುದಿಲ್ಲ. ಅತಿ ವಿರಳವಾಗಿ ಕೆಲವರ ದೇಹ–ಕಾಲದ ಮೇಲೆ ಪವಾಡದಂತೆ ಪರಿಣಾಮವಾಗುತ್ತದೆ. ಇದು ಏಕೆ ಎನ್ನುವ ಪ್ರಶ್ನೆಗೆ ಉತ್ತರವು ದೊರಕಬೇಕಾದರೆ, ಸ್ಥಳ ಮಹಾತ್ಮೆಯ ಅರಿವು ವೈಜ್ಞಾನಿಕವಾಗಿ ಉಂಟಾಗ ಬೇಕು.

ಅತಿ ವಿರಳವಾಗಿ ಆಗುತ್ತದೆ, ಆದುದರಿಂದ ಕೇವಲ ಆಕಸ್ಮಿಕ ಎಂದನ್ನ ಬಹುದು. ಆದರೆ ಇಂತಹ ಆಕಸ್ಮಿಕಗಳು ಅಚ್ಚರಿ ತರುವ ರೀತಿಯಲ್ಲಿ ನಡೆದಾಗ, ಇವಕ್ಕೆ ಕಾರಣವೇನು ಎಂದು ಕುತೂಹಲವು ಉಂಟಾಗುತ್ತದೆ. ಕೇವಲ ಆಕಸ್ಮಿಕ ಎಂದು ತಳ್ಳಿ ಹಾಕುವುದು, ತಮೋಗುಣದ ಪ್ರಭಾವ. ಜ್ಞಾನಾರ್ಜನೆಯು ಕುತೂಹಲದಿಂದ ಪ್ರಚೋದಿಸಲ್ಪಟ್ಟಾಗ ಸತ್ವಗುಣವು ಪ್ರಧಾನವಾಗತೊಡಗಿರುತ್ತದೆ.

## 4. ಪ್ರಾರ್ಥನೆ; – ಧ್ಯಾನ – ಮತ್ತು ಮನೋಕಾಲ.

ಮನೋಕಾಲವು ಭಾವನೆಗಳನ್ನು ಅವಲಂಬಿಸುತ್ತದೆ ಎಂಬುದನ್ನು ತಿಳಿದೆವು. ದೇಹದ ಅನಾರೋಗ್ಯ ಸ್ಥಿತಿಯು ಭಾವನೆಗಳ ಮೇಲೆ ಪರಿಣಾಮ ವನ್ನುಂಟುಮಾಡುವುದರ ಮೂಲಕ ಮನೋಕಾಲವನ್ನು ವ್ಯತ್ಯಾಸ ಮಾಡ

ಬಹುದು. ಮನಸ್ಸಿನ ಆತಂಕ, ಕಳವಳ ಇತ್ಯಾದಿ ಪರಿಸ್ಥಿತಿಗಳೂ, ಭ್ರಮಾಕಾರಕ ಔಷಧಿಗಳು, ಮಾದಕ ಪದಾರ್ಥಗಳು ಇವೆಲ್ಲವೂ ಮನೋಕಾಲದ ಗತಿಯಲ್ಲಿ ಆಭಾಸವನ್ನುಂಟುಮಾಡಬಹುದು. ಇವೆಲ್ಲವನ್ನೂ ಹಿಂದೆಯೇ ಪರಿಶೀಲಿಸಲಾಯಿತು. ಮನೋಕಾಲದ ಗುಣಗಳನ್ನು ಅರಿತುದಾಯಿತು.

ಪ್ರಾರ್ಥನೆ ಮತ್ತು ಧ್ಯಾನದ ಪ್ರಭಾವವು ಮನೋಕಾಲದ ಮೇಲೆ ಯಾವ ಪರಿಣಾಮವನ್ನು ಉಂಟು ಮಾಡುತ್ತದೆ ಎಂಬುದನ್ನು ತಿಳಿಯಲೆತ್ನಿಸುವಾಗ ಮನಸ್ಸು ಮತ್ತು ಕಾಲ ಇವುಗಳ ಮೂಲ ಭೂತವಾದ ವಿಶ್ಲೇಷಣೆಯನ್ನು ಮಾಡುವುದು ಅಗತ್ಯ.

ಕಾಲ ಎನ್ನುವುದು ಘಟನೆಗಳೆರಡರ ಅಂತರ. ಮನಸ್ಸಿನಲ್ಲಿ ನಡೆಯುವ ಘಟನೆಗಳಾವುವು? ಮುಖ್ಯವಾಗಿ ಯೋಚನೆಗಳು ಮತ್ತು ಸ್ಮರಣೆಗಳು, ಇವುಗಳ ಅಂತರವನ್ನು 'ಕಾಲ' ಎನ್ನಬೇಕು.

ಯೋಚನೆಗಳು ಹೇಗೆ ಮೂಡುತ್ತವೆ?

1. ಹೊರ ಪ್ರಪಂಚದಿಂದ ಸುದ್ದಿಗಳನ್ನು ಪಂಚೇಂದ್ರಿಯಗಳ ಮೂಲಕ ಮನಸ್ಸು ಪಡೆಯುತ್ತದೆ. ಸ್ಮರಣೆಗಳೊಂದಿಗೆ ಈ ಸುದ್ದಿಗಳನ್ನು ಅನ್ವಯಿಸಿಕೊಂಡು, ಯೋಚನೆಗಳು ಮೂಡಲಾರಂಭಿಸುತ್ತವೆ. ಉದಾ:— ಪ್ರಾತಃಕಾಲದ ವ್ಯಾಯಾಮ ನಡಿಗೆಗೆಂದು ಒಬ್ಬಾತ ಹೊರಟಿರುತ್ತಾನೆ, ಊರಾಚೆಯ ರಸ್ತೆಯತ್ತ. ಅಲ್ಲಿ ಗಾಳಿಯು ನಿರ್ಮಲವಾಗಿರುತ್ತದೆ. ಹಾಗೂ ಆಟೋ ಇತ್ಯಾದಿ ಅಪಾಯಕರ ವಾಹನಗಳ ಭಯವು ಹೆಚ್ಚಿರುವುದಿಲ್ಲ. ಈ ಯೋಚನೆಗಳು ಅವನಲ್ಲಿ ಹೊಸದಾಗಿ ಮೂಡುವುದಿಲ್ಲ. ಹಳೆಯ ಅಭ್ಯಾಸ ಬಲದಿಂದಲೇ ಅವ ಹೊರಟಿರುತ್ತಾನೆ. ಸಣ್ಣ ಜೋಪಡಿಗಳಿಗಿರುವ ಒಂದೆಡೆಯಲ್ಲಿ ಪುಟ್ಟ ಹೋಟೆಲು ಒಂದಿರುತ್ತದೆ. ತುಂಬಾ ಕೊಳಕಾಗಿ ಕಾಣುವ ಹೋಟಲು ಎಷ್ಟೋ ಸರ್ತಿ ಕಂಡಿರುತ್ತಾನೆ. ಅಲ್ಲಿಗೆ ಹೋಗಿ ತಿನ್ನಬೇಕು ಎನ್ನುವ ಯೋಚನೆಯು ಇರುವುದಿಲ್ಲ. ಆದರೆ ಒಂದು ಬೆಳಿಗ್ಗೆ ಆ ಹೋಟಲು ಮುಂದೆ ಇರಿಸಲ್ಪಟ್ಟಿರುವ ಜಾಹೀರು ಬೋರ್ಡಿನಲ್ಲಿ, ಪೊಂಗಲ್ ಚಟ್ನಿ ಎಂದು ಬರೆದಿರುವುದನ್ನು ಕಾಣುತ್ತಾನೆ. ಅದನ್ನು ಕಂಡಾಗ, ಆ ಬರಹವು ಕಣ್ಣಿನ ಮೂಲಕ ಸಾರಿ ಮನಸ್ಸನ್ನೂ ತಟ್ಟಿ, ಹಿಂದೆ ಒಮ್ಮೆ ತಿಂದಿದ್ದ ಬಲು ರುಚಿಯಾಗಿದ್ದ ಪೊಂಗಲ್ ಚಟ್ನಿಯ ಸ್ಮರಣೆಯನ್ನು ಉದ್ರೇಕಿಸುತ್ತದೆ. ಇವತ್ತು

ಭಾಸವಾಗಿ, ಮನೆಯಲ್ಲಿ ಪೊಂಗಲ್ ಚಟ್ನಿಯನ್ನು ಮಾಡಿಸಬೇಕು, ಎನ್ನುವ ಆಸೆಯು, ಯೋಚನೆಯನ್ನು ನಿರ್ಧಾರವನ್ನಾಗಿ ಧೃಢವಮಾಡಿಸುತ್ತದೆ. ಪೊಂಗಲ್ ಚಟ್ನಿಯು ಯೋಚನೆಯು ಧೃಡವಾಯಿತು. ಮನೆಗೆ ಹಿಂತಿರುಗಿ ಕಾಡಿಬೇಡಿ, ಪೊಂಗಲ್ ಚಟ್ನಿಯನ್ನು ಮಾಡಿಸಿ ತಿಂದಾಗ, ಈ ಯೋಚನೆಯು ಮುಕ್ತಾಯವಾಯಿತು. ಈ ಅಂತರದ ಕಾಲದಲ್ಲಿ ಮನಸ್ಸು ಪೊಂಗಲ್ ಚಟ್ನಿಯನ್ನು ಸಂಪೂರ್ಣವಾಗಿ ಮರೆಯುವುದೇ ಇಲ್ಲ, ಎಂಕ್ಕ ದೈನಂದಿನ ಕೆಲಸಗಳಲ್ಲಿ ನಿರತನಾಗಿದ್ದರೂ, ಮನಸ್ಸಿನ ಹಿನ್ನೆಲೆಯಲ್ಲಿ ಪೊಂಗಲ್ ಚಟ್ನಿಯು ಘಮ ಘಮಿಸುತ್ತಲೇ ಇರುತ್ತದೆ. ಯೋಚನೆಯು ಧೃಡವಾದುದು, ಕಾರ್ಯಗತವಾದುದು, ಈ ಎರಡು ಘಟನೆಗಳ ಅಂತರದ ಮನೋಕಾಲವನ್ನು ಪೊಂಗಲ್ ಚಟ್ನಿಯ ಮನೋಕಾಲ ಎಂದು ಗುರುತಿಸಿದರೆ ತಪ್ಪಿಲ್ಲ. ಗಡಿಯಾರದ ಕಾಲದೊಂದಿಗೆ ಇದು ಸಹ ಜೀವಿಸುತ್ತದೆ.

ಇದರಂತೆಯೇ ಸ್ಮರಣೆಗಳು ಕೂಡ. ಸುಖವಿತ್ತಿದ್ದ ಸ್ಮರಣೆಯೊಂದನ್ನು ನೆನಪಿಗೆ ತಂದುಕೊಂಡು ಮನಸ್ಸು ಹಗಲುಗನಸಿನ ಕಾಮ್ನ ಕೋಟೆಗಳನ್ನು ಕಟ್ಟಲಾರಂಭಿಸುತ್ತದೆ. ಆಕಾಶದಲ್ಲಿ ಮೋಡಗಳು ಗಂಧರ್ವನಗರವನ್ನು ಹೇಗೆ ರಚಿಸುತ್ತವೋ, ಹಾಗೆಯೇ ಹಗಲುಗನಸುಗಳೂ ಕೂಡ. ಆದರೆ ಹಗಲುಗನಸುಗಳ ಕಾಲವು, ಗಡಿಯಾರದ ಕಾಲದೊಂದಿಗ ಯಾವ ಸಂಬಂಧವನ್ನೂ ಹೊಂದಿರುವುದಿಲ್ಲ. ಅನುಭವದ ದೃಷ್ಟಿಯಿಂದ, ಯೋಚನೆಗಳು ಮೂಡುವಾಗ, ಶಿಸ್ತಿನಿಂದ ವಿಚಾರಪೂರ್ವಕವಾಗಿ ಒಂದರ ಹಿಂದೆ ಒಂದು ಕ್ರಮವಾಗಿ ಬರುವುದಿಲ್ಲ. ಯೋಚನೆಗೆ ನಿಕಟ ಸಂಬಂಧವನ್ನು ಹೊಂದದ ಇತರ ಯೋಚನೆಗಳು ತಲೆಹಾಕುತ್ತವೆ. ಪೊಂಗಲ್ ಚಟ್ನಿಯ ಯೋಚನೆಯ ನಿದರ್ಶನವನ್ನು ಪರೀಕ್ಷಿಸೋಣ: ಪೊಂಗಲ್ ಚಟ್ನಿ ಎಂಬ ಜಾಹೀರು ಬೋರ್ಡನ್ನು ನೋಡಿದಾಗ, ಅದನ್ನು ಮನೆಯಲ್ಲಿ ಮಾಡಿಸಿ ತಿನ್ನಬೇಕು ಎಂಬ ಆಸೆ ಧೃಡವಾಯಿತು. ಪೊಂಗಲ್-ಚಟ್ನಿಯನ್ನು ಹಿಂದೆ ತಿಂದಿದ್ದ ಸ್ಮರಣೆಯೂ ನ್ಯಾಯವಾಗಿ ನೆನಪಿಗೆ ಬಂತು. ಆದರೆ ಪೊಂಗಲ್-ಚಟ್ನಿ ಎಂದು ಮನಸ್ಸಿಗೆ ತೋರಿದಾಗ, ಪೊಂಗಲ್ ಹಬ್ಬದಲ್ಲಿ ಕುಸುರಿಕಾಳು ಮತ್ತು ಎಳ್ಳು ಬೆಲ್ಲವನ್ನು ಬೀರಿದ ತುಳಜಾಬಾಯಿಯ ನೆನಪೂ ಎಚ್ಚೆತ್ತಿತು. ಅವಳ ಗಂಡ ಭಾರೀ ಮನೆಯನ್ನು ಕಟ್ಟಿಸಿದ್ದೂ ಸ್ಮರಣೆಗೆ ಏರಿ ಬಂತು. ನಾನೂ

ಒಂದು ಮನೆಯನ್ನು ಆ ಕಾಲದಲ್ಲಿ ಕಟ್ಟಿಸಿಕೊಂಡಿದ್ದರೆ ಎನ್ನುವ ಯೋಚನೆಯೂ ಮೂಡಿತು. ಯೋಚನೆಯ ಸೆರಗಿನಂಚನ್ನು ಹಿಡಿದು ಇನ್ನೊಂದು ಯೋಚನೆಯು ಅನಗತ್ಯವಾಗಿ, ಹಾಗೂ ಸ್ವಾಭಾವಿಕವಾಗಿ ಮೂಡುತ್ತದೆ.

ಆದುದರಿಂದಲೇ ಮನಸ್ಸನ್ನು ಚಂಚಲ ಎನ್ನುವುದು. ಮನವು ಮರ್ಕಟದಂತೆ ಕೋತಿ ಚೇಷ್ಟೆಯನ್ನು ಆಡುತ್ತದೆ ಎನ್ನುವುದು.

ಯೋಚನೆಗಳು, ಮನಸ್ಸಿನಲ್ಲಿ ಮೂಡುವುದು; ಕಾರ್ಯಗತವಾಗಿ, ಮುಗಿಯುವುದು, ಇವುಗಳ ಅಂತರವೇ ಮನೋಕಾಲ. ಕಾರ್ಯಗತವಾಗಿ ಮುಗಿಯದೇ ಇದ್ದರೂ, ಪ್ರಯತ್ನಪಟ್ಟು, ಅದು ಸಾಧ್ಯವಾಗದಿದ್ದರೆ, ಆಗ ಯೋಚನೆಯು ಸತ್ತು ಹೋದಂತೆಯೇ. ಆದರೆ ಮನೋಕಾಲದ ದೃಷ್ಟಿಯಿಂದ ಯೋಚನೆಯ ಸಾಫಲ್ಯತೆಯು ಅಥವಾ ನಿರೀಕ್ಷಿಸಿದ ಫಲವು ಮುಖ್ಯವಲ್ಲ. ಯೋಚನೆಯ ಹುಟ್ಟು-ಸಾವು; ಅಥವಾ ಆದಿ ಅಂತ್ಯ; ಇವುಗಳ ಅಂತರವು ಪ್ರಾಮುಖ್ಯವಾದುದು. ಈ ಅಂತರವು ಇತರ, ಅನಗತ್ಯ ಯೋಚನೆಗಳಿಂದ ಅಡ್ಡಾದಿಡ್ಡಿ ಎಳೆಯಲ್ಪಡದೇ ಇದ್ದರೆ, ಆಗ ಮನೋಕಾಲವು ನೇರವಾಗಿ, ಅಂಬಿನಂತೆ ಧಾವಿಸಲು ಸಾಧ್ಯ. ಆಗ ಯೋಚನೆಯ ಪ್ರೇರಕವಾದ ಇಷ್ಟಾರ್ಥವು ಸಿದ್ಧಿಸುವುದು ಸುಲಭ, ಹಾಗಾಗದೆ, ಸಾಮಾನ್ಯವಾಗಿ ಆಗುವಂತೆ, ಮನಸ್ಸು ಚಂಚಲವಾಗಿ ಹರಿಯ ತೊಡಗಿದರೆ, ಮನೋಕಾಲವೂ ಸರ್ಪದಂತೆ, ಅತ್ತ ಇತ್ತ ಸರಿಯುತ್ತ ಮುನ್ನಡೆಯಬೇಕು. ಇಷ್ಟಾರ್ಥವು ಸಿದ್ಧಿಸುವುದೂ ಕಷ್ಟ, ಮತ್ತು ವಿಳಂಬ.

ಪ್ರಾರ್ಥನೆ [Prayer] ಯನ್ನು ಮಾಡುವಾಗ ಮನೋಕಾಲವನ್ನು ಅಡ್ಡಾದಿಡ್ಡಿ ಹರಿಯದಂತೆ ಮಾಡಲು ಯತ್ನಿಸಲಾಗುತ್ತದೆ. ಬಹು ಪಾಲು ಬಹಳಷ್ಟು ಜನರಲ್ಲಿ, ಮನೋಕಾಲದ ಅಡ್ಡಾದಿಡ್ಡಿಯು ಹತೋಟಿಗೆ ಬರುವುದಿಲ್ಲ.

ಅತ್ಯಂತ ಹಿರಿಯರಾಗಿದ್ದರೂ, ಸಾಕಷ್ಟು ಪರಿಚಯವಿದ್ದ, ಒಬ್ಬರ ನಿದರ್ಶನವನ್ನು ನೀಡಿದರೆ, ಮೇಲೆ ಹೇಳಿದುದು ಸುಲಭವಾಗಿ ತಿಳಿಯುತ್ತದೆ.

ರೂಪಾಯಿನ ಮೌಲ್ಯವು ರೂಪಾಯಾಗಿದ್ದ ಕಾಲದಲ್ಲಿ ಅವರು 1400 ರೂಪಾಯಿಗಳ ಸಂಬಳವನ್ನು ಪಡೆಯುತ್ತಿದ್ದರು. ಅದರ ಮೌಲ್ಯವು ಇಂದು

1972 ರಲ್ಲಿ 14,000 ರೂಪಾಯಿಗಳು ಎನ್ನಬಹುದು. ಇಷ್ಟನ್ನೂ ಆತ ಬಡ ವಿಧ್ಯಾರ್ಥಿಗಳ ಅಭ್ಯಾಸಕ್ಕಾಗಿ ಮೀಸಲಿರಿಸಿದ್ದ. ಅಂದರೆ ಹೇಗೆ ಜಬರ್ದಸ್ತಿ ಜೀವನವನ್ನು ಸಾಗಿಸಲು ಸಾಧ್ಯ? ಆತನ ತಂದೆ ಲಕ್ಷಾಂತರ ರೂಪಾಯಿಗಳ ಆಸ್ತಿಯನ್ನು ಒಬ್ಬನೇ ಮಗನಿಗೆ ಬಿಟ್ಟು ಹೋಗಿದ್ದ. ಪಿತ್ರಾರ್ಜಿತವಾದ ಆಸ್ತಿಯ ವರಮಾನವು, ಇಂತಹ ನಾಲ್ಕಾರು ಹಿರಿಯಧಿಕಾರಿ ಗಳನ್ನು, ಸೂಕ್ತ ದರ್ಪದಲ್ಲಿ ನಡೆಸಲು ಸಾಕಾಗುತ್ತಿತ್ತು. ತಂದೆಯು ವೈದೀಕ ಬ್ರಾಹ್ಮಣ. ವ್ಯವಹಾರದಲ್ಲಿ ಕುಶಲ, ಗಳಿಸಿದ ಹಣವನ್ನು ಗಂಟು ಹಾಕಿ, ಲೇವಾದೇವಿಯನ್ನು ವಿಚಕ್ಷಣೆಯಿಂದ ಮಾಡಿ ಶ್ರೀಮಂತನಾಗಿದ್ದ.

ಇಷ್ಟೆಲ್ಲಾ ಸದ್ಗುಣಗಳಿದ್ದ ಮಗ, ಹಿರಿಯಧಿಕಾರದಲ್ಲಿದ್ದರೂ, ದಿನಾಗಲೂ ನೂರೆಂಟು ಸೂರ್ಯನಮಸ್ಕಾರಗಳನ್ನು ಹಾಕಿದಮೇಲೆ, ಕಾಫಿ ಕುಡಿಯುತ್ತಿದ್ದ. ವೈಧಿಕತನವನ್ನು ಇಷ್ಟರಮಟ್ಟಿಗೆ ಕಾಪಾಡುತ್ತಿದ್ದ. ಆದರೆ ಆತನ ಮೇಲೆ ಒಂದು ಟೀಕೆಯು ಪ್ರಚಲಿತವಾಗಿತ್ತು. ಒಂದೊಂದು ಸೂರ್ಯ ನಮಸ್ಕಾರವನ್ನು ಹಾಕುವಾಗಲೂ ತನ್ನ ಇಲಾಖೆಯ ಒಬ್ಬ ನೌಕರನನ್ನು ಆ ದಿನ ಛೇಡಿಸಬೇಕು, ಬೈಯಬೇಕು ಅಥವಾ ಶಿಕ್ಷಿಸಬೇಕು, ಎಂದು ಜನಿವಾರಕ್ಕೆ ಗಂಟು ಹಾಕುತ್ತಿದ್ದ. ಕಚೇರಿಗೆ ಹೋದ ಮೇಲೆ, ಕಾರ್ಯಗತ ಮಾಡುತ್ತಿದ್ದ; ಎಂಬ ಟೀಕೆ. ಅತ್ಯುಗ್ರ ಅಧಿಕಾರಿಯಾಗಿದ್ದವ ಮುಂಗೋಪಿಯೂ ಕೂಡ. ಆದಕಾರಣ ನಂಬಬಹುದಾದ ಟೀಕೆ. ಸ್ವಲ್ಪ ಮಟ್ಟಿಗೆ ಉತ್ಪ್ರೇಕ್ಷೆಯಿಂದ ಕೂಡಿದ್ದರೂನೂ.

ಕಠಿಣ ವ್ರತದಂತೆ ಸೂರ್ಯನಮಸ್ಕಾರವನ್ನು ಹಾಕುವಾಗ, ಮನಸ್ಸು ಸೂರ್ಯದೇವನಲ್ಲಿ, ಸವಿತರ್ವರೇಣ್ಯನಲ್ಲಿ ಮಗ್ನವಾಗಿರಬೇಕು. ಆಗ ಕಛೇರಿಯ ನೌಕರರು, ಅವರುಗಳು ಮಾಡಬಹುದಾದ ತಪ್ಪು; ಅದಕ್ಕೆ ತಕ್ಕ ಶಿಕ್ಷೆ ಇವೆಲ್ಲವನ್ನೂ ಯೋಚಿಸುತ್ತಿದ್ದರೆ, ಸೂರ್ಯನಮಸ್ಕಾರವನ್ನು ಮಾಡಿದುದರಿಂದ ಏನು ಪುಣ್ಯ? ಪ್ರಯೋಜನವೇನೋ ಉಂಟು. ವ್ಯಾಯಾಮ ಮಾಡಿದಂದರ ದೈಹಿಕ ಪ್ರಯೋಜನ ಅಷ್ಟೇ.

ಸದ್ಬುದ್ಧಿಯಿಂದ ಪ್ರಾರ್ಥನೆಯನ್ನು ಬಿಡದೆ ಮಾಡುತ್ತಿದ್ದರೂ, ಮನಸ್ಸು ಅಡ್ಡಾದಿಡ್ಡಿಯಾಗಿ ವ್ಯಾವಹಾರಿಕ ವಿಷಯಗಳತ್ತ ಸೆಳೆಯಲ್ಪಡುತ್ತದೆ ಎನ್ನುವು ದಕ್ಕೆ ಇದೊಂದು ಲಕ್ಷಣವಾದ ನಿದರ್ಶನ!

ಮನೋಕಾಲವು ಸರ್ಪದಂತೆ ವಕ್ರವಕ್ರವಾಗಿ ಇಂತಹ ಪರಿಸ್ಥಿತಿಯಲ್ಲಿ ನಡೆಯುತ್ತದೆ ಎನ್ನಲಡ್ಡಿಯಿಲ್ಲ. ಆದರೆ ಪ್ರಾರ್ಥನೆಯನ್ನು ಸಾಧಿಸಿದರೆ, ನಿರಂತರವಾಗಿ ಅಭ್ಯಾಸ ಮಾಡತೊಡಗಿದರೆ, ಮನಸ್ಸನ್ನು ಹತೋಟಿಯಲ್ಲಿಡಲು, ಕಾಲಕ್ರಮೇಣ ಸಾಧ್ಯವಾಗುತ್ತದೆ. ಅಂದರೆ ಆಗ ಮನೋಕಾಲವು ನೇರವಾಗಿ, ಸರಾಗವಾಗಿ ಹರಿಯಲಾರಂಭಿಸುತ್ತದೆ. ಆಗ ಇಂದ್ರಿಯಗಳಿಂದ ಬಂದ ಸುದ್ದಿಯಾಗಲೀ ಸ್ಮರಣೆಯಿಂದ ಎದ್ದ ಕಾರ್ಯಗಳಾಗಲೀ ಭಾವನೆಗಳಾಗಲೀ, ಮನಸ್ಸನ್ನು ತಳಮಳಿಸುವುದು ಕಡಿಮೆಯಾಗುತ್ತದೆ. ಮನೋಕಾಲದ ಮೇಲೆ ಪ್ರಾರ್ಥನೆಯ ಪ್ರಭಾವವು ಈ ರೀತಿ ಸತ್ಫಲವನ್ನು ನೀಡುತ್ತದೆ.

ಧ್ಯಾನವು ಪ್ರಾರ್ಥನೆಯ ಅತ್ಯುನ್ನತ ಹಂತ. ಮನಸ್ಸು ಈ ಸ್ಥಿತಿಯಲ್ಲಿ ಚಂಚಲತೆಯನ್ನು ತಪ್ಪಿಸಿಕೊಂಡಿರುತ್ತದೆ. ಮನೋಕಾಲವು ಅಂಬಿನಂತೆ ಸರಾಗವಾಗಿ, ಒಂದೇ ಗತಿಯಲ್ಲಿ ಸಾಗುತ್ತಿರುತ್ತದೆ. ಇಂದ್ರಿಯಗಳ ಮೂಲಕ ಜನಿಸುವ ಆಸೆಗಳನ್ನೂ ಮತ್ತು ಮನಸ್ಸಿನಲ್ಲಿ ಕಾಣಬರಬಹುದಾದ ಇತರ ಎಲ್ಲವನ್ನೂ, (ಪ್ರಜಾಹಾತಿ) ಕಿತ್ತೊಗೆದು ; ಧ್ಯಾನವನ್ನು ಮಾಡಿದರೆ. ಅಂತಹವನನ್ನು ಸ್ಥಿತಪ್ರಜ್ಞ ಎಂದು ಕರೆಯುತ್ತಾರೆ. ಇಂತಹ ಸ್ಥಿರವಾದ ಮನಸ್ಸುಳ್ಳವನು, ಮನಸ್ಸಿನ ಅಂತಃಪುರದಲ್ಲಿ ಇರುವ, ಮನಸ್ಸನ್ನು ಅಗೋಚರವಾಗಿ ನಡಸುವ, ಆದಿಮೂಲ ಶಕ್ತಿಯನ್ನು [Primordial cause] ಅರಸಲು ಸಾಧ್ಯ. ಕಡೆಗೊಮ್ಮೆ ಅರಿಯಲು ಸುಲಭ. ಇಂತಹ ಅರಿಯುವಿಕೆಯು, ಈ ತೆರನ ಪ್ರಜ್ಞೆಯು, ಮಾತುಗಳಿಂದ ವರ್ಣಿಸಲಾಗದಂತಹ ತುಷ್ಟಿ ಅಥವಾ ತೃಪ್ತಿಯನ್ನು ನೀಡುತ್ತದೆ. ಹೀಗೆಂದು ಹಿರಿಯರು ಸ್ವಾನುಭವದಿಂದ ನುಡಿದಿದ್ದಾರೆ.

ಅಂದರೆ ಮನೋಕಾಲವನ್ನು ನೇರ ಚಲಿಸುವ ಅಂಬಿನಂತೆ ಪ್ರವಹಿಸುವಂತೆ, ಮನಸ್ಸನ್ನು ಧ್ಯಾನದಿಂದ ಅಣಿ ಮಾಡಿದರೆ, ಆಗ ಅನಾದ್ಯನಂತವಾದ [Eternity] ಕಾಲದ ಅನುಭವವನ್ನು ಪಡೆಯಬಹುದು. ಮನೋಕಾಲವನ್ನೂ, ಮನೋಽತೀತ ಕಾಲವನ್ನೂ ಒಕ್ಕೂಡಿಸಬಹುದು ಅಥವಾ ಮನೋಕಾಲವನ್ನು ಮನೋಽತೀತ ಕಾಲಕ್ಕೆ ಪರಿವರ್ತಿಸಬಹುದು. ಮನೋಕಾಲದ ಮೇಲೆ ಧ್ಯಾನವು ಮೂಡಿಸುವ ಸತ್ಪರಿಣಾಮಗಳಲ್ಲಿ, ಇದು ಅತಿ

ಶ್ರೇಷ್ಠವಾದುದು. ಮುಂದಿನ ಅಧ್ಯಾಯದಲ್ಲಿ ಈ ಶ್ರೇಷ್ಠ ಪರಿಣಾಮದ ವಿವರಗಳನ್ನು ಹೆಚ್ಚು ತಿಳಿಯೋಣ.

## 5. ಲೌಕಿಕದಲ್ಲಿ ಧ್ಯಾನದ ಪ್ರಯೋಜನಗಳು

ವ್ಯಾವಹಾರಿಕ ಪ್ರಪಂಚದಲ್ಲಿ, ಮನೋಕಾಲವನ್ನು ಧ್ಯಾನದಿಂದ ಅಣಗೊಳಿಸಿದರೆ ಯಾವ ಪ್ರಯೋಜನಗಳನ್ನು ಪಡೆಯಬಹುದು ? ಲೌಕಿಕದಲ್ಲಿ ಇದು ತಾನೇ ಬಹಳ ಮುಖ್ಯ ! ದಿನದಿನದ ಜೀವನದಲ್ಲಿ ಹೆಚ್ಚು ಹಿತವು ದೊರೆಯುವುದು ತಾನೇ ಬಹಳಷ್ಟು ಜನರಿಗೆ ಮುಖ್ಯವಾದುದು.

1. ಮನೋಕಾಲವು ಅಡ್ಡಾದಿಡ್ಡಿಯಾಗಿ ಹರಿಯದೆ ಇದ್ದರೆ, ವ್ಯಾವಹಾರಿಕ ಬಾಳಿನಲ್ಲಿ ಮಾಡಬೇಕಾದ ಅಗತ್ಯ ಕಾರ್ಯಗಳನ್ನು ಯಶಸ್ವಿಯಾಗಿ ಮಾಡಬಹುದು. ಏಕಾಗ್ರಚಿತ್ತತೆಯಿಂದ ಯಾವ ಕೆಲಸವನ್ನು ಮಾಡಿದರೂ, ಅದು ಸುಲಭವಾಗಿ ಸಫಲವಾಗುತ್ತದೆ. ಆತಂಕಗಳಾವುದೂ ಮನಸ್ಸನ್ನು ಕಾಡುವುದಿಲ್ಲ. ಹಾಗಾಗಿ ಮನಸ್ಸು ಪ್ರಸನ್ನವಾಗಿರುತ್ತದೆ. ಮಾಡಬೇಕೆಂದೆನಿಸಿದ ಕೆಲಸವು ಕಳ್ಳತನವೇ ಆಗಿರಬಹುದು, ಖೂನಿಯೇ ಆಗಿರಬಹುದು, ಪರೋಪಕಾರವೇ ಆಗಿರಬಹುದು, ಪರಪೀಡನೆಯೇ ಆಗಿರಬಹುದು, ಜನಸೇವೆಯೇ ಆಗಿರಬಹುದು, ಜನಾರ್ಧನ ಸೇವೆಯೇ ಆಗಿರಬಹುದು ; ಯಾವುದೇ ಆಗಲಿ ಅದನ್ನು ಸುಸೂತ್ರವಾಗಿ, ಸುಲಭವಾಗಿ ಮಾಡಲು ಸಾಧ್ಯವಾಗುತ್ತದೆ. ಈ ದೃಷ್ಟಿಯಿಂದ ಪಾಪ ಪುಣ್ಯ ಎಂಬ ಯೋಚನೆಗಳು ಬರುವುದೇ ಇಲ್ಲ. ತಪ್ಪುಗಳನ್ನು ಮಾಡಿದೆ, ಒಪ್ಪುವಂತೆ ನಡೆದುಕೊಂಡೆ, ಎನ್ನುವ ಭಾವನಾ ಕಲ್ಪನೆಗಳೂ ಬರುವುದಿಲ್ಲ. Guilt Complexes ಉದ್ಭವಿಸುವುದೇ ಇಲ್ಲ. ಪಶ್ಚಾತ್ತಾಪವೂ ಇರುವುದಿಲ್ಲ.

ಅಂದರೆ ವ್ಯಾವಹಾರಿಕ ಜೀವನದಲ್ಲಿ, ಲೌಕಿಕ ಬಾಳಿನಲ್ಲಿ, ಏನನ್ನು ಮಾಡಬೇಕಾದರೂ ಬಹಳ ವಿಚಕ್ಷಣೆಯಿಂದ, ಅತ್ಯಂತ ಯಶಸ್ವಿಯಾಗಿ, ಮಾಡಬಹುದು.

2. ಮನೋಕಾಲವು ಅಂಬಿನಂತೆ ಗುರಿಯತ್ತ ಸಾಗುವಂತಾದರೆ, ಆಗ ಮನಸ್ಸಿನಲ್ಲಿ ಸಂಶಯವಾಗಲೀ, ಸಂದೇಹವಾಗಲೀ, ಮೂಡುವುದೇ ಇಲ್ಲ. ಸಂಶಯಾತ್ಮನು ನಾಶವಾಗುತ್ತಾನೆ. ನಿಸ್ಸಂಶಯನು ನೆಮ್ಮದಿಯಿಂದ ಇರು

ತ್ತಾನೆ. ಮನೋಕಾಲವನ್ನು ಧ್ಯಾನದಿಂದ ಸರಿಪಡಿಸಿದರೆ ಮನಸ್ಸಿಗೆ ನೆಮ್ಮದಿಯನ್ನು ಮೂಡಿಸಬಹುದು. ತನ್ನ ಪಾಡಿಗೆ ತಾನು ತೃಪ್ತಿಯಿಂದಿರಬಹುದು. 'ಆತ್ಮನಿ ಏವ ಆತ್ಮನಾ ತುಷ್ಟಃ' ಎಂದು ವಿಶಾಲ ಬುದ್ಧಿಯ ವ್ಯಾಸರು, ವಿಶಾಲವಾದ, ವಿಸ್ತಾರವಾದ, ಮೇರೆ, ಎಲ್ಲೆಗಳಿರದ, ಅನುಭವಕ್ಕೆ ಅನ್ವಯಿಸಿ ಹೇಳಿದುದು ವ್ಯಾವಹಾರಿಕ ಪ್ರಪಂಚದ, ಈ ನಡತೆಗೂ ಅನ್ವಯಿಸಬೇಕು. ವ್ಯಾವಹಾರಿಕ ಪ್ರಪಂಚವನ್ನು ಕ್ಷುಲ್ಲಕ ಎಂದು ಅನುಭಾವಿಗಳು ಅನ್ನಬಹುದು. ಅದು ಅವರಿಗೆ ಸತ್ಯ. ಅದು ನಿತ್ಯವೂ ಕೂಡ, ಅವರಿಗೆ. ಆದರೆ ಲೌಕಿಕರಿಗೆ, ನಮ್ಮ ಬದುಕೇ ಸತ್ಯ. ನಮ್ಮ ಗೋಳೇ ನಿತ್ಯ. ನಾವೂ ವಿಶ್ವದಲ್ಲಿ ಇದ್ದೇವೆ, ನಮ್ಮಂತಹವರೂ, ಆತ್ಮನಿ ಏವ ಆತ್ಮನಾ ತುಷ್ಟಃ ಎಂದು ನುಡಿದವರೂ ವಿಶ್ವದಲ್ಲಿ ಜತೆಜತೆಯಾಗಿ ಇದ್ದೇ ಇದ್ದಾರೆ. ಎರಡೂ ಈ ದೃಷ್ಟಿಕೋನಗಳಿಗೆ, ಆಧಾರವಾದ ಮೂಲಭೂತವಾದ ಒಂದು ಇರಲೇಬೇಕು. ಅದೇ ಕಾಲ. ಮನೋಕಾಲದವರು ಲೌಕಿಕ ಪಂಗಡದವರು. ಮನೋಕಾಲವನ್ನು ಅನಾದ್ಯನಂತ ಕಾಲಕ್ಕೆ [Eternity ] ಬೆಸೆದವರು, ವಿಶಾಲ ಬುದ್ಧಿಯ ವ್ಯಾಸರುಗಳು.

ಕಣಾಂಶಗಳಿಂದ [Particles] ಅಣುವಾಗುತ್ತದೆ [Atom ] ಅಣುಗಳ ಸಂಘವು ಮಾಲಿಕ್ಯೂಲ್ಸ್ [Molecules]. ಸಂಘೇ ಶಕ್ತಿ ಕಲೌ ಯುಗೇ. ಮಾಲಿಕ್ಯೂಲುಗಳ ಸಂಘಗಳು ಅಪರಿಮಿತವಾದಾಗ, ರಾಕ್ಷಸ ಬೆಳವಣಿಗೆಯನ್ನು ಸಾಧಿಸಿದಾಗ ಬ್ರಹ್ಮಾಂಡವು ಅವತರಿಸುತ್ತದೆ.

ಅಂತೆಯೇ ಕಾಲವೂ ಕೂಡ. ವ್ಯವಹಾರಿಕ ಕ್ಷಣಗಳು, ಯುಗಗಳಾಗುತ್ತವೆ. ಕಲ್ಪಗಳಾಗುತ್ತವೆ. ಬಂಧನಗಳನ್ನು ಕಳಚಿಕೊಂಡಾಗ, ಘಟನೆಗಳ ಸಂಬಂಧವನ್ನು ಕಿತ್ತೊಗೆದಾಗ ಅನಾದ್ಯನಂತ Eternity ಆಗುತ್ತದೆ.

ಇಂದು ಲೌಕಿಕ ಪ್ರಪಂಚದಲ್ಲಿ ನೆಮ್ಮದಿ, ಸಮಾಧಾನ, ನಿಶ್ಚಿಂತತೆಯಿಂದೆ ನೆಮ್ಮದಿಯು ದ್ವಂದ್ವಾತೀತವಾದ ಆನಂದಾನುಭವವಾಗುತ್ತದೆ.

3: ಮನೋಕಾಲವು ನೇರ ನಡೆಯುವಾಗ, ಮನೋಪಲ್ಲಟಕ್ಕೆ ಅವಕಾಶವಿರುವುದಿಲ್ಲ.

ಪ್ರಕೃತಿ ಜೀವನದಲ್ಲಿ, ಎರಡು ಪ್ರಮುಖ ನಡವಳಿಕೆಗಳನ್ನು ಕಾಣುತ್ತೇವೆ. ಓಡು ಅಥವಾ ಹೋರಾಡು Flight or Fight. ದೊಡ್ಡ ನಾಯಿಯನ್ನು ಕಂಡರೆ ಸಣ್ಣ ನಾಯಿ ಓಡುತ್ತದೆ. ಸಣ್ಣ ಪ್ರಮಾಣದ ನಾಯಿಯನ್ನು ಎಂಜಲ

ತೊಟ್ಟಿಯ ಬಳಿ ಕೂಡರೆ ಘುರ್ ಬೋಗಳುತ್ತಾ, ಹೋರಾಡುತ್ತದೆ. ಪ್ರಗತಿಯನ್ನು ಸಾಧಿಸಿದೆವು ಎಂದುಕೊಂಡ ಇಂದಿನ ಮಾನವನೂ ಇದನ್ನೇ ಮಾಡುತ್ತಾನೆ. ಕೈ ಹಿಡಿದ ಹೆಣ್ಣು ಕೈಕೊಟ್ಟರೆ, ಅವಳನ್ನು ಖೂನಿ ಮಾಡಲೆತ್ನಿಸುತ್ತಾನೆ. ಅಥವಾ ಅವಳಿಂದ ಓಡಿಹೋಗಿ ವಿವಾಹ ವಿಚ್ಛೇದನವನ್ನು ಪಡೆಯುತ್ತಾನೆ. ಜಂಗಮ ಜೀವಿಗಳಲ್ಲಿ ಹೀಗಾದರೆ, ಸ್ಥಾವರ ಜೀವಿಗಳು ಹೇಗೆ ಓಡಿಹೋಗಬೇಕು? ಓಡಿಹೋಗಲು ಅಸಾಧ್ಯವಾದುದರಿಂದ, ಸಸ್ಯಗಳು ಮುದುಡಿಕೊಳ್ಳುತ್ತವೆ. ಮುಟ್ಟಿದರೆ ಮುನಿಯ ಎಂಬ ಸ್ಥಾವರ ಬಳ್ಳಿಯಿದೆ. ಅದರ ಒಂದು ಎಲೆಯನ್ನು ಮುಟ್ಟಿದರೆ, ಬಳ್ಳಿಯ ಎಲ್ಲಾ ಎಲೆಗಳೂ ಮುದುಡಿಕೊಳ್ಳುತ್ತವೆ. ಸಾವಿರಕಾಲನ್ನು ಹುಂಚಿಕಡ್ಡಿಯಿಂದ ಚುಚ್ಚಿದರೆ, ಅದು ಸುರಳಿಸುತ್ತಿಕೊಂಡು ಹೆಪ್ಪುಗಟ್ಟಿಕೊಂಡಂತೆ, ಉಂಡೆಯಾಗುತ್ತದೆ. ಒಂದು ರೀತಿಯಲ್ಲಿ ಇದೂ ಮುಟ್ಟಿದರೆ ಮುನಿಯನಂತೆಯೇ!

ಮಾನವನ ಮನಸ್ಸು ಇನ್ನೂ ಸ್ಥಾವರ ಹಂತದಲ್ಲಿದೆ. ಮನಸ್ಸಿಗೆ ಆಘಾತವಾದರೆ, ಅದು ಮುದುಡಿಕೊಳ್ಳುತ್ತದೆ. ಉಂಡೆಯಾಗುತ್ತದೆ. ಹೀಗಾಗುವುದಕ್ಕೆ ಮನೋರೋಗಗಳೆಲ್ಲದರ ಮೂಲ ಲಕ್ಷಣ. Intence selfishness ಅತಿ ತೀಕ್ಷ್ಣ, ಅತ್ಯುಗ್ರ ಅಹಂ-ಭಾವನೆ. ಮನಸ್ಸಿನ ಆಳಪದರಗಳಲ್ಲಿ ಅಹಂ, ನಾನು, ಎನ್ನುವ ಭಾವನೆಗೆ ಧಕ್ಕೆ ತಗಲುತ್ತದೆ. ಮುಳುಗುತ್ತಿರುವ, ಅಲ್ಲೋಲಕಲ್ಲೋಲವಾದ ಮನಸ್ಸು, ಆಗ ತೇಲುತ್ತಿರುವ ತಾನು ಎಂಬ ಹುಲ್ಲು ಕಡ್ಡಿಯನ್ನು ಭದ್ರವಾಗಿ ಹಿಡಿದುಕೊಳ್ಳುತ್ತದೆ. ಈ ಕಾರಣದಿಂದ ಮನಸ್ಸು, ಪರಿಸರದ ಅಥವಾ ಸಮಾಜದ ಯೋಗಕ್ಷೇಮವನ್ನು ಸಂಪೂರ್ಣವಾಗಿ ಮರೆಯುತ್ತದೆ. ಮರೆಯುದೇ ಇದ್ದರೆ ಉಳಿಯಲು ಅನ್ಯ ಮಾರ್ಗವೇ ಇಲ್ಲ. ಅಂತಹ ಸ್ಥಾವರ ಮನಸ್ಸಿಗೆ ಪಲ್ಲಟವು ಏಕೈಕ ಮಾರ್ಗ.

ಹುಚ್ಚು ಬೆಪ್ಪು ಶಿವಲೀಲೆ ಎಂದು ಮನೋಪಲ್ಲಟವನ್ನು ವರ್ಣಿಸುತ್ತಿದ್ದರು ನಾಡು ನುಡಿಯುವರು. Manic depressive psychosis;schizophrenia: obsessional psychosis; hysteria ಎಂಬಿತ್ಯಾದಿಯಾಗಿ ಮನೋವೈಜ್ಞಾನಿಕರು, ತಿಳಿಯಲೆತ್ನಿಸುತ್ತಿದ್ದಾರೆ. ಇಂದಿನ ಮಾನವ ಜ್ಞಾನಭಂಡಾರಕ್ಕನುಗುಣವಾಗಿ.

ಮನಸ್ಸಿನ ಆಳ ಪದರಗಳು ಇನ್ನೂ ಸ್ಥಾವರ ಸ್ಥಿತಿಯಲ್ಲಿದೆ. ತೋರ ಪದರಗಳು ಜಂಗಮ ಸ್ಥಿತಿಯಲ್ಲಿ ಜೂಜೋಡುತ್ತಿವೆ. ಈ ವ್ಯತ್ಯಾಸ ದಿಂದಲೇ ಮನೋರೋಗಗಳು, ಮನಪಲ್ಲಟಗಳು ಉಂಟಾಗುತ್ತಿವೆ ಎಂಬುದರ ಅರಿವು ಈಗೀಗ ಮೂಡುತ್ತಿದೆ.

ಇಂತಹ ಪಲ್ಲಟಗಳಿಗೆ; ಮನೋರೋಗಗಳಿಗೆ, ಜೀವರಾಸಾಯನಿಕ, [Biochemical]; ಜೀವಭೌತಿಕ, [Biophysical] ಚಿಕಿತ್ಸಾ ವಿಧಾನಗಳನ್ನು ಬಳಸುತ್ತಾರೆ. ಉತ್ತಮ ಪರಿಣಾಮವನ್ನೂ ಪಡೆಯುತ್ತಾರೆ. ಆದರೆ ಮೂಲಭೂತವಾದ ಅತ್ಯಂತ ಸಮರ್ಪಕವಾದ ಚಿಕಿತ್ಸೆ ಎಂದರೆ, ಆಳ ಪದರಗಳ ಮನೋಗತಿಯನ್ನೂ, ತೋರ ಪದರಗಳ ಮನೋಗತಿಯನ್ನು ಸಮಸಮ ಅನ್ವಯಿಸಬೇಕು. ಧ್ಯಾನವು ಈ ತೆರನ ಸಮನ್ವಯವನ್ನು ಸಾಧಿಸುತ್ತದೆ. ಪಲ್ಲಟವಾಗಿರುವ ಮನಸ್ಸುಳ್ಳ ರೋಗಿಯು ಧ್ಯಾನವನ್ನು ಮಾಡುವುದು ಸಾಧ್ಯ ವಲ್ಲ. ಆದರೆ ಚಿಕಿತ್ಸಕನು ಧ್ಯಾನವನ್ನು ಮಾಡಬಹುದು. ಅದರ ಸತ್ಪರಿ ಣಾಮವು ರೋಗಿಯ ಮೇಲೆ ಉಂಟಾಗುತ್ತದೆ. ಧ್ಯಾನವನ್ನು ಮಾಡುವ ಮನೋವೈದ್ಯರು ಇಂದು ಇಲ್ಲ ಎಂದನ್ನಬಹುದು. ಧ್ಯಾನವನ್ನು ಮಾಡುವ ಸಂತರು, ಸ್ವಾಮಿಜೀಗಳು, ಬಾಬಾಜೀಗಳು ಇಷ್ಟ ದೇವತಾ ಉಗ್ರ ಉಪಾಸಕರು ಇಂತಹವರು ಮನೋಪಲ್ಲಟವಾದವರ ಅತಿ ಶೀಘ್ರವಾಗಿ ಗುಣಪಡಿಸು ವುದನ್ನು ಕಂಡಿದ್ದೇವೆ. ಎಲ್ಲ ಮನೋರೋಗಿಗಳನ್ನೂ ಗುಣಪಡಿಸುವುದಿಲ್ಲ, ದಿಟ. ಆದರೆ ಗಮನಿಸಲೇಬಹುದಾದ ಸಂಖ್ಯೆಯಲ್ಲಿ ಪವಾಡದೋಪಾದಿಯಲ್ಲಿ ಮನೋ ರೋಗಿಗಳನ್ನು ಗುಣಮುಖವಾಗಿಸುತ್ತಾರೆ. ಧ್ಯಾನದ ಪ್ರಭಾವವು (Space) ದೇಶದಲ್ಲಿ ಪಸರಿಸುವುದೇ ಇದಕ್ಕೆ ಕಾರಣ. ಹೇಗೆ ಪಸರಿಸುತ್ತದೆ ಎನ್ನುವುದು ಯಾರಿಗೂ ಇನ್ನೂ ವೈಜ್ಞಾನಿಕವಾಗಿ ತಿಳಿದಿಲ್ಲ. ಈ ವಿಷಯವನ್ನು ನಮ್ಮ ನಾಡಿನ ವಿಜ್ಞಾನಿಗಳು ಅಧ್ಯಯನ ಮಾಡತೊಡಗಿದರೆ ಮಾನವ ಜ್ಞಾನ ಭಂಡಾರಕ್ಕೆ ಉತ್ತಮ ಕಾಣಿಕೆಯನ್ನು ಸಲ್ಲಿಸಬಹುದು.

4. ಮನೋಕಾಲದ ಗತಿಯನ್ನು ಧ್ಯಾನದಿಂದ ಸರಾಗವಾಗಿ, ಕೊಂಕು ಡೊಂಕುಗಳಿಲ್ಲದೆ ಸರಿಯುವಂತೆ ಮಾಡಿದರೆ, ಅನಂತರ ದುಸ್ವಪ್ನಗಳು ಬಾಧಿಸುವುದಿಲ್ಲ.

ತೋರಮನಸ್ಸಿಗೆ ಕಂಡುಬಂದ ಭೀಕರವಾದ ವಸ್ತು ಅಥವಾ ಯೋಚನೆಗಳನ್ನು, ಮನಸ್ಸಿನ ಆಳದಲ್ಲಿರುವ ಹಗೇವುಗಳಿಗೆ ದಬ್ಬುತ್ತೇವೆ. ಗುಡಿಸಿದ ಕಸವನ್ನು ಜಮಖಾನದ ಕೆಳಕ್ಕೆ ದೂಡುವಂತೆ. ಅಥವಾ ಅನಗತ್ಯವಾದ ಬೇಡದ ಸಾಮಾನುಗಳನ್ನು ಅಟ್ಟದ ಮೇಲೆ ಕೂಡಿಡುವಂತೆ. ನಿದ್ರೆಯನ್ನು ಮಾಡುವಾಗ ತೋರಮನಸ್ಸಿನ ಪಹರೆಯು ತಪ್ಪಿದಾಗ, ಮನಸ್ಸಿನ ಹಗೇವುಗಳಲ್ಲಿ ಹುದುಕಿಕೊಂಡಿರುವ ಭೀಕರ ಸ್ಮರಣೆಗಳು ಮತ್ತು ಯೋಚನೆಗಳು, ಪಿಶಾಚಿಗಳಂತೆ ಎದ್ದು ಬಂದು ಕಾಡತೊಡಗುತ್ತವೆ. ಮನಸ್ಸಿನ ಕಲ್ಪನೆಯೇ ಅಸ್ತಿತ್ವವನ್ನು ಪಿಶಾಚಿಗಳಿಗೆ ನೀಡುವುದು. ಆದ ಕಾರಣ ಅವುಗಳ ಕಾಲುಗಳು ಹಿಂದು ಮುಂದು ಎಂದು ಜನರು ಹೇಳುವುದು, ಬಹು ಕಾಲದಿಂದ. ನಿದ್ರೆ ಮಾಡುತ್ತಿರುವಾಗ ಆಳ ಮನಸ್ಸಿನಲ್ಲಿರುವ ಈ ಪಿಶಾಚಿಗಳು, ಪೈಶಾಚ ಆಟವನ್ನು, ಘೋರ ನಾಟಕವನ್ನು ಮನಸ್ಸಿನಲ್ಲಿ ಆಡತೊಡಗುತ್ತವೆ. ನಿದ್ರೆಯು ಒಂದು ಝಾಮದಿಂದ ಎಚ್ಚೆತ್ತುಕೊಳ್ಳುವ ಹಂತದಲ್ಲಿ ; Rem sleep ಎನ್ನುವ ಸ್ಥಿತಿಯಲ್ಲಿ ; ಈ ಪೈಶಾಚಿಕ ಕನಸುಗಳು ಕಾಡಲಾರಂಭಿಸುತ್ತವೆ. ಪ್ರಾಣವನ್ನೇ ಅಪಹರಿಸುವುವೇನೋ ಎನ್ನುವ ಈ ಪೈಶಾಚಿಕ ಕನಸುಗಳು ನಿದ್ರಿಸುತ್ತಿರುವವನನ್ನು ಎಚ್ಚರಿಸುವ ಹಂತಕ್ಕೆ ಏರಿದಾಗ ದುಸ್ಸ್ವಪ್ನಗಳು (Night mares, ಎನ್ನಿಸಿಕೊಳ್ಳುತ್ತವೆ.

ಇವುಗಳಿಗೆಲ್ಲಾ ಮೂಲ ಕಾರಣ, ತೋರಮನಸ್ಸಿಗೆ ಕಂಡುಬಂದ ಭೀಕರವಾದ ವಸ್ತುಗಳ ಸ್ಮರಣೆಗಳು ಮತ್ತು ಅನುಚಿತ ಯೋಚನೆಗಳು ಮನೋಕಾಲದ ಗತಿಯು ಕೊಂಕುಡೊಂಕಾಗಿ ನಡೆಯುವುದರಿಂದ, ಕಸ, ಕಲ್ಮಶ ಇವುಗಳು ಉತ್ಪನ್ನವಾಗುತ್ತವೆ. ತೋರಮನಸ್ಸು ಈ ಕಲ್ಮಶಗಳನ್ನು ಹಗೇವುಗಳಿಗೆ ತುಂಬುತ್ತದೆ. ಮುಚ್ಚಿಡುತ್ತದೆ. ಕಣ್ಣು ಮುಚ್ಚಿಕೊಂಡು ಬೆಕ್ಕು ಹಾಲನ್ನು ಕುಡಿಯುವಂತೆ. ನಿದ್ರೆಯು ಆವರಿಸಿದಾಗ, ಕಸ ಕಲ್ಮಶಗಳು, ಹಗೇವುಗಳಿಂದ ಮೇಲೆ ಬಂದು ದುಸ್ಸ್ವಪ್ನಗಳಾಗುತ್ತದೆ.

ಮನೋಕಾಲದ ಗತಿಯು ಅಂಬಿನಂತೆ ನೇರವಾಗಿ ನಡೆದರೆ, ಕಸ ಕಲ್ಮಶಗಳು, ಉಂಟಾಗುವುದೇ ಇಲ್ಲ. ಮನೋಕಾಲವು ಸುಸೂತ್ರವಾಗಿ ನಡೆದರೆ, ಹೂ ಹಗುರವಾಗುತ್ತದೆ, ಅಂಬು. ಆಗ ಧೂಳು ಏಳಲು ಅಸಾಧ್ಯ. ಅಂದರೆ ದುಸ್ಸ್ವಪ್ನಗಳ ಕಾಟವು ನಿರ್ಮೂಲವಾಗುತ್ತದೆ.

ಕುಸುಮ ಶರನ ಅಂಬು ಎಂದೂ ನೇರವಾಗಿ ಸಾಗುವುದು ಲೌಕಿಕದಲ್ಲಿ ದುಸ್ಸಾಧ್ಯ. ಆದುದರಿಂದಲೇ ಮದನನಿಗೆ, ಮನ್ ಮಥನಿಗೆ, ಮಾರನಿಗೆ, ಅಂಕುಡೊಂಕುಗಳುಳ್ಳ ಕಬ್ಬಿನ ಜಲ್ಲೆಯೇ, ಬೆನ್ನೆಲುಬು. ದೃಷ್ಟಾರ ಋಷಿಗಳು, ಇಂತಹ ಗಂಭೀರಾರ್ಥವುಳ್ಳ ಕತೆಯನ್ನು ಕಟ್ಟಿದುದು, ಪಾಮರ, ಅಮರ ಇವರುಗಳಿಗೆ ಸಂಪರ್ಕವನ್ನು ಸೇತುವೆಯನ್ನು, ಅಥವಾ ಯೋಗವನ್ನು ಬಂಧಿಸಲೋಸುಗವೇ !!

5. ಹಿಪ್ಪಿಗಳ ಅವತಾರದ ಅಗತ್ಯವು ಬೇಕಾಗುವುದಿಲ್ಲ.

ಸಂಪದ್ಭರಿತ ಸಮಾಜಗಳಲ್ಲಿ ಇಂದ್ರಿಯಗಳನ್ನು ಪಾಶಹಾಕಿದಂತೆ ಸೆಳಿಯುವ ಅನೇಕ ಕಾಮ್ಯಗಳು ಸುಲಭವಾಗಿ ಸಿಗುತ್ತವೆ. ಇಂತಹ ಆಸೆ ಗಳೆಲ್ಲವೂ ತೋರಮನಸ್ಸನ್ನು ಹುಚ್ಚಾ ಪಟ್ಟೆ ಜಗ್ಗಾಡುತ್ತವೆ. ಒಂದು ಹಂತವನ್ನು ಮೀರಿದಾಗ ಮನಸ್ಸು ಕ್ಷಣ ಕ್ಷಣಕ್ಕೂ ಇತ್ತ ಅತ್ತ ಮತ್ತು ಸುತ್ತಲೂ ಪರಿದಾಡಲಾರಂಭಿಸುತ್ತದೆ. ಮನೋಕಾಲವು ಅಂಕುಡೊಂಕಾಗಿ ಯಲ್ಲ, ವಕ್ರ ವಕ್ರವಾಗಿ ಹರಿಯಲಾರಂಭಿಸುತ್ತದೆ.

ಮನಸ್ಸನ್ನು ತುಸು ಸಾಂತ್ವನಗೊಳಿಸಲು, ಇಂತಹವರಲ್ಲಿ ಹಲವರು, ತಾವೇ ಹುಚ್ಚುನಾಯಿಯಂತೆ, ಇಲ್ಲಿ ಅಲ್ಲಿ ಮತ್ತು ಎಲ್ಲೆಲ್ಲೂ ಅಡ್ಡಾಡ ತೊಡಗುತ್ತಾರೆ. ಒಡಲು ಅಡ್ಡಾಡ ತೊಡಗಿದರೆ ಮನಸ್ಸಿಗೆ ತುಸು ನೆಮ್ಮದಿಯು ಬರಬಹುದು. ಹಾಗೂ ಸಮಾಜದ ಸುಭದ್ರತೆಗೆಂದು ರಚಿಸಿ ರುವ ಸಭ್ಯ ನಡವಳಿಕೆ, ಕಾನೂನು ಪರಿಪಾಲನೆ ಇವುಗಳನ್ನು ಅಲ್ಲಗಳೆದು, ನೆಮ್ಮದಿಯ ಹೊಸ ಸಮಾಜವನ್ನು ಸೃಷ್ಟಿಸುತ್ತೇವೆ ಎಂದು ಭ್ರಾಂತಿ ಪಡುತ್ತಾರೆ.

ಇವರುಗಳನ್ನು ಹಿಪ್ಪಿಗಳು ಎಂದು ಕರೆಯುತ್ತಾರೆ. ಹಲವಾರು ಹಿಪ್ಪಿಗಳು ತಮ್ಮ ಈ ನವ್ಯ ವರ್ತನೆಯಿಂದ ನೆಮ್ಮದಿಯನ್ನು ಪಡೆಯುವುದಿಲ್ಲ. ಭ್ರಮಾಕಾರಕ ಔಷಧಿಗಳನ್ನು ಬಳಸಲಾರಂಭಿಸುತ್ತಾರೆ. ಮೆಸ್ಕಲಿನ್, ಎಲ್. ಎಸ್. ಡಿ. ಭಂಗ್, ಇತ್ಯಾದಿಗಳನ್ನು ಸೇವಿಸಿದರೆ ತೋರಮನಸ್ಸನ್ನು ಇಂದ್ರಿಯಗಳು ಸೆಳೆಯುವುದು ಕಡಿಮೆ. ಏಕೆಂದರೆ ಮನಸ್ಸು ಭ್ರಮಾಪೂರಿತ ವಾಗಿದ್ದು, ವಾಸ್ತವಿಕ ಅರಿವು ಅಸ್ಪಷ್ಟವಾಗುತ್ತದೆ. ಇನ್ನೂ ಕೆಲವೊಮ್ಮೆ, ಕೆಲವು ಹಿಪ್ಪಿಗಳು, ಸಾಧುಗಳನ್ನು ಅಥವಾ ಬಾಬಾಜೀಗಳನ್ನು ಹಾಗೂ ಸ್ವಾಮೀಜೀಗಳನ್ನು ಹಿಂಬಾಲಿಸಿ, ಧ್ಯಾನ ಮಾಡುವುದು, ಭಜನೆಯನ್ನು

ಮಾಡುವುದು, ಇತ್ಯಾದಿಗಳಲ್ಲಿ ಪಾಲುಗೊಳ್ಳುತ್ತಾರೆ. ಆಗ ಅವರ ಮನಸ್ಸಿಗೆ ಸ್ವಲ್ಪಮಟ್ಟಿಗೆ ನೆಮ್ಮದಿಯುಂಟಾಗುತ್ತದೆ.

ಧ್ಯಾನವನ್ನು ಮಾಡುವ ಸಮಯದಲ್ಲಿ, ಭಜನೆಯಲ್ಲಿ ಸಾಮೂಹಿಕವಾಗಿ ನಿರತರಾದಾಗ, ಮನೋಕಾಲವು ಕೊಂಕು ಡೊಂಕುಗಳನ್ನು ಸ್ವಲ್ಪಮಟ್ಟಿಗೆ ಕಳೆದುಕೊಳ್ಳುತ್ತದೆ. ಹೆಚ್ಚು ಸರಾಗವಾಗಿ ನೇರವಾಗಿ ಚಲಿಸತೊಡಗುತ್ತದೆ. ಧ್ಯಾನವನ್ನೇ, ಹಿರಿಯ ಚಿಕಿತ್ಸೆಯನ್ನಾಗಿ ಮಾಡಿಕೊಂಡರೆ, ತೊಳಲಾಡುವ ಸಂಪತ್ ಶ್ರೀಮಂತರು ಹಿಪ್ಪಿಗಳಾಗುವ ಅಗತ್ಯವು ಇರುವುದಿಲ್ಲ.

ಅಮೆರಿಕಾ ಅಂತಹ ಸಂಪದ್ರಾಜ್ಯಗಳಲ್ಲಿ ಹಿಪ್ಪಿಗಳು ಅವತರಿಸುತ್ತಾರೆ. ನಮ್ಮಂತಹ ಬಡ ರಾಷ್ಟ್ರದಲ್ಲಿ ಅಲ್ಲ ಎಂದೆನ್ನಬಹುದು. ನಮ್ಮ ನಾಡಿನಲ್ಲಿ ವಿಚಿತ್ರವಾದ ಒಂದು ನಡವಳಿಕೆಯನ್ನು ಕಾಣುತ್ತಿದ್ದೇವೆ. ಹಿಂದಿನ ಕಾಲದಲ್ಲಿ, ಮಕ್ಕಳು ಮೊಮ್ಮಕ್ಕಳಿಗೆಂದು ಆಸ್ತಿಪಾಸ್ತಿಯನ್ನು ಕೂಡಿಸಿಡುತ್ತಿದ್ದರು. ಈಗ ಕೂಡಿಸಿಟ್ಟರೆ ಕೆಟ್ಟಿವು, ಯಾವ ಆಸ್ತಿಯೂ ಸ್ಥಿರವಲ್ಲ, ಎಂಬ ಅರಿವು ಮೂಡಿದೆ. ಆದ ಕಾರಣ ಜನರು ಸಂಪಾದಿಸಿದ್ದನ್ನು ನಿಜ ಜೀವನಕ್ಕೆ ಬಳಸತೊಡಗಿದ್ದಾರೆ. ನಾಳೆಗೆ ಹೇಗೆಂಬ ಚಿಂತೆಯನ್ನು ಬಿಡತೊಡಗಿದ್ದಾರೆ. ಸಂಪದ್ಭರಿತ ರಾಷ್ಟ್ರದ ಜನರಂತೆ ಬದುಕು ನಡಸತೊಡಗಿದ್ದಾರೆ. ಆದ ಕಾರಣ ನಮ್ಮ ಸಮಾಜದ ಮಕ್ಕಳುಗಳು ಕೂಡಾ ಇನ್ನೊಂದೆರಡು ದಶಕಗಳಲ್ಲಿ 'ಹಿಪ್ಪಿ' ತೆರನಾಗುವುದು ಅನಿವಾರ್ಯ. ಭ್ರಮಾಕಾರಕ ಔಷಧಿಗಳ ಭಕ್ತರಾಗುವುದು ಸುಲಭ. ಇದನ್ನು ಮರೆಯಬಾರದು.

ಮನೋಕಾಲವು ಕೊಂಕುಡೊಂಕಾಗುವುದನ್ನು ಕಡಿಮೆ ಮಾಡಲು, ಸುಸೂತ್ರವಾಗಿ ಹರಿಯುವಂತೆ ಮಾಡಲು, ಧ್ಯಾನದ ಬಳಕೆಯನ್ನು ಕಿರಿಯರೊಪ್ಪುವ ರೀತಿಯಲ್ಲಿ, ಸಮಾಜದಲ್ಲಿ ತರಬೇಕು.

### 6. ಧ್ಯಾನ ಮತ್ತು ಮನೋsತೀತ ಕಾಲ

ಧ್ಯಾನವನ್ನು ಸಂಯಮದಿಂದ ನಡಸಿದರೆ, ಮನೋತೀತ ಅವಸ್ಥೆಯನ್ನು ಅನುಭವಿಸಬಹುದು ಎಂದು ತಿಳಿದಾಯಿತು. ಈ ಅವಸ್ಥೆಯಲ್ಲಿ ಮನಸ್ಸು ಇಂದ್ರಿಯಗಳ ಕಾಟದಿಂದ ಬಳಲುವುದಿಲ್ಲ. ಸ್ಮರಣೆಗಳ ಹಾವಳಿಯಿಂದ ನರಳುವುದೂ ಇಲ್ಲ. ಮನಸ್ಸಿನಲ್ಲಿ ಹಿಂದಿನಿಂದಲೂ ಸ್ಥಿರವಾಗಿ ಕಲ್ಪಿಸಿಕೊಂಡ

ಇಷ್ಟದೇವತೆ ಎಂಬ ಹೆಸರಿನತ್ತ, ಮನೋತೀತ ಕಾಲವು ನೇರವಾಗಿ ಅಂಬಿನಂತೆ ಸಾಗುತ್ತದೆ. Absolute time ಎಂದು ನ್ಯೂಟನ್ನನು ಹೇಳಿದ ಕಾಲವೂ, ಮನೋತೀತ ಕಾಲವೂ ಒಂದೇ ಎನ್ನಬಹುದು. ಎಡ್ಡಿಂಗ್‌ಟನ್ ಇತ್ಯಾದಿಗಳು ವರ್ಣಿಸಿದ Time arrow ಅನ್ನೂ ಕೂಡ ಮನೋತೀತ ಕಾಲಕ್ಕೆ ಅನ್ವಯಿಸಬಹುದು. ಇಂತಹ ಕಾಲಗತಿಯಲ್ಲಿ ಇಷ್ಟದೇವತೆಯ ಅಡಿಮುಟ್ಟುವುದೊಂದೇ ನಿರೀಕ್ಷಿಸುವ ಘಟನೆ. ಆ ಘಟನೆಯು ಫಲಿಸಿದರೆ, ಆಗ ಮನೋತೀತ ಕಾಲದ ಅಳತೆಯನ್ನು ಹಾಕಲು ಸಾಧ್ಯ. ಆದರೆ ಆ ಘಟನೆಯು ಫಲಿಸಿದ ವ್ಯಕ್ತಿಗಳು, ಅಥವಾ ಅನುಭಾವಿಗಳು ; ಅನಾದ್ಯಂತ ಕಾಲದ Eternity ಯ ಅನುಭವವನ್ನು ಸವಿಯುತ್ತಿರುತ್ತಾರೆ. ಅಂದರೆ ಅವರ ಅನುಭವದ ಕಾಲವು, ಕಾಲ ದೇಶ ಮತ್ತು ನಿಮಿತ್ತಗಳನ್ನು ಬೆಸೆದುಕೊಂಡುದರ ಅನುಭವವಾಗಿರುತ್ತದೆ. ಕಾಲ ಎನ್ನುವ ಪ್ರತ್ಯೇಕತೆಯು ಅಸ್ತಿತ್ವದಲ್ಲಿರುವುದಿಲ್ಲ. ಹಾಗಾಗಿ ಕಾಲದ ಅಳತೆಯೇ ಸಾಧ್ಯವಿಲ್ಲ. ಆದುದರಿಂದ ಇಂತಹವರನ್ನು ಕಾಲಾತೀತರು ಎಂದು ಅನ್ನುತ್ತಿದ್ದರು.

ಮನೋತೀತ ಕಾಲವನ್ನು ಅನುಭವಿಸಿದವರು ಹೊರನೋಟಕ್ಕೆ ಸಾಮಾನ್ಯ ಮನುಷ್ಯರಂತೆಯೇ ಇರುತ್ತಾರೆ. ಆದರೆ ಕೆಲವು ಲಕ್ಷಣಗಳನ್ನು ಇವರಲ್ಲಿ ಕಾಣಬಹುದು.

1. ಇಂತಹವರೊಡನೆ ಮಾತನಾಡಿದವರು, ಪರಿಚಯ ಪಡೆದವರು ಎಲ್ಲರಿಗೂ ತುಂಬು ಗೌರವ ಮತ್ತು ಆದರವು ಬಲು ಬೇಗ ಉಂಟಾಗುತ್ತದೆ. ಏಕೆ ? ಹೇಗೆ ? ಎಂದು ವಿಶ್ಲೇಷಿಸ ಹೋದರೆ ಯಾವ ಕಾರಣವೂ ದೊರೆಯುವುದಿಲ್ಲ. ಅಂದರೆ ವಿಚಾರ ಬುದ್ಧಿಗೆ ಕಾರಣಗಳು ಸಿಗುವುದಿಲ್ಲ. ಅಂದರೆ ಭಾವನಾ ಮನಸ್ಸಿನಲ್ಲಿ ಇಂತಹವರಿಗೂ, ಅವರುಗಳ ಸಂಪರ್ಕವನ್ನು ಪಡೆದವರಿಗೂ ತಾದತ್ಮ್ಯವು ಉಂಟಾಗುತ್ತದೆ. They get into the hearts of people easily.

2. ಇಂತಹವರ ಸಹವಾಸದಿಂದ ಹಲವಾರು ಬಾರಿ ಮನಸ್ಸಿಗೆ ನೆಮ್ಮದಿಯು ದೊರೆಯುತ್ತದೆ. ಏಕೆ, ಹೇಗೆ, ಎನ್ನುವುದು ಯಾರಿಗೂ ತಿಳಿದಿಲ್ಲ. ತಿಳಿದವರು ಹೇಳುವುದಿಲ್ಲ, ತಳಮಳಗೊಂಡ ಮನಸ್ಸಿನವರಿಗೆ,

ಇಂತಹವರ ದರ್ಶನದಿಂದ, ತಳಮಳ ಕಡಿಮೆಯಾಗಿ, ನೆಮ್ಮದಿಯು ದೊರೆತರೆ, ಮನೋರೋಗದ ಚಿಕಿತ್ಸೆಯು ಅದಂತಾಗುತ್ತದೆ. ಇಂತಹವರು ಬಾಳಿದ ಸ್ಥಳಗಳು : ಅಥವಾ ಆಶ್ರಮಗಳು, ಸ್ಥಳ ಮಹಾತ್ಮ್ಯೆಯನ್ನು ಹೊಂದುತ್ತವೆ. ಶತಮಾನಗಳ ಲೆಕ್ಕದಲ್ಲಿ ಈ ಪ್ರಭಾವವು ಉಳಿಯುತ್ತದೆ, ಆ ಕ್ಷೇತ್ರಗಳಲ್ಲಿ. ಭಾರತದಲ್ಲಿ ಇಂತಹ ಕ್ಷೇತ್ರಗಳನ್ನು ಹೆಸರಿಸಬೇಕಾಗಿಲ್ಲ; ಅಷ್ಟು ವಿಪುಲವಾಗಿವೆ

3 ಇಂತಹವರ ಪ್ರಭಾವದಿಂದ ದೈಹಿಕ ಬೇನೆಗಳು ಪವಾಡವೆಂಬಂತೆ ಗುಣಹೊಂದುವುದೂ ಉಂಟು. ಮನೋದೈಹಿಕ ಬೇನೆಗಳು ಹೀಗೆ ವಾಸಿ ಯಾದರೆ, ಅರ್ಥ ಮಾಡಿಕೊಳ್ಳುವುದು ಕಷ್ಟವಲ್ಲ ಏಕೆಂದರೆ ರೋಗಿಯ ಮನಸ್ಸಿನ ಮೇಲೆ, ಮನೋಽತೀತ ಕಾಲದವರ ಮನಸ್ಸು ಸತ್ಪರಿಣಾಮ ವನ್ನುಂಟು ಮಾಡುವುದು ಸುಲಭ ಸಾಧ್ಯ. ವೈಜ್ಞಾನಿಕವಾಗಿ ಇದು ಹೇಗೆ ಎನ್ನುವುದು ಇನ್ನೂ ಸಿಧ್ಧಾಂತವಾಗದಿದ್ದರೂ, ಹೀಗೆ ಆಗುವುದು ವಿಜ್ಞಾನಿ ಗಳಿಂದ ಒಪ್ಪಲ್ಪಟ್ಟಿದೆ. ಮನೋಕಾಲ ಮತ್ತು ದೇಹ ಎಂಬ ಪ್ರಕರಣದಲ್ಲಿ ಧ್ಯಾನದ ಪ್ರಬಾವವನ್ನು ವಿವರಿಸಲಾಯಿತಲ್ಲ ; ಅಂತಹ ದ್ಯಾನದ ಪ್ರಭಾವ ವನ್ನು ಇವರುಗಳು ಹೊಂದಿರುತ್ತಾರೆ. ಆದರೆ ದ್ಯಾನವನ್ನು ಮಾಡಬೇಕಾದ ಅಗತ್ಯವಿರುವುದಿಲ್ಲ ಅಂದರೆ ಮನೋಽತೀತ ಕಾಲದ ಅನುಭವವನ್ನು ಪಡೆದವರು ಅಸ್ತಿತ್ವದಲ್ಲಿ ಪ್ರತ್ಯೇಕವಾಗಿ ಇಲ್ಲದ ಕಾಲಕ್ಕೂ, ವ್ಯಾವಹಾರಿಕ, ಅಂದರೆ ಗಡಿಯಾರದ ಕಾಲಕ್ಕೂ, ಸಂಬಂಧಿಗಳಾಗಿದ್ದಾರೆ. ಎರಡಕ್ಕೂ ಸೇತುವೆ ಯಾಗಿದ್ದಾರೆ. W. T. Space ಎಂಬ ಪ್ರಿನ್ಸ್‌ಟನ್ ಅಧ್ಯಯನ ಶಾಲೆಯ ಪಂಡಿತ ಇದನ್ನು ವಿವರಿಸಿದ್ದಾನೆ. ಮನೋಽತೀತ ಕಾಲದಲ್ಲೂ ವ್ಯಾವಹಾರಿಕ ಗಡಿಯಾರದ ಕಾಲದಲ್ಲೂ, ಇವರಗಳು ಅಲ್ಲೊಮ್ಮೆ ಇಲ್ಲೊಮ್ಮೆ ವಿಹರಿ ಸುತ್ತಾರೆ. ಇದರಿಂದ ಸ್ವಲ್ಪಮಟ್ಟಿಗೆ ಭ್ರಮೆಯು ಅವರ ಲೌಕಿಕ ನಡವಳಿಕೆ ಯಲ್ಲಿ ಕಾಣಬಹುದು ಎಂದು. ಇಂತಹ ಸ್ಥಿತಿಯನ್ನು ಅವಧೂತಸ್ಥಿತಿ ಎಂದು ನಮ್ಮ ಹಿರಿಯರು ಕರೆಯುತ್ತಿದ್ದರು. ಲೌಕಿಕವಾಗಿ ಅವಧೂತರುಗಳು ಇಂದಿನ ಹಿಪ್ಪಿಗಳಂತೆಯೇ ನಡೆದುಕೊಳ್ಳುತ್ತಿದ್ದರು. ಆದರೆ ಸಮಾಜದಲ್ಲಿ ಅಲೌಕಿಕವಾದ ಪವಾಡಗಳನ್ನು ನಿರಾಯಾಸವಾಗಿ ನಡೆಸುತ್ತಿದ್ದರು, ಬೇಕಾದಾಗ.

'ಧ್ಯಾನಾವಸ್ಥಿತ ತದ್ ಗತೇನ ಮನಸಾ ಪಶ್ಯಂತಿ ಯಂ ಯೋಗಿನಃ' ಎಂಬ ಪಂಙ್ಕ್ತಿಯು, ಭಗವದ್ಗೀತೆಯ ಪ್ರಾರ್ಥನಾ ಶ್ಲೋಕಗಳಲ್ಲಿ ಒಂದು.

ಧ್ಯಾನಾವಸ್ಥೆಯಲ್ಲಿ, ಮನಸ್ಸು ತದ್‌ಗತೇನ, ಇಷ್ಟ ದೇವತಾ ಸ್ವರೂಪದಲ್ಲಿ ಸಂಪೂರ್ಣವಾಗಿ ಮಗ್ನವಾದಾಗ, ಅಂತಹ ಯೋಗಿಗಳು ಯಂ ಯಾವುದನ್ನು ಪಶ್ಯಂತಿ ಸಾಕ್ಷಾತ್ ಕಾಣುತ್ತಾರೋ, ಎಂದು ಪಂಙ್ಕ್ತಿಯ ಅರ್ಥ.

ಯಂ ಎಂಬುದನ್ನು ಇಷ್ಟ ದೇವತಾ ಸ್ವರೂಪ ಎಂದೆವು, ಪ್ರಾರ್ಥನೆಯ ಹಂತದಲ್ಲಿ. ಆದರೆ ಧ್ಯಾನದ ಹಂತದಲ್ಲಿ ಯಂ ಎಂದರೆ; ಕಾಲ, ದೇಶ, ನಿಮಿತ್ತ ಮೂರೂ ಈ ಬ್ರಹ್ಮಾಂಡದ ಮೂಲಭೂತವಾದುವುಗಳನ್ನು ಸೃಷ್ಟಿಸಿದುದು ಎಂದು ತಿಳಿಯಬೇಕು.

ನಮಸ್ತು ಅನಂತಾಯ ಸಹಸ್ರ ಮೂರ್ತಯೇ
ಸಹಸ್ರ ಪಾದ ಅಕ್ಷಿ ಶಿರ ಊರು, ಬಾಹವೇ
ಸಹಸ್ರನಾಮ್ನೇ

Space ಅಥವಾ ದೇಶದಲ್ಲಿ ಕೊನೆಯಿಲ್ಲದ ಸಾವಿರ ಮೂರ್ತಿಗಳನ್ನೂ ಸಾವಿರ ಪಾದಗಳನ್ನೂ, ಸಾವಿರ ಕಣ್ಣುಗಳನ್ನೂ, ತಲೆಗಳನ್ನೂ, ತೊಡೆಗಳನ್ನೂ, ತೋಳುಗಳನ್ನೂ, ಹೆಸರುಗಳನ್ನೂ ನೋಡುತ್ತೇವೆ. ಸಹಸ್ರಕೋಟಿ ಯುಗ ಧಾರಿಣೇ, ಸಹಸ್ರಕೋಟಿ ಯುಗಗಳನ್ನೂ ಧರಿಸಿ, Space ಜತೆಗೆ ಒಂದಾದ, ಪುರುಷಾಯಶಾಶ್ವತೇ, ಅವಿನಾಶಿಯಾದ ಆದಿಮೂಲಕ್ಕೆ ನಮಃ, ನಮಸ್ಕಾರ ಎಂದು ವಿಶಾಲ ಬುದ್ಧಿಯ ವ್ಯಾಸರು ಗೀತೆಯಲ್ಲಿ ನುಡಿದುದನ್ನು, ಅರ್ಥ ಮಾಡಬಹುದು.

ಕಾಲ ಎಂಬುದು ಅಸ್ತಿತ್ವದಲ್ಲಿ ಲೌಕಿಕವಾಗಿ ಇದ್ದಂತೆ ಭಾಸವಾಗುತ್ತದೆ. ಈ ಕಲ್ಪನೆಯಿಂದ ಅಸಾಧಾರಣ ಪ್ರಗತಿಯನ್ನು ಲೌಕಿಕವಾಗಿ ಸಾಧಿಸಿದೆ, ಮಾನವ ಕುಲ. ಕಾಲ ಎಂಬುದು ಅಸ್ತಿತ್ವದಲ್ಲಿ ಇಲ್ಲವೇ ಇಲ್ಲ ಎಂದು ತಾತ್ವಿಕರೂ ಅನುಭಾವಿಗಳೂ ನುಡಿದಿದ್ದಾರೆ. ಲೌಕಿಕ ದೃಷ್ಟಿಯಿಂದ ಕಾಲದ ಭೌತಿಕ, ಜೀವಿಕ, ಮಾನಸಿಕ ಸ್ವರೂಪಗಳನ್ನು ಅರಿಯಲೆತ್ನಿಸಿದ್ದೇವೆ. ಅಲೌಕಿಕ ದೃಷ್ಟಿಯಿಂದ ಕಾಲದ ಮೇಲೆ ಧ್ಯಾನದ ಪ್ರಭಾವವೇನು

ಎಂಬುದನ್ನೂ ವಿಶ್ಲೇಷಿಸಿಯಾಯಿತು. ಲೌಕಿಕ, ಅಲೌಕಿಕ ಎರಡರಲ್ಲೂ ಸತ್ಪ್ರಭಾವವನ್ನು ಧ್ಯಾನವು ಪರಿಣಾಮಕಾರಿಯಾಗಿ ಬೀರುವುದನ್ನು ಕಂಡಿದ್ದೇವೆ.

ಆದಕಾರಣ ಧ್ಯಾನ ಶ್ಲೋಕವೊಂದನ್ನು ಉದ್ಧರಿಸಿ, ಅದರ ಅರ್ಥವನ್ನು ವೈಜ್ಞಾನಿಕವಾಗಿ ತಿಳಿಯಲು, ಕೊನೆಯದಾದ ಮಂಗಳ ಅಧ್ಯಾಯದಲ್ಲಿ ಯತ್ನಿಸುತ್ತೇನೆ.

# ಅಧ್ಯಾಯ-೭

## 1. ಮಂಗಳ ಅಧ್ಯಾಯ

ಎರಡು ಮೂರು ದಶಕಗಳಿಂದ 'ಕಾಲ' ಎನ್ನುವುದು ನನ್ನನ್ನು ಕೊರೆಯುತ್ತಲೇ ಇತ್ತು. ಇದರ ಆಳ ಮರ್ಮವನ್ನು ತಿಳಿದುಕೊಳ್ಳಬೇಕು ಎಂದು ಹೆಬ್ಬಯಕೆಯು ಉಂಟಾಯಿತು. ನನಗೆ ಇಂತಹ ತೆವಲು ಏಕೆ ಹಿಡಿಯಿತು ? ಎಂದು ನಾನೇ ವಿಶ್ಲೇಷಿಸಿಕೊಂಡೆ.

ಬಾಲಕನಾಗಿದ್ದಾಗ ಚಮೂ ದಳದಲ್ಲಿ ನಡೆದಾಗ, Marching Song ಅನ್ನು ಹೇಳಿಸುತ್ತಿದ್ದರು. ದೇವರಾಜ ಸೇವ್ಯಮಾನ ಪಾವನಾಂಘ್ರಿ ಪಂಕಜಂ ಇತ್ಯಾದಿ ಬಾಲ್ಯದಲ್ಲಿ ಕೇಳಿಸಿಕೊಂಡ ಹಾಡು ಹಸಿರಾಗಿ ಸ್ಮರಣೆಯಲ್ಲಿ ಉಳಿಯುವುದು ಸ್ವಾಭಾವಿಕ. ಬೃಹತ್ ಸ್ತೋತ್ರ ರತ್ನಾಕರದಲ್ಲಿದ್ದ ಪೂರ್ತಿ ಶ್ಲೋಕವನ್ನು ಬರೆದಿಟ್ಟುಕೊಂಡಿದ್ದೆ. ಹೆಸರು ಕಾಲಭೈರವಾಷ್ಟಕ.

ಅಲೆಕ್ಸಿಸ್ ಕ್ಯಾರೆಲ್ ಇನ Man the unknown ಎಂಬ ಪುಸ್ತಕವನ್ನು ಓದಿದಾಗ ಆ ವೇಳೆಗೆ ವೈದ್ಯನಾಗಿದ್ದ ನನಗೆ ತುಂಬಾ ಕುತೂಹಲವುಂಟಾಯಿತು. Biological Time ಎಂಬ ಅಧ್ಯಾಯವು ಸ್ಪಷ್ಟವಾಗಿ ತಿಳಿಯಲಿಲ್ಲ. ಸ್ವಂತವಾಗಿ ಯೋಚಿಸುವ ಶಕ್ತಿಯು ಇರದಿದ್ದರೂ ಪರವಾಗಿಲ್ಲ. ಆದರೆ ಇನ್ನೊಬ್ಬರು ಬರೆದುದನ್ನು ಅರ್ಥಮಾಡಿಕೊಳ್ಳುವ ಬುದ್ಧಿಯೂ ಇಲ್ಲವಲ್ಲಾ ಎಂದು ತುಂಬಾ ಖಿನ್ನವಾದೆ : ನನ್ನ Ego ಏಗೆ ಅಸಾಧ್ಯ ಪೆಟ್ಟು ಬಿತ್ತು.

ಆಗಲೇ ನಿಷ್ಕರ್ಷಿಸಿದೆ, 'ಕಾಲ'ದ ವಿಷಯವನ್ನು ಸಾಧ್ಯವಾದಷ್ಟು ಮಟ್ಟಿಗೂ ತಿಳಿದುಕೊಳ್ಳಬೇಕು, ಅಲೆಕ್ಸಿಸ್ ಕ್ಯಾರಲ್ ಬರೆದುದನ್ನು ಸಂಪೂರ್ಣವಾಗಿ ಅರ್ಥಮಾಡಿಕೊಳ್ಳಬೇಕು ಎಂದು. ಅನಂತರ ಅವಕಾಶವಾದಾಗಲೆಲ್ಲ, ಕಾಲದ ವಿಷಯದ ಪುಸ್ತಕಗಳನ್ನು ಓದತೊಡಗಿದೆ. ವ್ಯಾಸಂಗವನ್ನು ಮಾಡಿದೆ. ಆ ಪುಸ್ತಕಗಳಿಂದ ಟಿಪ್ಪಣಿಗಳನ್ನು ಬರೆದುಕೊಂಡೆ. ಆದರೆ ಪುಸ್ತಕಗಳ ಹೆಸರು ಇತ್ಯಾದಿಗಳನ್ನು ಬರೆದಿಡಲು ಮರೆತೆ. ಕೆಲವನ್ನು ಬರೆದಿಟ್ಟೆ. ಆದರೆ ಬರೆದಿಟ್ಟ ನೋಟ್ ಬುಕ್ಕು ಮಾಯವಾಗಿಬಿಟ್ಟಿದೆ. ಆದಕಾರಣ.

ಗ್ರಂಥಋಣವನ್ನು ಒಪ್ಪಿಕೊಳ್ಳಲೂ ಅಶಕ್ತನಾಗಿದ್ದೇನೆ. ಆದರೆ ಒಂದು ಒಪ್ಪಿಗೆಯನ್ನು ಧೈರ್ಯದಿಂದ ನೀಡುತ್ತೇನೆ. ಈ ಪುಸ್ತಕದಲ್ಲಿ ನನ್ನದು ಎಂದು ಹೇಳಿಕೊಳ್ಳುವ ವಿಷಯವೊಂದೂ ಇಲ್ಲ. ಇತರರು ಹೇಳಿದುದನ್ನು ತಪ್ಪು ಅರ್ಥ ಮಾಡಿಕೊಂಡು ಅಪಚಾರವನ್ನೆಸಗಿರಬಹುದು. ಅಜ್ಞಾನಕ್ಕಾಗಿ ಕ್ಷಮೆ ಬೇಡಬೇಕಾಗಿಲ್ಲ. ಶ್ರದ್ಧೆ ಇಲ್ಲದಿದ್ದರೆ ಕ್ಷಮಾಯಾಚನೆ ಸೂಕ್ತ. ಕಾರಣ ಕ್ಷಮೆ ಬೇಡಲೂ ಮನಸ್ಸು ಇಲ್ಲ.

ಈಗ ಅಲೆಕ್ಸಿಸ್ ಕ್ಯಾರೆಲ್ ಇನ ಕಾಲದ ಅಧ್ಯಾಯವು ಸಾಕಷ್ಟು ಸ್ಪಷ್ಟವಾಗಿದೆ, ನನಗೆ. ಆತನ ಕಾಲಕ್ಕಿಂತ ಇಂದು ಮಾನವನ ಜ್ಞಾನಭಾಂಡಾರವು ಬಹಳ ಹೆಚ್ಚಾಗಿದೆ. ಆದಕಾರಣ ಹೆಚ್ಚು ವಿಷಯಗಳನ್ನು ಈ ಹೊತ್ತಗೆಯಲ್ಲಿ ಸೇರಿಸಲು ಸಾಧ್ಯವಾಗಿದೆ. ಇಷ್ಟೆಲ್ಲಾ ಶ್ರಮಪಟ್ಟು, ಕಷ್ಟಪಟ್ಟು ಏಕೆ ಒದ್ದಾಡಿದೆ ಎಂದು ಪಶ್ಚಾತ್ತಾಪವಾಯಿತು. ಶ್ರಮ, ಕಷ್ಟಗಳನ್ನು ಓದುಗರಿಗೆ ಹಂಚಿಬಿಟ್ಟರೆ, ನನ್ನ ಪಶ್ಚಾತ್ತಾಪವು ನಿರ್ಮೂಲವಾಗುತ್ತದೆ ಎಂದು ತೋರಿದುದರಿಂದ ಪುಸ್ತಕದ ರೂಪದಲ್ಲಿ ಪ್ರಕಟಿಸುತ್ತಿದ್ದೇನೆ.

ಮಂಗಳ ಧ್ಯಾನ ಶ್ಲೋಕಕ್ಕೆ, ಕಾಲಭೈರವಾಷ್ಟಕವನ್ನು ಆರಿಸಿಕೊಂಡಿದ್ದೇನೆ. ಇದರ ಅರ್ಥವನ್ನು ಬರೆಯುವಾಗ ನನ್ನ ಊಹಾಪೋಹಗಳಿಗೆ ಅನಿರ್ಬಂಧಿತ ಅವಕಾಶವನ್ನು ಕೊಟ್ಟಿದ್ದೇನೆ. ಈ ತನಕ ಸಿದ್ಧಾಂತವಾದಗಳನ್ನು ಮಾತ್ರ ಲೇಖಿಸಿದೆ. ಈಗ ತೋಚಿದುದನ್ನು ಬರೆಯುವ ಸ್ವಾತಂತ್ರ್ಯವನ್ನು ವಹಿಸಿಕೊಳ್ಳುತ್ತೇನೆ.

2. ಕಾಲಭೈರವಾಷ್ಟಕಂ

ದೇವರಾಜ ಸೇವ್ಯಮಾನ ಪಾವನಾಂಘ್ರಿ ಪಂಕಜಂ
ವ್ಯಾಲ ಯಜ್ಞ ಸೂತ್ರಮಿಂದುಶೇಖರಂ ಕೃಪಾಕರಂ
ನಾರದಾದಿ ಯೋಗಿವೃಂದ ವಂದಿತಂ ದಿಗಂಬರಂ
ಕಾಶಿಕಾ ಪುರಾಧಿನಾಥ ಕಾಲಭೈರವಂ ಭಜೇ ||೧||

ಕಾಶಿಕಾಪುರವು, ಅಂದರೆ ಇಂದಿನ ವಾರಣಾಸಿಯು, ವಿಶ್ವೇಶ್ವರನ ಆವಾಸ ಸ್ಥಾನ ಎಂದು ಜನರ ನಂಬಿಕೆ. ಪುರಾತನ ಕಾಲದಿಂದಲೂ ಕಾಶಿಯು ಪಾಂಡಿತ್ಯದ ತೌರೂರಾಗಿತ್ತು. ಸ್ಥಳ ಮಹಾತ್ಮ್ಯೆಯು ಈಗಲ್ಲಿ ಉಳಿದಿದೆಯೋ ಇಲ್ಲವೋ, ಹಿಂದಿನ ಕಾಲದಲ್ಲಿ ಅಂತೂ ಇದ್ದೇ ಇದ್ದಿತು. ವಿಶ್ವದ ಈಶ್ವರನ ವಿಶ್ವೇಶ್ವರನ,

ಅನ್ವರ್ಥ ವರ್ಣನೆಯು ಕಾಶಿಕಾಪುರಾಧಿನಾಥ ಎಂದು. ಇನ್ನೊಂದು ಹೆಸರು ಕಾಲ–ಭೈರವ ಎಂದು, ಆ ಹೆಸರಿನ ದೇವಾಲಯವೂ ಅಲ್ಲಿದೆ. ಆ ಕ್ಷೇತ್ರದಲ್ಲಿ ಸತ್ತವರಿಗೆ ಸ್ವರ್ಗಪ್ರಾಪ್ತಿಯಾಗುತ್ತದೆ. ಅಥವಾ ಮೋಕ್ಷವು ಸಿಕ್ಕಿ ಪುನರ್ಜನ್ಮವಿರುವುದಿಲ್ಲ ಎಂದು ಒಂದು ಕಾಲದಲ್ಲಿ ಬಹುಮಂದಿ ನಂಬಿದ್ದರು. ಈಗಲೂ ಆ ನಂಬಿಕೆಯನ್ನು ಹೊಂದಿದವರ ಸಂಖ್ಯೆ ಕಡಿಮೆ ಏನಿಲ್ಲ. ಆ ಕಾರಣದಿಂದ ಸಾಯುವುದಕ್ಕೆಂದೇ ಜನರು ಕಡೆಗಾಲದಲ್ಲಿ ಆ ಕ್ಷೇತ್ರಕ್ಕೆ ಹೋಗಿ ವಾಸಿಸುತ್ತಿದ್ದರು. ಅಂದ ಮೇಲೆ ಸಾಯುವವರ ಸಂಖ್ಯೆಯು ಗಮನೀಯವಾಗಿದ್ದಿರಬೇಕು. ಕಾಲದವರು ಕಾಲಭೈರವನ ಕೃಪೆಯನ್ನು ಪಡೆದವರು ಎಂದು ಮಂದಿ ನಂಬಿದ್ದ ಒಂದು ಕಾಲದಲ್ಲಿ ಶಿವನು ಭೈರವನಂತೆ, ಭಯಾನಕ ರೂಪದಲ್ಲಿ ಕಾಣಿಸಿರಬೇಕು. ಆ ರೂಪದಲ್ಲಿ ಭಜಿಸತೊಡಗಿರಬೇಕು, ಮೋಕ್ಷಾಪೇಕ್ಷಿಗಳು, ಮತ್ತು ನಂಬಿಕೆಯು ಧೃಡವಾಗಿದ್ದವರು.

ಕಾಲವಾಗುವುದು ಅಥವಾ ಮರಣ ಹೊಂದುವುದು ಸಾಮಾನ್ಯವಾಗಿ ಭಯವನ್ನು ಹುಟ್ಟಿಸುತ್ತದೆ. ಆದುದರಿಂದ ಕಾಲಭೈರವ ಎಂದನ್ನುವುದು ಸಹಜ. ಈ ಹೆಸರನ್ನು ಲಯಕಾರಣನಾದ ಶಿವನಿಗೆ ಅನ್ವಯಿಸುವುದು ಬಹಳ ಹಿಂದಿನಿಂದಲೂ ಬಂದಿರಬೇಕು. ಕಾಶಿಯ ಕ್ಷೇತ್ರ ಮಹಿಮೆಯು ಪ್ರಾರಂಭವಾದಾಗ ಆ ಪುರದ ಆದಿನಾಥನು ಕಾಲಭೈರವ ಎಂದಾಗಿರಬಹುದು.

ಇಂತಹ ಕಾಲಭೈರವನು, ನಿಷ್ಪಕ್ಷಪಾತಿಯಾಗಿದ್ದು ದೇವರಾಜನನ್ನೂ ಬೆದರಿಸಬೇಕು. ದೇವರುಗಳು ಅರಸನಿಗೂ ಸ್ಥಳ ಪಲ್ಲಟವಾಗಿ ಹೊಸ ಇಂದ್ರನು ಸ್ವರ್ಗಾಧಿಪತಿಯಾಗುತ್ತಾನೆ ಎಂಬುದೂ ಒಂದು ಪುರಾತನ ನಂಬಿಕೆ. ಅವನ ಅಧಿಕಾರವನ್ನು ಕಾಲಭೈರವನು ಕೊನೆಗಾಣಿಸಲು ಸಾಧ್ಯ. ಆದ್ದರಿಂದ ದೇವೇಂದ್ರನೂ ಕಾಲಭೈರವನನ್ನು ಸೇವೆ ಮಾಡಲೇಬೇಕು.

ಇಂತಹ ಶಿವನು, ಇಂದುಶೇಖರನು, ವ್ಯಾಲ ಅಂದರೆ ಕಾಲದ ಸಂಕೇತವಾದ ಸರ್ಪವನ್ನು ಯಜ್ಞ ಸೂತ್ರವನ್ನಾಗಿ ಜನಿವಾರವನ್ನಾಗಿ ಧರಿಸಿದ್ದಾನಂತೆ. ಕಾಲಭೈರವನ ಬ್ರಹ್ಮ ಮತ್ತು ಕ್ಷಾತ್ರ ತೇಜಸ್ಸಿಗೆ, ಯಜ್ಞಸೂತ್ರವು ಸಂಕೇತ.

ಯೋಗಿಗಳು, ನಾರದಾದಿಗಳು, ಮನೋಽತೀತ ಕಾಲದ ಅನುಭವವನ್ನು ಪಡೆದವರು, ಅಂತಹ ಅವಿನಾಶಿಯಾದ ಕಾಲದ ಚಲನವನ್ನು ಪ್ರಬೋಧಿಸಿದ ಆದಿಮೂಲದ (ಪುರುಷ ಎಂದು ಆದಿಮೂಲವನ್ನು ಹೆಸರಿಸಿದ್ದರು) ಅರಿವನ್ನೂ

ಹೊಂದಿರಬೇಕು. ತಾದಾತ್ಮ್ಯವನ್ನೂ ಅದರೊಂದಿಗೆ ಸಾಧಿಸಿರಬೇಕು. ಪಂದಿಸಲೂ ಇರಬೇಕು, ಇಂತಹ ದಿವ್ಯ ಅನುಭವವನ್ನು ಕರುಣಿಸಿದ ಆದಿಮೂಲವನ್ನು.

ಕಾಲಭೈರವನು ದಿಕ್ ಅಂಬರನಂತೆ. ದಿಕ್ ಎಂಬುದು ದೇಶದ ಅಥವಾ Spaceನ ಗುಣವೊಂದನ್ನು ವಿವರಿಸುವ ಪದ. ಕಾಲನು ದೇಶ ವನ್ನು ಕರ್ಣನ ಕವಚದಂತೆ ಧರಿಸಿದ್ದವನು. ಕಾಲ ಮತ್ತು ದೇಶಗಳು ಒಂದಾಗಿದ್ದುವು. Space-Time Continuum ಎನ್ನುವುದಕ್ಕಿಂತ ಧಿಕ್ ಅಂಬರ, ದಿಗಂಬರ ಎಂದರೆ ಹೆಚ್ಚು ಲಕ್ಷಣವಾಗಿರುತ್ತದೆ, ಕಾಲಾನುಕಾಲ ದಲ್ಲಿ ದಿಗಂಬರ ಎನ್ನುವ ಪದವು ವ್ಯೆಯಕ್ತಿಕವಾಗಿ ಬಳಸಲ್ಪಟ್ಟಾಗ, ದೇಶ ಅಥವಾ Space ಅನ್ನು ಹೊದ್ದುಕೊಂಡವರು. ಬಟ್ಟೆ ಉಡುಪುಗಳು ಅನಗತ್ಯ ವೆಂದವರು ಎನ್ನುವ ಅರ್ಥವು ಬಂದಿದೆ. ವ್ಯೆಯಕ್ತಿಕ ಬಳಕೆಯನ್ನು ಬಿಟ್ಟು ಬ್ರಹ್ಮಾಂಡದ ಕಲ್ಪನೆಗೆ ಅನ್ವಯಿಸುವಾಗ ದಿಗಂಬರ ಎನ್ನುವುದು ವೈಜ್ಞಾನಿಕ ವಾಗಿಯೂ ಅರ್ಥಪೂರ್ಣ ಎಂದೆನಿಸುತ್ತದೆ.

ಭಾನುಕೋಟಿ ಭಾಸ್ವರಂ ಭವಾಬ್ಧಿತಾರಕಂ ಪರಂ
ನೀಲಕಂಠಂ ಈಪ್ಸಿತಾರ್ಥದಾಯಕಂ ತ್ರಿಲೋಚನಂ
ಕಾಲ ಕಾಲಂ ಅಂಬುಜಾಕ್ಷಂ ಅಕ್ಷ ಶೂಲಂ ಅಕ್ಷರಂ
ಕಾಶಿಕಾ ಪುರಾಧಿನಾಥ ಕಾಲ ಭೈರವಂ ಭಜೇ ॥೨॥

ಪ್ರಾಪಂಚಿಕ ನಮ್ಮ ಬಾಳಿನಲ್ಲಿ, ಭೂಲೋಕದಲ್ಲಿ; ಸೂರ್ಯನು ಅತಿ ಮುಖ್ಯವಾದ ಸಾಕ್ಷಾತ್ ಕಾಣುವ ವಸ್ತು, ಆತನ ಕಿರಣಗಳಿಂದ ಸಸ್ಯಗಳು ಜೀವಂತವಾಗಿವೆ. ಆತನ ಕಾಣುವಿಕೆ. ಅದೃಶ್ಯವಾಗುವಿಕೆ ಇವುಗಳಿಂದ ಅಹೋ ರಾತ್ರಿಗಳು ವಿಂಗಡಿಸಲ್ಪಟ್ಟಿವೆ. ಈ ವಿಂಗಡಣೆಯೇ ಭೂಲೋಕದ ಎಲ್ಲ ಜೀವಿಗಳ ಬಾಳಿನ ವ್ಯವಸ್ಥೆಗೆ ಮೂಲವಾಗಿದೆ. ಸೂರ್ಯನ ಬೆಳಕಿನ ಮುಂದೆ ಯಾವ ಬೆಳಕು ತಾನೆ, ಅಣು ವಿಜ್ಞಾನವು ವೃದ್ಧಿಯಾಗುವ ತನಕ, ಇದ್ದಿತು? ಇಂತಹ ಪ್ರಕಾಶದ ಕೋಟಿಯಷ್ಟು ಎಂದು ಕಾಲಭೈರವನನ್ನು ವರ್ಣಿಸಿದರು, ಕವಿಗಳು. ಮನೋತೀತ ಕಾಲವನ್ನು ಪ್ರಚೋದಿಸುವ ಆದಿ ಮೂಲವು ಲೌಕಿಕ ಕಾಲವನ್ನು ಗುರುತಿಸುವ ಸೂರ್ಯನಿಗಿಂತಲೂ ಕೋಟಿ ಕೋಟಿ ಭಾಸ್ವರಂ ಅಂದರೆ ಪ್ರಕಾಶಮಾನವಾಗಿರಬೇಕು, ಪ್ರಭಾವ ಶಾಲಿ ಯಾಗಿರಬೇಕು.

ಭಾವಾಬ್ಧಿ ಸಾಗರದಂತಿರುವ ಈ ಲೋಕದಲ್ಲೂ ಮತ್ತು ಪರಂ, ಸಾವಿನಾಚೆಯ ಊಹಾ ಲೋಕದಲ್ಲೂ, ತಾರಕಂ ಮಂಗಳದಾಯಕನೂ, ಸುರಕ್ಷಿತವಾಗಿ ನಡಸುವವನು, ಕಾಲಭೈರವನೇ.

ದೇಹ ಮತ್ತು ಮನೋಕಾಲಗಳ ಕೊಂಕು ಡೊಂಕು ಗತಿಗಳನ್ನೂ, ಮನೋsತೀತ ಕಾಲದ ನೇರ ಹರಿಯುವಿಕೆಯನ್ನೂ ಸಮನ್ವಯಗೊಳಿಸು ವವನು ಕಾಲಭೈರವ.

ಈಪ್ಸಿತಾರ್ಥ ದಾಯಕಂ. ಬೇಡಿದುದನ್ನು ನೀಡುವವನು ಎಂದರ್ಥ. ಧ್ಯಾನದಿಂದ ಮನೋಕಾಲದ ಗತಿಯನ್ನು ಹದಗೊಳಿಸಿದರೆ ಯಾವ ಇಷ್ಟಾರ್ಥ ಸಿದ್ಧಿಗಾಗಿ ಇಷ್ಟದೇವತೆಯನ್ನು ಪ್ರಾರ್ಥಿಸಿ ಧ್ಯಾನಿಸುತ್ತೇವೆಯೋ, ಆ ದೇವತೆಯೇ ಆ ಇಷ್ಟಾರ್ಥವನ್ನು ನೆರವೇರಿಸಿಕೊಡುತ್ತದೆ. ಹೀಗಾಗುವುದನ್ನು ಹಿಂದೆಯೇ ವಿವರಿಸಲಾಗಿದೆ.

ಅಕ್ಷ ಶೂಲಂ. ಎಲ್ಲೆಲ್ಲಿಯೂ ಒಳ ನುಗ್ಗುವ ಗುಣವನ್ನು ಅಕ್ಷ ಎನ್ನು ತ್ತಾರೆ. ಕಾಲಭೈರವನ ಶೂಲವು, Penetrates and Pervades, everything and everywhere(Monier Williams ಅಕ್ಷ್.)

ಅಕ್ಷರಂ ಎಂದರೆ ಕ್ಷರವಲ್ಲದುದು, ನಾಶವಿಲ್ಲದುದು. ಕಾಲಕಾಲವಿದು.

ತ್ರಿಲೋಚನಂ ಎರಡು ಕಣ್ಣುಗಳು ಪ್ರಾಪಂಚಿಕ ಅರಿವನ್ನು ಮೂಡಿಸು ತ್ತವೆ. ದೇಹ ಮತ್ತು ಮನೋಕಾಲದ ಗತಿಯನ್ನು ಕಾಣಿಸುತ್ತವೆ. ಆದರೆ ಮೂರನೆಯ ಕಣ್ಣನ್ನು ತೆರೆದರೆ, ಲೌಕಿಕವಾದ ಎರಡು ಕಣ್ಣುಗಳೂ ತತ್‌ಕ್ಷಣ ಮುಚ್ಚಿಕೊಳ್ಳುತ್ತವೆ. ಮೂರನೆಯ ಕಣ್ಣು ಮನೋsತೀತ ಕಾಲದ ಅನುಭವ ವನ್ನು ನೀಡುತ್ತದೆ. ಆ ಸ್ಥಿತಿಯಲ್ಲಿ ದೇಹ ಮತ್ತು ಮನೋಕಾಲದ ಅರಿವೇ ಇರುವುದಿಲ್ಲ. ಅಂದರೆ ಲೌಕಿಕದ ಅರಿವು ಭಸ್ಮವಾದಂತೆಯೇ.!

ಶೂಲಟಂಕ ಪಾಶದಂಡ ಪಾಣಿಂ ಆದಿಕಾರಣಂ
ಶ್ಯಾಮಕಾಯಂ ಆದಿದೇವಂ ಅಕ್ಷರಂ ನಿರಾಮಯಂ
ಭೀಮ ವಿಕ್ರಮಂ ಪ್ರಭುಂ ವಿಚಿತ್ರ ತಾಂಡವಪ್ರಿಯಂ
ಕಾಶಿಕಾ ಪುರಾಧಿನಾಥ ಕಾಲಭೈರವಂ ಭಜೇ ॥೩॥

ದೇಶದ ಕಾಲದ ಗತಿಯು ವಕ್ರವಕ್ರವಾದರೆ, ದೇಹದಲ್ಲಿನ ಅಂಗಗಳು ವಿಪರೀತ ನೋವನ್ನು ಅನುಭವಿಸುತ್ತವೆ. ಶೂಲದಿಂದ ಇರಿದಂತಾಗುತ್ತದೆ.

ಆ ಕಾರಣದಿಂದಲೇ ರೋಗಗಳ ಹೆಸರು ಕೂಡ ಪರಿಣಾಮ ಶೂಲೆ; ಗರ್ಭ ಶೂಲೆ, ಇತ್ಯಾದಿಯಾಗಿರುವುದು.

ಟಂಕ ಎಂದರೆ Hatchet ಅಥವಾ ಮಚ್ಚುಕತ್ತಿ ಎನ್ನಬಹುದು. ಕರುಳು ಹರಿಯುತ್ತದೆ ಎಂದಾಗ ಟಂಕದಿಂದ ಕತ್ತರಿಸಿದಂತೆ. ಕರಳುಬೇನೆಗಳಲ್ಲಿ ಈ ಚಿಹ್ನೆಯು ಸಾಮಾನ್ಯ.

ಪಾಶ ಎಂದರೆ ಭದ್ರವಾಗಿ ಹಿಡಿದು ಎಳೆಯುವುದು. ದುರಭ್ಯಾಸಗಳೆಲ್ಲವೂ ಪಾಶಗಳೇ. ದುರಭ್ಯಾಸಗಳು ಹೇಗೆ ಆರಂಭವಾಗುತ್ತವೆ ? ಇತರರನ್ನು ನೋಡಿ. ಅವಕಾಶವು ದೊರಕಿದಾಗ ಮೊದಲ ಸರ್ತಿ ಆರಂಭಿಸುತ್ತೇವೆ. ಹೊಸವಸ್ತುವು ದೇಹದ ವ್ಯವಸ್ಥೆಯನ್ನು ವ್ಯತ್ಯಾಸಮಾಡುತ್ತದೆ. ಅಂದರೆ ದೇಹದ ಕಾಲದ ಗತಿಯು ವಕ್ರವಾಗುತ್ತದೆ. ಅಭ್ಯಾಸವನ್ನು ಮುಂದುವರಿಸಿದರೆ, ದೇಹದ ಕಾಲವು ವಕ್ರಗತಿಯನ್ನು ತನ್ನದನ್ನಾಗಿ ಮಾಡಿಕೊಳ್ಳುತ್ತದೆ. ಪ್ರಕೃತಿ ಸಹಜ ವಾದ ದೇಹದ ಕಾಲಗತಿಗಿಂತ, ದುರಭ್ಯಾಸದ ದೇಹದ ಕಾಲಗತಿಯು ಹೆಚ್ಚು ಧೃಡವಾಗುತ್ತದೆ. ಪಾಶ ಹಾಕಿದಂತೆ, ದುರಭ್ಯಾಸಗಳು ದೇಹದ ವಕ್ರಕಾಲ ಗತಿಯನ್ನು ನಡೆಸತೊಡಗುತ್ತವೆ.

ದಂಡ, ಬಡಿಯಲು ಉಪಯೋಗಿಸುವ ಗದೆ ಅಥವಾ ದೊಣ್ಣೆ. ಚಚ್ಚಲು ಬಳಸುವ ಕೋಲು ಅಥವಾ ಕಟ್ಟಿಗೆ. ದೇಹದ ಕಾಲವು ಗತಿ ತಪ್ಪಿದಾಗ, ದಂಡದಿಂದ ಬಡಿದಂತೆ ಆಗುತ್ತದೆ. ತಲೆಯನೋವು ಅತಿಯಾದಾಗ ದೊಣ್ಣೆ ಯಿಂದ ಬಡಿದಂತೆ ಆಗುತ್ತದೆ. ಪಾದಚಾರಿಗಳಿಗೆಂದು ಮೀಸಲಾದ ಪಹರಿನ ದಾರಿಗಳಲ್ಲಿ ಬಿದ್ದರೆ, ಗದೆಯಿಂದ ಹೊಡೆದಂತೆ, ಚಪ್ಪಡಿಕಲ್ಲು ಚಚ್ಚುತ್ತದೆ.

ದೇಹದ ಕಾಲದ ಗತಿಯು ಅವ್ಯವಸ್ಥೆಗೊಂಡರೆ, ಶೂಲ, ಟಂಕ, ಪಾಶ, ದಂಡ, ಇವೆಲ್ಲವುಗಳಿಂದ ಅಗಬಹುದಾದ ಯಾತನೆಯು ಆಗುತ್ತದೆ.

ಮನೋಕಾಲದ ಗತಿಯು ಅವ್ಯವಸ್ಥೆಗೊಂಡರೆ, ಆತಂಕ ತಳಮಳ ಇತ್ಯಾದಿ ಗಳಿಂದ ಮನಸ್ಸು ಪಲ್ಲಟವಾಗುತ್ತದೆ. ಈಟಿಯಿಂದ ಇರಿದ ಹಾಗಾಗುತ್ತೆ; ಎಂದು ತೀವ್ರ ತಳಮಳದಿಂದ ನರಳುವ ರೋಗಿಗಳು ತಲೆತಲೆ ಚಚ್ಚಿಕೊಳ್ಳು ತ್ತಾರೆ. ತಲೆ ಶೂಲೆ ತಡೆಯುಕ್ಕಾಗುಲ್ಲ ಎಂದು ಗೋಪ್ಯವಾದ ಸವತಿ ಕಾಟ ವನ್ನು ಅನುಭವಿಸುವ ಮೊದಲ ಹೆಂಡತಿ ನರಳುತ್ತಾಳೆ.

ಎಳನೀರನ್ನು ಕೊಚ್ಚಿದ ಹಾಗೆ ನನ್ನ ತಲೇನ ಕೊಚ್ಚುಕ್ಕೆ ಕಾದಿದ್ದಾರೆ,

ಎಂದು ಪ್ಯಾರನಾಯ್ಡ್ ಬೇನೆಯಿಂದ ನರಳುತ್ತಿರುವವರು ಪುನಃ ಪುನಃ ಹೇಳುತ್ತಾರೆ.

ಒಬ್ಸೆಷನಲ್ ಬೇನೆಗಳಲ್ಲಿ, ಕಾಲುಗಳನ್ನು ಮೂರು ನಾಲ್ಕು ಬಾರಿ ಅಲ್ಲ, ನೂರು ಇನ್ನೂರು ಬಾರಿ ತೊಳೆಯುವ ದುರಭ್ಯಾಸವು, ರೋಗಿಯ ಹತೋಟಿಯನ್ನು ಮೀರಿರುತ್ತದೆ. ಪಾಶದಂತೆ ಸೆಳೆದು ಪುನಃ ಪುನಃ ಅದನ್ನೇ ಮಾಡುವಂತೆ ಒತ್ತಾಯ ಪಡಿಸುತ್ತದೆ.

ಹಿಸ್ಟಿರಿಯಾದಿಂದ ಸೊಂಟ ಬಿಗಿದುಕೊಂಡಿರುವವರು, ಸೊಂಟವನ್ನು ದೊಣ್ಣೆಯಿಂದ ಚಚ್ಚಿದಂತೆ ನೋವಾಗುತ್ತದೆ ಎಂದು ಒದ್ದಾಡುತ್ತಾರೆ.

ಅಂದರೆ ಮನೋಕಾಲದ ಗತಿಯ ವ್ಯತ್ಯಾಸದಲ್ಲಿಯೂ, ದೇಹದ ಕಾಲದ ಅವ್ಯವಸ್ಥೆಯಲ್ಲಿ ಕಾಣಬರುವ ಶೂಲ, ಟಂಕ, ಪಾಶ, ದಂಡಗಳ ಹಾವಳಿಯು ಇರುತ್ತದೆ.

ದೇಹ ಮತ್ತು ಮನೋಕಾಲದ ಗತಿಯನ್ನು ಅವ್ಯವಸ್ಥೆ ಮಾಡಿದುದರ ಫಲ. ಈ ನರಳುವಿಕೆಗಳು 'ಮನೋತೀತ ಕಾಲದತ್ತ ಮನಸ್ಸನ್ನು ನಡಸಲಿಲ್ಲ, ಪ್ರಾರ್ಥನೆಯ ಮೂಲಕ, ಧ್ಯಾನದ ಬಳಕೆಯಿಂದ ಪ್ರಯತ್ನಿಸಲಿಲ್ಲ,' ಎಂದು ಕಾಲ ಭೈರವನು ಕುಪಿತನಾಗಿ, ಶೂಲ, ಟಂಕ, ಪಾಶ, ದಂಡಗಳ ಪಾಣಿಯಾಗಿ ಶಿಕ್ಷೆಯನ್ನು ನೀಡಿ ಎಚ್ಚರಿಸುತ್ತಾನೆ. ಸಂಕಟಬಂದರೆ ವೆಂಕಟರಮಣ ಎನ್ನುವ ಪ್ರಸಿದ್ಧವಾದ ಅನುಭಾವೀ ನಾಣ್ಣುಡಿಯು ಈ ವಿಷಯವನ್ನು ಸ್ಪಷ್ಟಪಡಿಸುತ್ತದೆ.

ಆದಿ ಕಾರಣಂ :—ಮನೋತೀತ ಕಾಲದತ್ತ ಮನಸ್ಸನ್ನು ನಡೆವಂತೆ ಪ್ರಚೋದಿಸುವವನು ಆದಿಕಾರಣನೇ. ಆದಿ ಮೂಲವೇ, ವೇದಾಂತಿಗಳ 'ಬ್ರಹ್ಮ' ಕಲ್ಪನೆಯೇ.

ವಿಚಿತ್ರ ತಾಂಡವ ಪ್ರಿಯಂ :—ಮನೋತೀತ ಕಾಲದ ಅನುಭವವನ್ನು ಪಡೆದವರು ಲೌಕಿಕ ಪ್ರಪಂಚದಲ್ಲಿ ವರ್ತಿಸುವ ರೀತಿಯು ವಿಚಿತ್ರವಾದ ನರ್ತನೆಯಂತಿರುತ್ತದೆ. ಇಂತಹ ಪರಮ ಹಂಸರುಗಳು ಕಾಲಭೈರವನಿಗೆ ಅತಿ ಪ್ರೀತಿಯಾದವರು.

ಭಕ್ತಿಮುಕ್ತಿದಾಯಕಂ ಪ್ರಶಸ್ತ ಚಾರು ವಿಗ್ರಹಂ
ಭಕ್ತ ವತ್ಸಲಂ ಸ್ಥಿತಂ ಸಮಸ್ತಲೋಕ ವಿಗ್ರಹಂ

ವಿನಿಕ್ವಣನ್ ಮನೋಜ್ಞ ಹೇಮ ಕಿಂಕಿಣೀ ಲಸತ್ಕಟಿಂ
ಕಾಶಿಕಾ ಪುರಾಧಿನಾಥ ಕಾಲಭೈರವಂ ಭಜೇ ॥೪॥

ಭುಕ್ತಿ ಎಂದರೆ ಸುಖಪಡುವುದು, ಕಾಮ್ಯ ಪದಾರ್ಥಗಳನ್ನು ಅನುಭವಿಸಿದ ನಂತರ. ಆಹಾರವು ಮುಖ್ಯ ಉದಾಹರಣೆ. ದೇಹದ ಕಾಲಗತಿಯೂ, ಮನೋಕಾಲದ ಗತಿಯೂ ಸುಸೂತ್ರವಾಗಿ ನಡೆದಾಗ, ಕಾಮ್ಯಪದಾರ್ಥಗಳನ್ನು ಪಡೆದು ಅನುಭವಿಸಿ ಸುಖಪಡಲು ಸಾಧ್ಯ. ದೇಹದ ಕಾಲಗತಿಯು ತಪ್ಪಿ ಹೊಟ್ಟೆಯ ಶೂಲೆಯು ಬಂದರೆ, ಆಗ ಪರಮಾನ್ನವನ್ನು ಕೂಡ ತಿಂದು ಸುಖಪಡಲು ಆಗುವುದಿಲ್ಲ. ಅಂತೆಯೇ ಮಗುವಿಗೆ ಸನ್ನಿಪಾತಜ್ವರವು ಬಂದಿದ್ದಾಗ, ಮನೋಕಾಲದ ಗತಿಯು ತಪ್ಪಿ ಆತಂಕವುಂಟಾಗುತ್ತದೆ. ಆಗ ಗರಿಗರಿ ಬೋಂಡವನ್ನು ಕೊಟ್ಟರೂ ಬೇಡ ಎನ್ನಿಸುವುದಂತಿರಲಿ ಕೋಪವೇ ಉಕ್ಕುತ್ತದೆ, ಜೊಲ್ಲಿಗೆ ಬದಲಾಗಿ.

ದೇಹದ ಕಾಲಗತಿಯೂ, ಮನೋಕಾಲದಗತಿಯೂ ಸರಳವಾಗಿರಬೇಕಾದರೆ ಮನೋತೀತ ಕಾಲದ ಅರಿವನ್ನು ಪಡೆಯಲು ಉತ್ಸುಕರಾಗಿರಬೇಕು. ಉತ್, ಏಳುವುದು, ಎದ್ದೇಳುವುದು. ಉತ್ಸಾಹ ಎಂದರೆ ಎದ್ದೇಳಲು ಸಾಹಸ ಪಡುವುದು. ಸುಖವನ್ನು ಈ ಲೋಕದಲ್ಲಿ ಅನುಭವಿಸಬೇಕಾದರೆ, ಉತ್ಸುಕರಾಗಬೇಕು. ಮನೋತೀತ ಕಾಲದ ಅರಿವನ್ನು ಸದಾ ಸ್ಮರಣೆಯಲ್ಲಿ ಇಟ್ಟುಕೊಳ್ಳಲೇಬೇಕು. ಆಗ ದೇಹ ಮತ್ತು ಮನೋಕಾಲಗಳು ಸತ್ ಗತಿಯಲ್ಲಿ ನಡೆಯುತ್ತವೆ. ಸುಖವನ್ನು ಸಂಪೂರ್ಣವಾಗಿ ಅನುಭವಿಸಬಹುದು. ಭಕ್ತಿಯನ್ನು ಪಡೆಯಬಹುದು. ಮುಕ್ತಿ ಎಂದರೆ, ಸುಖವನ್ನು ಅನುಭವಿಸುವ ಜೀವದೊಂದಿಗೆ ಅವತರಿಸಿದ ಆಸೆಯಿಂದ, ಬಿಡುಗಡೆ ಹೊಂದುವುದು. ಮನೋತೀತ ಕಾಲದ ಅರಿವಿನಿಂದ ದಿವ್ಯವಾದ ನಿತ್ಯವಾದ ಶಾಶ್ವತವಾದ ದ್ವಂದ್ವಾತೀತ ಸುಖವನ್ನು ಸದಾ ಅನುಭವಿಸಬಹುದು.

ಈ ರೀತಿಯಲ್ಲಿ ಭುಕ್ತಿ ಮುಕ್ತಿ ಎರಡನ್ನೂ ಕರುಣಿಸುವವನು, ಕಾಲಭೈರವ.

ಕಾಲಭೈರವನು ಭಕ್ತವತ್ಸಲನು. ಮನೋತೀತ ಕಾಲದ ಅರಿವಿಗಾಗಿ ಶ್ರದ್ಧೆಯಿಂದ ಶ್ರಮಿಸುವವರು ಭಕ್ತರು. ಅವರಲ್ಲಿ ಕಾಲಭೈರವನಿಗೆ ಅಪಾರ ವಾತ್ಸಲ್ಯ. ಅಲ್ಲೇ ಅವನು, ಸ್ಥಿತನು. ಬೇರೂರಿರುತ್ತಾನೆ. ವಾತ್ಸಲ್ಯ ಎಂದರೆ

ವತ್ಸರಲ್ಲಿ ಮಕ್ಕಳಲ್ಲಿ ಜನ್ಮದಾದಿಯಿಂದ ತೋರಿಬರುವ ಮಮತೆ. ಮಂಮ ಎನ್ನುವುದು ನಾಶವಾಗಿ 'ತೇ' ಎಂದು ಹಂಬಲಿಸುವುದು.

ವಿನಿಕ್ವಣನ್ ಮನೋಜ್ಞ ಹೇಮ ಕಿಂಕಿಣೀ ಲಸತ್ (ವಿದ್ಯುತ್) ಕಟಿಂ (ಸೊಂಟ).

ಅರ್ಥಬಂಧಿತವಾದ ಪದಗಳು ಇಲ್ಲಿ ಅರ್ಥಾತೀತವಾದ, ಬಂಧನವನ್ನು ಕಳಚಿಕೊಂಡ, ಆಳ ಭಾವನೆಗಳ ಉದ್ ಗೀತವಾಗಿವೆ. ಉದ್ಧರಿಸುವ ಶಬ್ದ-ಬ್ರಹ್ಮವಾಗಿದೆ. ಮಿಂಚಿನ ಸೊಂಟ ಎಂದರೆ, ಉದ್ರೇಕಗೊಂಡ ದೇಹದ ಕಾಲ ಗತಿಯೂ ತನ್ನ ತಾನೇ ಆ ಕ್ಷಣದಲ್ಲಿ ಮರೆಯುವ ಮನಸ್ಸಿನ, ಅತಿಸುಲಭ ಸಾಧ್ಯವಾದ ಅನುಭವದ, ಕಾಲಗತಿಗೂ, ಮಿಂಚಿನ ಬಂಧನವಿದೆ. ಅಷ್ಟೇ ಪ್ರಾಜ್ವಲ. ಅಷ್ಟೇ ಕ್ಷಣಿಕ. ಆದರೆ ಸ್ಮರಣೆಯಲ್ಲಿ ಎಂದೂ ಉಳಿಯುವ ಚಿರಂಜೀವಿಯಾಗಿರುವ ವಿಶೇಷ ಅನುಭವ.

ಪದಗಳ ಅರ್ಥವನ್ನು ಬರೆಯ ಹೋಗುವುದು, ಒಟ್ಟು ಪಂಜ್ಞ್ತಿಯ ನಾದಬ್ರಹ್ಮನಿಗೆ ಅಪಚಾರವನ್ನು ಮಾಡಿದಂತಾಗುವುದು. ಆದಕಾರಣ, ಧ್ಯಾನಶ್ಲೋಕಾಷ್ಟಕವನ್ನು ನೀಡಿದ ಆದಿಶಂಕರನಿಗೆ ನಮೋ ! ಅಷ್ಟು ಸಾಕು.

ಧರ್ಮ ಸೇತು ಪಾಲಕಂ ತು ಅಧರ್ಮಮಾರ್ಗನಾಶಕಂ ।
ಕರ್ಮಪಾಶಮೋಚಕಂ ಸುಶರ್ಮದಾಯಕಂ ವಿಭುಂ ॥
ಸ್ವರ್ಣ ವರ್ಣ ಶೇಷಪಾಶ ಶೋಭಿತಾಂಗ ಮಂಡಲಂ।
ಕಾಶಿಕಾ ಪುರಾಧಿನಾಥ ಕಾಲ ಭೈರವಂ ಭಜೇ ॥ ೫ ॥

ಧರ್ಮ ಎಂದರೇನು ? ಧರ್ಮ, ದಾನ ಎಂದನ್ನುತ್ತೇವೆ. ನಮ್ಮದು, ನಾವು ಗಳಿಸಿದ್ದು, ನಮ್ಮ ಭವಿಷ್ಯಕ್ಕೆ, ನಮ್ಮ ಮಕ್ಕಳು ನಮ್ಮ ಮೊಮ್ಮಕ್ಕಳ ಭವಿಷ್ಯಕ್ಕೆ ನೆರವಾಗುವುದು, ಎಂದು ಲೋಭದಿಂದ ಪ್ರಚೋದಿತರಾಗಿ ಕೂಡಿಟ್ಟುದುದನ್ನು, ಸ್ವಂತ ಇಚ್ಛೆಯಿಂದ, ಸ್ವಪ್ರೇರಣೆಯಿಂದ ಇತರರಿಗೆ ಕೊಡುವುದು. ಇದನ್ನು ದಾನ ಧರ್ಮ ಎನ್ನುತ್ತೇವೆ. ದೇಹ ಮತ್ತು ಮನೋಕಾಲಗಳು ಲೌಕಿಕ ಜೀವನದಲ್ಲಿ ಮಗ್ನವಾದಾಗ ನಾನು ನನ್ನವರು ಎನ್ನುವ ಭಾವವು ಭದ್ರವಾಗಿ ಆವರಿಸಿಕೊಂಡಿರುತ್ತವೆ. ಕೋಟೆಯನ್ನು ಸುತ್ತಲೂ ಕಟ್ಟುತ್ತವೆ. ದಾನವನ್ನು ಮಾಡುವಾಗ, ಈ ಕೋಟೆಯಲ್ಲಿ ಮಮಕಾರದ ಸ್ವಯಂಕೃತ ಬಂಧನದಲ್ಲಿ; ಸ್ವಯಂಕೃತವಾಗಿಯೇ ಬಿರುಕು

ಬಿಡುತ್ತದೆ. ಮನೋಽತೀತ ಕಾಲದ ಅನುಭವವು ಕ್ಷಣವಾದರೂ ಉಂಟಾಗು ತ್ತದೆ. ಅದೇ ಧರ್ಮದ ಅರಿವಿನ ನಾಂದಿ. ಸ್ವಾರ್ಥ, ಪರಾರ್ಥ ತಾನು ಇತರರು, ಎನ್ನುವ ದಡಗಳೆರಡಕ್ಕೂ ಧರ್ಮ ದರ್ಶನವು ಸೇತುವೆಯನ್ನು ಕಟ್ಟುತ್ತದೆ. ಕಾಲ ಭೈರವನು ಇಂತಹ ಸೇತುವೆಯನ್ನು ಕಟ್ಟುತ್ತಾನಂತೆ.

ಧರ್ಮ ಎಂದಾಗ ಸಮಾಜದ ಸುಭದ್ರತೆಗಾಗಿ ಹಾಗೂ ವ್ಯಕ್ತಿಯ ಉದ್ಧಾರಕ್ಕಾಗಿ ಅಗತ್ಯವಾಗಿ ನಡಸಬೇಕಾದ ಆಚರಣೆ ಎನ್ನುವ ಗೂಢಾರ್ಥ ದಲ್ಲಿ ಬಳಸುತ್ತಾರೆ. ಈ ಅರ್ಥಕ್ಕೂ, ನಾನು ಬಳಸಿಕೊಂಡ ಆಡುಭಾಷೆಯ ಅರ್ಥಕ್ಕೂ ವಿರೋದವೇನೂ ಇರುವುದಿಲ್ಲ.

'ಕರ್ಮ' ಎನ್ನುವ ಪದಕ್ಕೂ 'ಧರ್ಮ'ದಂತೆಯೇ ಗೂಢಾರ್ಥವೂ ಇದೆ. ಜನ್ಮ ಜನ್ಮಾಂತರದ ಕರ್ಮ ಈ ಜನ್ಮದಲ್ಲಿ ಫಲವನ್ನು ನೀಡುತ್ತದೆ, ಎನ್ನುವ ಅರ್ಥವೂ ಉಂಟು. ಕರ್ಮ ಎಂದರೆ ನಾವು ಮಾಡಿದ್ದು. ಯಾವುದಾದರೂ ಕೆಲಸವನ್ನು ಮಾಡಿದರೆ, ಸಂಸ್ಕೃತಿಗೆ ಅನ್ವಯಿಸುವಂತೆ ಎರಡು ಪರಿಣಾಮಗಳು ಆಗುತ್ತವೆ ತಪ್ಪು ಮಾಡಿದೆ ಎನ್ನುವ guilt complex. ಒಳ್ಳೆಯದನ್ನು ಮಾಡಿದೆ ಎನ್ನುವ ಹಿಗ್ಗು. ಇವೆರಡೂ ಮನೋಕಾಲವನ್ನು ಏರು ಪೇರು ಮಾಡುತ್ತವೆ. ತಪ್ಪು, ಒಪ್ಪು-ಕುಗ್ಗಿ ಕೊರಗುವುದು ಹಿಗ್ಗಿ ಹೀರೇಕಾಯಾಗು ವುದು; ಇವೆರಡೂ 'ದುಃಖ–ಸುಖದಂತೆ ದ್ವಂದ್ವವಾದುವು. ಮನೋಽತೀತ ಕಾಲದಲ್ಲಿ ದ್ವಂದ್ವಕ್ಕೆ ಎಡೆಯೇ ಇಲ್ಲ. ಕಾಲ ಭೈರವನು ಕರ್ಮಪಾಶದ ಇವೆರಡೂ ಪರಿಣಾಮಗಳನ್ನು ಪರಿಹರಿಸುತ್ತಾನೆ. ಪರಿಣಾಮಗಳನ್ನು ಮೋಕ್ಷಿಸುತ್ತಾನೆಯೇ ಹೊರತು ಕರ್ಮವನ್ನಲ್ಲ. ಕರ್ಮದ ಪಾಶ ಎಂದರೆ ಕರ್ಮದ ಪರಿಣಾಮಗಳು, ಮನಸ್ಸಿನ ಮೇಲೆ, ಮನೋಕಾಲದ ಮೇಲೆ, ಈ ಅರ್ಥವೂ ಸಾಧಾರವಾದುದು.

ಸುಕರ್ಮ ಎಂದರೆ ಸು ರಕ್ಷಣೆ. ಕಾಲ ಭೈರವನು ಮನಸ್ಸಿಗೆ ಸುರಕ್ಷಣೆಯನ್ನು ದಯಪಾಲಿಸುತ್ತಾನೆ. ಮನೋಕಾಲವು ವಕ್ರವಾಗದಂತೆ ಕಾಪಾಡುತ್ತಾನೆ. ಮನಸ್ಸು ಯಾವ ಅತಿರೇಕಕ್ಕೂ ಒಳಪಡದಂತೆ ಸಂರಕ್ಷಿ ಸುತ್ತಾನೆ.

ರತ್ನಪಾದುಕಾಪ್ರಭಾ ಅಭಿರಾಮ ಪಾದ ಯುಗ್ಮಕಂ।
ನಿತ್ಯಂ ಅದ್ವಿತೀಯಂ ಇಷ್ಟ ದೈವತಂ ನಿರಂಜನಂ॥

ಮೃತ್ಯು ದರ್ಪ ನಾಶನಂ ಕರಾಲ ದಂಷ್ಟ್ರಮೋಕ್ಷಣಂ ।
ಕಾಶಿಕಾ ಪುರಾಧಿನಾಥ ಕಾಲಭೈರವಂ ಭಜೇ ॥ ೬ ॥

ನಿತ್ಯಂ, ಎಂದೆಂದೂ ಇರುವುದು. ಮನೋಽತೀತ ಕಾಲದಿಂದ ಅರಿಯುವ ಆದಿಮೂಲ, ಅದ್ವಿತೀಯಂ. ಇನ್ನೊಂದು ಎಂದೆಂದೂ ಇಲ್ಲದ್ದು, ದ್ವಂದ್ವಾತೀತ ಗುಣವಿರುವುದು. ಮನೋಽತೀತಕಾಲಕ್ಕೆ 'ಇಷ್ಟದೈವತಂ' ಪ್ರಾರ್ಥನೆಯನ್ನು ಮಾಡಿದಾಗ ಇಷ್ಟದೈವದ ವಿಷಯವು ಪ್ರಾಮುಖ್ಯವಾದುದು. ಇಷ್ಟಾರ್ಥ ಸಿದ್ಧಿಗಾಗಿ ಪ್ರಾರ್ಥನೆಯನ್ನು ಮಾಡುವುದು. ಮನೋಕಾಲವನ್ನು ನೇರ ಗತಿಯಲ್ಲಿ, ಸಾಧ್ಯವಾದಷ್ಟು ಮಟ್ಟಿಗೆ ನಡೆಸುವುದು. 'ಸಾಧ್ಯವಾದಷ್ಟು ಮಟ್ಟಿಗೆ' ಎನ್ನುವುದರಲ್ಲಿ, ಪ್ರಾರ್ಥನೆಯ ಮತ್ತು ಧ್ಯಾನದ ಅಂತರವು ಸ್ಪಷ್ಟ ವಾಗುತ್ತದೆ. ಸುತ್ತುಮುತ್ತಲೂ ಇರುವ ಸಾವಿರ ಜನರನ್ನು ನೋಡಿದರೆ, ಪ್ರಾಯಶಃ ಒಂಭೈನೂರು ತೊಂಭತ್ತು ಮಂದಿ ಪ್ರಾರ್ಥನೆಯನ್ನು ಮಾಡುವ ಯೋಗ್ಯತೆಯನ್ನು ಹೊಂದಿರುತ್ತಾರೆ. ಇನ್ನೊಂದು ಹತ್ತುಮಂದಿ ಧ್ಯಾನದ ಹಂತವನ್ನು ಮುಟ್ಟುವ ಅಧಿಕಾರವನ್ನು ಪಡೆದಿರುತ್ತಾರೆ, ಮನೋಽತೀತ ಕಾಲದ ಅರಿವನ್ನು ಅಥವಾ ಅನುಭವವನ್ನು ಹೊಂದುವವರ ಸಂಖ್ಯೆಯು ಈ ಹತ್ತರಲ್ಲಿ ಒಂದು ಆಗಿರಬಹುದು.

ಕಾಲಭೈರವನು ಆ ಒಬ್ಬನನ್ನು ಪ್ರೀತಿಸುತ್ತಾನೆ ಎಂಬುದನ್ನು ಹಿಂದಿನ ಶ್ಲೋಕದಿಂದ ತಿಳಿದೆವು. ಆದರೆ ಮಿಕ್ಕವರಿಗೆ "ಇಷ್ಟದೇವತೆ"ಯ ರೂಪ ದಲ್ಲಿ ನೆರವಾಗುತ್ತಾನೆ.

ಮೃತ್ಯು ದರ್ಪವು ಎಲ್ಲರಿಗೂ ತಿಳಿದುದೇ. ಎಲ್ಲ ಜೀವಿಗಳನ್ನು ಎಂದಾ ದರೂ ಒಂದು ಕಾಲದಲ್ಲಿ ಮೃತ್ಯುವು ತನ್ನ ಅಧೀನಕ್ಕೆ ವಶಪಡಿಸಿಕೊಳ್ಳುತ್ತಾನೆ. ಅಂದರೆ ದರ್ಪವಿರದೆ ಇರುತ್ತದೆಯೇ ? ಮೃತ್ಯುವಿನ ಬಾಯಿಗೆ ಬಿದ್ದಾಗ ಕರಾಲ ದಂಷ್ಟ್ರ ; ರಭಸದಿಂದ ಚಲಿಸುತ್ತಿರುವ ಭಯಾನಕ ಹಲ್ಲುಗಳ ಮಧ್ಯೆ ಬಿದ್ದಂತೆ. ಮನೋಕಾಲವಾಗಲಿ, ದೇಹದ ಕಾಲವಾಗಲಿ, ಅಳತೆಗೆ ಸಿಗುತ್ತವೆ. ಘಟನೆಗಳೆರಡು ನಡೆದಾಗ, ಅವುಗಳ ಅಂತರವೇ ಕಾಲ, ಅಂದರೆ ಹುಟ್ಟು, ಸಾವು, ಆಗ ಹಾಗಿತ್ತು, ಈಗ ಹೀಗಾಯಿತು ಎನ್ನುವ ಕ್ರಮವನ್ನು ಕಾಣು ತ್ತೇವೆ. ಅನಂತರ ಎನ್ನುವ ಪದದಲ್ಲಿ ಕ್ರಮದ ಅಸ್ತಿತ್ವವನ್ನು ಕಾಣಬಹುದು. ಅನಂತರದ ಘಟನೆಯು ಜೀವಿಗಳೆಲ್ಲದಕ್ಕೂ ಖಂಡಿತವಾದುದು ಮೃತ್ಯು.

ದೇಹ ಮತ್ತು ಮನೋಕಾಲಗಳಲ್ಲಿ ಮೃತ್ಯುವನ್ನು ತಪ್ಪಿಸಿಕೊಳ್ಳುವಂತಿಲ್ಲ.

ಮನೋತೀತ ಕಾಲದಲ್ಲಿಯಾದರೋ ಘಟನೆಗಳೇ ಇರುವುದಿಲ್ಲ; ಅಂದರೆ ಮೃತ್ಯುವೆಲ್ಲಿ ಬಂತು, ಹುಟ್ಟೇ ಇಲ್ಲದಾಗ! ಅಂದರೆ ಮನೋತೀತ ಕಾಲದ ಅವಸ್ಥೆಯಲ್ಲಿ ಇರುವಾಗ "ಮೃತ್ಯು"ವು ನಿಶ್ಚೇತನ, ದರ್ಪವೂ ಇಲ್ಲ, ಪ್ರಭಾವವೂ ಇಲ್ಲ. ಕರಾಳ ದಂಷ್ಟ್ರಗಳೂ ಇಲ್ಲ, ಅವುಗಳ ಮಧ್ಯೆ ಬೀಳುವುದೂ ಸಾಧ್ಯವಿಲ್ಲ.

ಅಟ್ಟಹಾಸ ಭಿನ್ನ ಪದ್ಮಜಾಂಡ ಕೋಶ ಸಂತತಿಂ
ದೃಷ್ಟಿಪಾತ ನಷ್ಟಪಾಪ ಜಾಲಮುಗ್ರಶಾಸನಂ
ಅಷ್ಟ ಸಿದ್ಧಿದಾಯಕಂ ಕಪಾಲಮಾಲಿಕಂ ಧರಂ।
ಕಾಶಿಕಾ ಪುರಾಧಿನಾಥ ಕಾಲಭೈರವಂ ಭಜೇ ॥೭॥

ಅಟ್ಟ ಎಂದರೆ ಎತ್ತರವಾದುದು. ಅತ್ಯುನ್ನತ ಮತ್ತು ಅತ್ಯುತ್ಕೃಷ್ಟವಾದುದು ಎಂದು ಅರ್ಥ, ಅಟ್ಟಹಾಸ ಎಂಬುದು ಪರಶಿವನ ಹೆಸರುಗಳಲ್ಲಿ ಒಂದು.

ಪದ್ಮಜ ಎಂದರೆ ಬ್ರಹ್ಮ. ಬ್ರಹ್ಮಾಂಡಕೋಶ ಸಂತತಿಯೆಲ್ಲವನ್ನೂ ಭಿನ್ನ ಎಂದರೆ ಚೂರುಚೂರಾಗಿಸಿ ನಾಶಪಡಿಸುವವನು, ಪರಶಿವ. ಇಷ್ಟ ದೇವತೆಯನ್ನು ಪ್ರಾರ್ಥಿಸುವವರು, ದೇಹ ಮತ್ತು ಮನೋಕಾಲದಲ್ಲಿ ಜೀವಿಸುತ್ತಿರುವವರು ಬ್ರಹ್ಮಾಂಡ ಕೋಶದ ಸಂತತಿಯವರು. ಇವರೆಲ್ಲರೂ ಒಂದಲ್ಲ ಒಂದು ಕಾಲದಲ್ಲಿ ಮೃತ್ಯುವಿನ ದವಡೆಗೆ ಸಿಗಲೇಬೇಕು. ಇಷ್ಟದೇವತೆಯ ರೂಪದಲ್ಲಿ ಮನೋತೀತ ಕಾಲದ ಪ್ರಚೋದಕನು ಕಾಣಿಸಿಕೊಂಡರೂ, ಹಾಗೆ ಕಾಣಿಸಿಕೊಳ್ಳುವಾಗ, ಆ ರೂಪಿಗೆ ಅವಧಿಯು ಉಂಟು. ಅವಧಿಯು ಮುಗಿದ ನಂತರ ಇಷ್ಟದೇವತೆಯೂ ಮೃತ್ಯುವಿನ ಪಾಲೇ. ಬ್ರಹ್ಮಾಂಡ ಕೋಶದ ಸಂತತಿಯೂ ಅಷ್ಟೇ.

ಕಾಲಭೈರವನ ದೃಷ್ಟಿ ಪಾತವಾದರೆ, ಅಂದರೆ ಮನೋತೀತ ಕಾಲದ ಅನುಭವವಾದರೆ, ಆಗ ಪಾದಜಾಲವೆಲ್ಲವೂ ನಷ್ಟವಾಗಿಬಿಡುತ್ತವೆ. ಆ ಅವಸ್ಥೆಯಲ್ಲಿ ಪಾಪ, ಪುಣ್ಯ ಎಂಬ ದ್ವಂದ್ವವೆಲ್ಲಿ ಬಂತು.

ಉಗ್ರಶಾಸನನು ಕಾಲಭೈರವ. ಶಾಸನ ಎಂದರೆ ಶಿಕ್ಷಿಸುವವನು ಹಾಗೂ ಶಿಕ್ಷಣವನ್ನು ಕೊಡುವವನು. ಮನೋತೀತ ಕಾಲದ ಅರಿವು ಅಥವಾ ಅನುಭವವು ಉಂಟಾಗಬೇಕಾದರೆ, ಧ್ಯಾನವು ಉಗ್ರವಾಗಿರಬೇಕು ಅಂದರೆ ಇತರ

ಯಾವ ಯೋಚನೆಗಳೂ ನುಸುಳಿ ಬರದಂತೆ ಧ್ಯಾನಿಸಬೇಕು. ಇಂತಹ ಧ್ಯಾನವನ್ನು ಮಾಡಬೇಕಾದರೆ, ವ್ಯಕ್ತಿಯ ಅಭ್ಯಾಸವು ಎಷ್ಟು ಅಗತ್ಯವೋ, ಅಷ್ಟೇ ಅಗತ್ಯ, ಕಾಲಭೈರವನ ಶಿಕ್ಷಣ : ಮನೋಽತೀತ ಕಾಲದ ಸೆಳೆವು. ಭಕ್ತವತ್ಸಲನಲ್ಲವೇ ಕಾಲಭೈರವ ; ಭಕ್ತರನ್ನು ಅಂದರೆ ಮನೋಽತೀತ ಕಾಲದ ಅನುಭವಕ್ಕಾಗಿ ಶ್ರದ್ಧೆ ಮತ್ತು ಸಂಯಮದಿಂದ ಧ್ಯಾನಿಸುವವರನ್ನು ಕಂಡರೆ, ಮಕ್ಕಳನ್ನು ಕಂಡಾಗ ಉಂಟಾಗುವ ವಾತ್ಸಲ್ಯವು, ಕಾಲಭೈರವನಲ್ಲಿ ಉಂಟಾಗುತ್ತದೆಯಂತೆ. ಮಕ್ಕಳನ್ನು ವಾತ್ಸಲ್ಯದಿಂದ ಎತ್ತಿಕೊಳ್ಳುವಂತೆ, ಧ್ಯಾನಾಸಕ್ತರನ್ನು ಕಾಲಭೈರವನು ಎತ್ತುತ್ತಾನೆ, (ಉತ್ ಧರ) ಉದ್ಧರಿಸುತ್ತಾನೆ. ಉಗ್ರವಾದ, ಎಂದರೆ ಘೋರವಾದ, ಬಲಶಾಲಿಯಾದ ಎಂಬಂತಹ ಅರ್ಥಗಳ ಜತೆಗೆ STRICT, ಅತ್ಯಂತ ಶಿಸ್ತು ಎನ್ನುವ ಅರ್ಥವೂ ಇದೆ. ಧ್ಯಾನಿಗಳನ್ನು ಶಿಸ್ತಿನಿಂದ, ಸಂಯಮದಿಂದ ನಡೆಸುತ್ತಾನೆ, ಉಗ್ರಶಾಸನ, ಕಾಲಭೈರವ.

ಅಷ್ಟಸಿದ್ಧಿದಾಯಕಂ, ಅಣಿಮ, ಮಹಿಮ, ಗರಿಮ, ಲಘಿಮ, ಪ್ರಾಪ್ತಿ, ಪ್ರಾಕಾಮ್ಯ, ಈಶತ್ವ ಮತ್ತು ವಶಿತ್ವಗಳು, ಅಷ್ಟಸಿದ್ಧಿಗಳು ಎಂದು ಪತಂಜಲಿಯವರು ವಿವರಿಸಿದ್ದಾರೆ. ಲೌಕಿಕ ಬಾಳಿನಲ್ಲಿ, ವಿಜ್ಞಾನದ ಇಂದಿನ ಹಂತದಲ್ಲಿ, ಇಂತಹ ಸಿದ್ಧಿಗಳನ್ನು ಪಡೆದು ಪ್ರದರ್ಶಿಸುವುದು ಅಸಾಧ್ಯ ಎಂದನ್ನಬೇಕು. ಆದರೆ ಇಂದಿನ ಲೌಕಿಕ ಬಾಳಿನಲ್ಲಿ, ಬಹು ವಿರಳವಾಗಿಯಾದರೂ ಕೆಲವರು ಇಂತಹ ಸಿದ್ಧಿಗಳನ್ನು ಪ್ರತ್ಯಕ್ಷವಾಗಿ ಪ್ರದರ್ಶಿಸುತ್ತಾರೆ. ಮನೋಽತೀತ ಕಾಲದ ಅನುಭವವನ್ನು ಪಡೆದವರಿಗೆ, ದೇಹ ಮತ್ತು ಮನೋಕಾಲದ ಮೇಲೆ ಸಂಪೂರ್ಣ ಸ್ವಾಧೀನವಿರುತ್ತದೆ. ಅಂದರೆ ವಿಚಿತ್ರ ತಾಂಡವವನ್ನು ಅಷ್ಟ ಸಿದ್ಧಿಗಳನ್ನು, ದೇಹದ ಮೂಲಕವಾಗಲೀ, ಮನಸ್ಸಿನ ಮೂಲಕದಿಂದಾಗಲೀ ಪ್ರದರ್ಶಿಸಲು ಸಾಧ್ಯ. ಇದು ವಿಚಾರಪೂರಿತ ಊಹೆ (Hypothesis) ಹೀಗನ್ನುವುದರಿಂದ ಜ್ಞಾನಭಂಡಾರವು ಹೆಚ್ಚುವುದಿಲ್ಲ. ಹೇಗೆ ಎಂಬುದನ್ನು ತಿಳಿದಂತಾಗುವುದಿಲ್ಲ. ಹಾಗೆ ತಿಳಿಸಬೇಕಾದರೆ, ಮನೋಽತೀತ ಕಾಲದ ಅನುಭಾವಿಗಳು ನುಡಿಯಬೇಕು. ಅಂತಹವರಿಗೆ ಅನುಭವವೇ ಸಂಪೂರ್ಣ ತೃಪ್ತಿಯನ್ನು ಕೊಡುತ್ತದೆ. ಕುತೂಹಲವು ಇರುವುದಿಲ್ಲ. ಅಂದಮೇಲೆ ಕುತೂಹಲದಿಂದ ಪ್ರಚೋದಿತವಾಗುವ ವಿಜ್ಞಾನವು ಅವರಿಗೆ ಬೇಕಿಲ್ಲ ! ತಿಳಿದವರು ನುಡಿಯುವುದಿಲ್ಲ. ನುಡಿಯುವವರಿಗೆ ತಿಳಿದಿರುವುದಿಲ್ಲ.

ಭೂತ ಸಂಘ ನಾಯಕಂ ವಿಶಾಲ ಕೀರ್ತಿದಾಯಕಂ ।
ಕಾಶಿವಾಸ ಲೋಕಪುಣ್ಯ ಪಾಪಶೋಧಕಂ ವಿಭುಂ ॥
ನೀತಿಮಾರ್ಗ ಕೋವಿದಂ ಪುರಾತನಂ ಜಗತ್ಪತಿಂ ।
ಕಾಶಿಕಾ ಪುರಾಧಿನಾಥ ಕಾಲಭೈರವಂ ಭಜೇ ॥೮॥

ಭೂತಸಂಘ. ಕೈಲಾಸದಲ್ಲಿ ಭೂತಗಣಗಳು ಪ್ರಜೆಗಳು. ಶಿವನ ಮನೆ ಕೈಲಾಸದಲ್ಲಿ. ಈ ಅರ್ಥವೇ ಮೊದಲು ಕಾಣಬರುವುದು.

ವಿಶ್ವರೂಪದ ದರ್ಶನವನ್ನು ಪಡೆದ ಅರ್ಜುನನು, ತಾನು ಕಂಡುದುದನ್ನು ವಿವರಿಸುವಾಗ

ಪಶ್ಯಾಮಿ ದೇವಾನ್ ತವ ದೇವ ದೇಹೇ

ಸರ್ವಂ ತಥಾ ಭೂತ ಗಣಾನಿ ಸಂಘಾನ್ ಎಂದು ಆರಂಭಿಸುತ್ತಾನೆ ; (ದೇವ) ಒಡೆಯನೇ ! (ತವ ದೇಹೇ,) ನಿನ್ನ ದೇಹದಲ್ಲಿ (ದೇವಾನ್) ದೇವರುಗಳನ್ನು (ಪಶ್ಯಾಮಿ) ಕಾಣುತ್ತೇನೆ. (ತಥಾ) ಹಾಗೆಯೇ (ಸರ್ವಂ)ಎಲ್ಲ (ಭೂತ ಗಣಾನಿ ಸಂಘಾನ್) ಭೂತ ಗಣಗಳ ಸಂಘಗಳನ್ನೇ (ಪಶ್ಯಾಮಿ) ಕಾಣುತ್ತೇನೆ.

ಕತ್ತಲು ರಾತ್ರಿಯಲ್ಲಿ, ಮೋಡಗಳಿಲ್ಲದಿರುವಾಗ, ಆಕಾಶವನ್ನು ನೋಡಿದರೆ, ಆಕಾಶಗಂಗೆಯು ನಕ್ಷತ್ರ ಸಮೂಹಗಳು, ಕೋಟ್ಯಂತರ ಕಾಣುತ್ತವೆ. Arcturus ಸ್ವಾತಿ ನಕ್ಷತ್ರದಿಂದ ಭೂಲೋಕಕ್ಕೆ ಬೆಳಕು ಹರಿದು ಬರಲು 38 ಕಿರಣವರ್ಷಗಳು Light years ಬೇಕಾಗುತ್ತದೆ. ಅಬ್ಬಾ ! ಎಷ್ಟು ದೂರ ! ನಕ್ಷತ್ರ ಮಂಡಲಗಳು ಕೆಲವು 2000 ಕಿರಣವರ್ಷಗಳು ಹರಿಯಬೇಕಾಗುತ್ತದೆ, ಭೂಲೋಕಕ್ಕೆ ಬರಲು !

ಇವೆಲ್ಲಾ ಭೂತ ಗಣಗಳ ಸಂಘವೇ ಹೌದು.

ಭೂಲೋಕದಲ್ಲಿ ಹಿಮಾಲಯ ಪರ್ವತವಿದೆ. ಎಷ್ಟು ಎತ್ತರ ಮತ್ತು ಎಷ್ಟು ದೊಡ್ಡದು ! ಸಾಗರಗಳ ಪ್ರಮಾಣವು ಅಚ್ಚರಿ ತರುತ್ತವೆ, ನಮ್ಮ ದೇಹದ ಪ್ರಮಾಣಕ್ಕೆ ಹೋಲಿಸಿದರೆ. ಇವೆಲ್ಲವೂ ಭೂತಗಣಗಳ ಸಂಘವೇ.

ಇಂತಹ ಭೂತ ಸಂಘಗಳ ನಾಯಕ, ಕಾಲಭೈರವ. ಮನೋತೀತ ಕಾಲದ ಅನುಭವವಾದವರಿಗೆ ಭೂತ ಸಂಘಗಳ ಅರಿವೂ ಉಂಟಾಗುತ್ತದೆ ಅವುಗಳ ನಾಯಕನ ಅರಿವು ಮೂಡಿದ ಮೇಲೆ.

ಕಾಶಿಯ ಸ್ಥಳ ಮಹಾತ್ಮ್ಯೆಯಿಂದ, ದೇಹ ಮತ್ತು ಮನೋಕಾಲಗಳ ಏರು

ಪೇರು ಕಡಿಮೆಯಾಗುತ್ತದೆ. ಅಂದರೆ ದೇಹ ಮತ್ತು ಮನಸ್ಸು ಹೆಚ್ಚು ನೆಮ್ಮದಿಯಿಂದ ಇರಲು ಅನುಕೂಲ. ಪಾಪವನ್ನು ಮಾಡಿದೆ ಎಂದು ಕುಗ್ಗಿ ಕೊರಗುವುದು, ಮತ್ತು ಪುಣ್ಯವನ್ನು ಮಾಡಿದೆ ಎಂದು ಹಿಗ್ಗುವುದು, ಇವೆರಡೂ ತಪ್ಪುವಂತೆ ಕಾಶಿಯ ಸ್ಥಳಮಹಾತ್ಮೆಯು ಹದಗೊಳಿಸುತ್ತದೆ. ಹೀಗಾಗುವುದು ಕಾಶಿಯ ನಾಥನಾದ, ಕಾಲಭೈರವನ ಕೃಪೆಯಿಂದ.

ಕಾಲಭೈರವಾಷ್ಟಕಂ ಪಠಂತಿಯೇ ಮನೋಹರಂ ।
ಜ್ಞಾನ ಮುಕ್ತಿ ಸಾಧನಂ ವಿಚಿತ್ರ ಪುಣ್ಯವರ್ಧನಂ ॥
ಶೋಕ ಮೋಹ ದೈನ್ಯ ಲೋಭ ಕೋಪ ತಾಪ ನಾಶನಂ।
ತೇ ಪ್ರಯಾಂತಿ ಕಾಲಭೈರವಾಂಘ್ರಿ ಸನ್ನಿಧಿಂ ಧ್ರುವಂ॥೯॥

ವಿಜ್ಞಾನದ ಮತ್ತು ಅನುಭವಗಳಿಂದ "ಕಾಲ" ದ ಅರಿವನ್ನೂ ಪಡೆಯಲು ಯತ್ನಿಸಿ, ದೇಹಕಾಲ, ಮನೋಕಾಲ ಮತ್ತು ಮನೋಽತೀತ ಕಾಲಗಳನ್ನು ತಿಳಿಯುವ ಪ್ರಯತ್ನವು ಕಾಲಭೈರವಾಷ್ಟಕವನ್ನು ಪಠಿಸಿದಂತೆಯೇ. ಈ ಅಧ್ಯಯನವು ಮನೋಹರವಾದುದು, ಮನಸ್ಸನ್ನು ಸೆರೆಹಿಡಿಯುತ್ತದೆ, ಜ್ಞಾನವನ್ನು ನೀಡುತ್ತದೆ. ಮನೋಽತೀತ ಕಾಲದ ಅನುಭವವು ದ್ವಂದ್ವ ಪ್ರಪಂಚದಿಂದ ಮುಕ್ತಿಯನ್ನು ಸಾಧಿಸಿಕೊಡುತ್ತದೆ. ಆಗ ಶೋಕ, ಮೋಹ, ದೈನ್ಯ, (Inferiority complex) ಲೋಭ ಕೋಪ, ತಾಪ, ಇತ್ಯಾದಿ ಮನೋವಿಕಾರಗಳು ಉಂಟಾಗುವುದಿಲ್ಲ.

ಅಂದರೆ ಕಾಲಭೈರವನ ಸಾಕ್ಷಾತ್ಕಾರವು, ಮತ್ತು ಅನುಭಾವಿಯದ ಅರಿವೂ ಉಂಟಾಗುತ್ತದೆ.

ಪುನರುಕ್ತಿಯನ್ನು, ಹೇಳಿದನ್ನೆ ಹೇಳುವುದನ್ನು, ಹೆಚ್ಚು ಪ್ರಮಾಣದಲ್ಲಿ ಬಳಸಿಕೊಂಡಿದ್ದೇನೆ. ಧ್ಯಾನ ಶ್ಲೋಕಗಳನ್ನು ಮೇಲಿಂದ ಮೇಲೆ ಜಪಿಸುವುದು, ಮನಸ್ಸಿಗೆ ನೆಮ್ಮದಿಯನ್ನು ಕೊಡುವ ವಿಧಾನ. ಪುರಾತನ ಕಾಲದಿಂದಲೂ ಮಾನವನ ಅನುಭವವು ಈ ವಿಧಾನವನ್ನು ಒಪ್ಪಿಕೊಂಡಿದೆ. ಆದುದರಿಂದ ಪುನರುಕ್ತಿಯನ್ನು ಬಳಸಿಕೊಂಡಿದ್ದೇವೆ.

ಈ ಹೊತ್ತಗೆಯನ್ನು ಓದುವವರಿಗೆಲ್ಲರಿಗೂ ಕಾಲಭೈರವನ ಕೃಪೆಯು ಮತ್ತು ಅರಿವು ದೊರೆಯಲಿ ಎಂದು ಮನಸಾ ಪ್ರಾರ್ಥಿಸುತ್ತೇನೆ. ಅಂತೂ ಮನಮುಟ್ಟಿ ಧ್ಯಾನಿಸುತ್ತೇನೆ.

